# ಪ್ರಬೋಧ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**www.thraithashakam.org**





# ಪ್ರಬೋಧ

ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (74) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**




ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)
(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016
ಪ್ರತಿಗಳು : 1000 **ಬೆಲೆ. 160/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಶ್ರೀನಿವಾಸ–09705864675, ಲಕ್ಷ್ಮೀನಾರಾಯಣಾಚಾರಿ–09440556968.
ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ವಿಷಯ ಸೂಚಿಕೆ

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು.  ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಮಾನವ ಜೀವನ ಪ್ರಾಧಾನ್ಯತೆ



ಜಗತ್ತಿನಲ್ಲಿ ಜೀವರಾಶಿಗಳ ಜಾತಿಗಳ ಸಂಖ್ಯೆ ಒಟ್ಟು 84 ಲಕ್ಷಗಳೆಂದು ಹೇಳುವುದು ಇದೆ. 84 ಲಕ್ಷಗಳ ವಿಧಗಳೆಂದು ಒಂದು ಮೊತ್ತವನ್ನು ಹೇಳುವುದಕ್ಕೆ ಈ ಕಾಲದಲ್ಲಿ ಯಾರ ಹತ್ತಿರ ಸರಿಯಾದ ವಿವರಣೆ ಇಲ್ಲ.

ಉಳಿದ ಜೀವರಾಶಿಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯ ಒಂದು ಮಾನವ ಜಾತಿಗೆ ಇದೆ. ತಲೆಯಲ್ಲಿನ ಬುದ್ಧಿ ವಿಧಾನವು ಎಷ್ಟೋ ದೊಡ್ಡದಾಗಿರುವ ಮಾನವ ಜಾತಿ ಅತ್ಯುನ್ನತ ಜಾತಿಯಾಗಿ ಲೆಕ್ಕಿಸಲ್ಪಡುತ್ತಿದೆ. ಉಳಿದ ಪಶು, ಪಕ್ಷಿ, ಕ್ರಿಮಿ,  ಕೀಟಕ, ವೃಕ್ಷ, ಲತಾದಿಗಳೆಲ್ಲ ಮಾನವನ ತಿಳುವಳಿಕೆಗಿಂತ  ಕಡಿಮೆ ತಿಳುವಳಿಕೆ ಹೊಂದಿವೆ ಎನ್ನುವುದರಲ್ಲಿ ಸಂದೇಹ ಇಲ್ಲ. ಪ್ರಾಣಿಗಳು, ಪಕ್ಷಿಗಳು, ಮೊದಲಾದ ಜೀವರಾಶಿಗಳೆಲ್ಲ ಆಹಾರ ಸಂಪಾದಿಸಿಕೊಳ್ಳುವುದು, ತಿನ್ನುವುದು, ನಿದ್ರಿಸುವುದು, ಸಂಭೋಗ ಸುಖವನ್ನನು ಭವಿಸುವುದು ಹೊರತು ಉಳಿದ ಪ್ರಪಂಚ ಜ್ಞಾನ ಅವುಗಳಿಗಿಲ್ಲ. ಮಾನವನಿಗೆ ತಿನ್ನುವುದು, ನಿದ್ರಿಸುವುದು, ಸಂತಾನ ಹೊಂದುವುದಲ್ಲದೆ ಅನೇಕವಾದ ವಿಪರೀತವಾದ ಪ್ರಪಂಚ ಜ್ಞಾನವು ತಿಳಿಯುತ್ತದೆ. ಹೆಚ್ಚಿನ ತಿಳುವಳಿಕೆ ಇರುವ ಮಾನವನ ಕೈಯಲ್ಲಿ, ಎಷ್ಟೋ ಬಲ ಹೊಂದಿ ತಿಳುವಳಿಕೆ ಇಲ್ಲದ ಸಿಂಹಗಳು ಸಹ ಸೋತುಹೋಗಿ ವಶವಾಗುತ್ತಿವೆ. ಇದಕ್ಕೆಲ್ಲ ಕಾರಣ ಮಾನವನ ಪ್ರಪಂಚ ಪರವಾದ ಬುದ್ಧಿ ವಿಶೇಷತೆ ಎಂದು ಹೇಳಬಹುದು. ಪ್ರಪಂಚದ ಪ್ರಕಾರ ಬುದ್ಧಿಯಲ್ಲಿ ಎಷ್ಟೋ ಅತ್ಯುನ್ನತ ಜಾತಿಯಾದ ಮಾನವಜಾತಿ, ಪ್ರಪಂಚಜ್ಞಾನದಲ್ಲಿ ಅಗ್ರಸ್ಥಾನದಲ್ಲಿ ನಿಂತಿರುವ ಮಾನವ ಜಾತಿ, ಎಷ್ಟೋ ದೊಡ್ಡ ಪರಿಶೋಧನೆಗಳನ್ನು ಮಾಡಿ ಯಾಂತ್ರಿಕವಾಗಿ  ಕಂಪ್ಯೂಟರ್‌ಗಳನ್ನು, ರೋಬೋಟ್‌ಗಳನ್ನು, ಭೌತಿಕ ವಾಗಿ ಜೀನ್ಸ್‌ನ್ನು, ಆಯುಧಪರವಾಗಿ ಕ್ಷಿಪಣಿಗಳನ್ನು, ಅಣುಬಾಂಬುಗಳನ್ನು ಕಂಡುಹಿಡಿದ ಮಾನವ ಜಾತಿ,  ಒಂದೇ ಒಂದು ಪರಮಾತ್ಮ ಜ್ಞಾನದಲ್ಲಿ ಪೂರ್ತಿಯಾಗಿ ಹಿಂದುಳಿದಿದೆ.

ಜ್ಞಾನದಲ್ಲಿ ಎರಡು ವಿಧಗಳು ಇವೆ. ಒಂದು ಪ್ರಪಂಚ ಜ್ಞಾನ, ಎರಡನೆ ಯದು ಪರಮಾತ್ಮ ಜ್ಞಾನ. ಪ್ರಪಂಚ ಜ್ಞಾನದಲ್ಲಿ ಎಷ್ಟೋ ಮುಂದುವರೆದ

ಮಾನವನು, ಪರಮಾತ್ಮ ಜ್ಞಾನದಲ್ಲಿ ಕಟ್ಟಕಡೆಯಲ್ಲಿದ್ದಾನೆ. ಎಷ್ಟೋ ದೊಡ್ಡ ತಿಳುವಳಿಕೆ ಇರುವ ಮಾನವನು ಸೂಕ್ಷ್ಮರೂಪದಲ್ಲಿರುವ ಪಾಪ ಯಾವುದು ಪುಣ್ಯ ಯಾವುದು ಎಂದು ವಿಚಾರಿಸದೆ, ಸ್ಥೂಲವಾದ ಪ್ರಪಂಚ ವಿಷಯಗಳನ್ನೇ ದೊಡ್ಡದಾಗಿ ತಿಳಿದು, ಆಧ್ಯಾತ್ಮಿಕತೆಯಲ್ಲಿ ಅವಗಾಹನೆ ಇಲ್ಲದೆ, ತನ್ನ ನಿಜಸ್ಥಿತಿ ತಿಳಿಯದೆ, ತಾನ್ಯಾರೋ ದೇವರ್‍ಯಾರೋ ತಿಳಿಯದೆ, ತಿಳಿದುಕೊಳ್ಳುವುದಕ್ಕೆ ಪ್ರಯತ್ನವು ಮಾಡದೆ, ಕಾಲವನ್ನು ವ್ಯರ್ಥವಾಗಿ ಕಳೆಯುತ್ತಾ ಕರ್ಮವನ್ನು ಸಂಪಾದಿಸಿಕೊಳ್ಳುತ್ತಿದ್ದಾನೆ. ಮೊದಲ ಜ್ಞಾನವಾದ ಪ್ರಪಂಚ ಜ್ಞಾನದಲ್ಲಿ ಬಹಳ ದೊಡ್ಡವನಾದ ಮಾನವನು, ಎರಡನೇ ಜ್ಞಾನವಾದ ಪರಮಾತ್ಮ ವಿಷಯದಲ್ಲಿ ಪೂರ್ತಿ ಹಿಂದುಳಿದಿರುವಾಗ, ಉಳಿದ ಜೀವರಾಶಿಗಳು ಪ್ರಪಂಚ ಜ್ಞಾನದಲ್ಲಿ ಹಿಂದುಳಿದಿದ್ದು ಪರಮಾತ್ಮ ದಾರಿಯಲ್ಲಿ ಮನುಷ್ಯನಿಗಿಂತ ಮುನ್ನೆಜ್ಜೆಯಲ್ಲಿವೆ ಎಂದು ಹೇಳಬಹುದು. ಮನುಷ್ಯನಿಗಿಂತ ಕಡಿಮೆ ಕರ್ಮ ಸಂಪಾದಿಸಿಕೊಳ್ಳುತ್ತಿರುವ ಜೀವರಾಶಿಗಳು ಮನುಷ್ಯನಂತೆ ಗುಣಗಳಲ್ಲಿ ಗಾಢವಾಗಿ ಸಿಲುಕಿಕೊಂಡಿಲ್ಲ. ಮನುಷ್ಯನಿಗಿಂತ ಭಿನ್ನವಾಗಿ ಎಲ್ಲಾ ಗುಣಗಳಲ್ಲಿಯೂ ಪೂರ್ತಿ ಕಡಿಮೆಯಾಗಿ ಇವೆ. ಮನುಷ್ಯನಿಗೆ ಆಸೆ ಎಂಬ ಗುಣವು ದೊಡ್ಡದಾಗಿದ್ದರೆ ಅವುಗಳಿಗೆ ಅದು ಅಷ್ಟು ಪ್ರಮಾಣದಲ್ಲಿ ಇಲ್ಲ. ಎಲ್ಲಾ ಗುಣಗಳಲ್ಲಿಯೂ ಹೆಚ್ಚಾಗಿ ಸಿಲುಕಿಕೊಂಡ ಮನುಷ್ಯನು ದೇವರಿಗೆ ದೂರವಾಗುತ್ತಿರುವಾಗ, ಗುಣಗಳಲ್ಲಿ ಕಡಿಮೆ ಸಿಲುಕಿ ಕೊಂಡಿರುವ ಜೀವರಾಶಿಗಳು ದೇವರಿಗೆ ಹತ್ತಿರವಾಗಿಯೇ ಇವೆ. ಕರ್ಮವನ್ನು ಅನುಭವಿಸುವುದು ಹೊರತು ಸಂಪಾದಿಸಿಕೊಳ್ಳದ ಪ್ರಾಣಿಗಳು, ತಿಳುವಳಿ ಕೆಯಿಲ್ಲದಿದ್ದರೂ ದೈವಜ್ಞಾನದಲ್ಲಿ ಮುಂದೆ ಇದ್ದಂತೆ. ಗುಣಗಳಲ್ಲಿ ಸಿಲುಕಿ ಅನುಭವಿಸುವ ಕರ್ಮಕ್ಕಿಂತ ಹೆಚ್ಚಾಗಿ ಕರ್ಮ ಸಂಪಾದಿಸಿಕೊಳ್ಳುವ ಮಾನವನು ದೈವಜ್ಞಾನದಲ್ಲಿ ಹಿಂದುಳಿದಂತೆ.

ಪ್ರಪಂಚ ಜ್ಞಾನದಲ್ಲಿ ಎಷ್ಟೋ ದೊಡ್ಡವನಾದ ಮಾನವನು, ಡಾಕ್ಟರ್‌ಗಳಾಗಿ ಇಂಜಿನಿಯರ್‌ಗಳಾಗಿ ವಿಜ್ಞಾನವನ್ನು ಸಂಪಾದಿಸಿಕೊಂಡ ಮಾನವನು, ಈಗಿನಿಂದಾದರು ಎಚ್ಚರಗೊಂಡು ತನ್ನ ಬುದ್ಧಿಯನ್ನು ಪ್ರಪಂಚದ ಮೇಲೆ

ಅಲ್ಲದೆ, ಪರಮಾತ್ಮನ ಮೇಲೆ ಉಪಯೋಗಿಸಿ ದೈವಜ್ಞಾನವನ್ನು ತಿಳಿಯಬಹುದು. ಸಾವು ಹುಟ್ಟು ಇಲ್ಲದ ಮೋಕ್ಷವನ್ನು ಹೊಂದಬಹುದು.

ಮಾನವ ಜೀವನದಲ್ಲಿ ಎಚ್ಚರಗೊಂಡರೆ ಉಳಿದ ಜೀವರಾಶಿಗಳಿಗಿಂತ ವೇಗವಾಗಿ ದೈವಸನ್ನಿಧಿಯನ್ನು ಸೇರಬಹುದು. ಇಲ್ಲದಿದ್ದರೆ ಉಳಿದ ಜೀವರಾಶಿಗಳಿಗಿಂತ ಪೂರ್ತಿ ಹಿಂದುಳಿಯಬಹುದು. ಮಾನವನ ಜೀವನವು ಎಷ್ಟು ಅಜ್ಞಾನದಿಂದ ಕೂಡಿಕೊಂಡರೂ, ಶ್ರದ್ಧೆ ಹೊಂದಿದರೆ ದೈವಮಾರ್ಗದಲ್ಲಿ ಬೇಗ ಪ್ರವೇಶಿಸಬಹುದು. ದೈವಮಾರ್ಗ ಪ್ರವೇಶಕ್ಕಾಗಿ ಮಾನವನ ಜನ್ಮವೇ ಒಳ್ಳೆಯ ಅವಕಾಶವೆಂದು ಹೇಳಬಹುದು. ಏಕೆಂದರೆ! ಎಲ್ಲಾ ಜೀವರಾಶಿಗಳಿಗಿಂತ ಹಿಂದುಳಿದವನು ಮಾನವನೆಂದು ತಿಳಿದ ಪರಮಾತ್ಮ, ಮಾನವನಿಗೆ ಜ್ಞಾನವನ್ನು ತಿಳಿಸುವುದಕ್ಕೆ ಮನುಷ್ಯನ ಅವತಾರದಲ್ಲಿಯೇ ಬಂದಿದ್ದಾನೆ. ದೈವಜ್ಞಾನ ಮನುಷ್ಯನಿಗೆ ಅವಶ್ಯಕ, ಆದ್ದರಿಂದ ಮನುಷ್ಯನಾಗಿಯೇ ಹುಟ್ಟಿ ಮನುಷ್ಯನಿಗೆ ಬೇಕಾದ ಜ್ಞಾನವನ್ನು ಹೇಳಿಹೋಗುವುದು ನಡೆದಿದೆ. ದೇವರೇ ಬಂದು ಹುಟ್ಟಿದ ಜನ್ಮ ಮನುಷ್ಯನದು. ಆದ ಕಾರಣ ದೈವ ವಿಷಯಗಳನ್ನು ಅರ್ಥ ಮಾಡಿಕೊಂಡರೆ ಮನುಷ್ಯನೇ ಪೂರ್ತಿ ಅರ್ಥ ಮಾಡಿಕೊಳ್ಳಬಹುದು. ಅಂತಹ ಅವಕಾಶ ದೇವರು ತಾನು ಜನ್ಮಿಸಿ ಕಲ್ಪಿಸಿದ್ದಾನೆ. ಪ್ರಾಣಿಗಳಲ್ಲಿ ದೇವರು ಜನ್ಮಿಸಲಿಲ್ಲ. ಮನುಷ್ಯರಲ್ಲಿಯೇ ಜನ್ಮಿಸುವುದೆಂದರೆ ಮನುಷ್ಯರಿಗೆ ಜ್ಞಾನ ಎಷ್ಟು ಅವಶ್ಯವೋ ಹೇಳದೆಯೇ ತಿಳಿಯುತ್ತಿದೆ.

ಮನುಷ್ಯ ದೈವಜ್ಞಾನವನ್ನು ತಿಳಿಯಬೇಕೆಂದರೆ ಗುರುವನ್ನು ಆಶ್ರಯಿಸಬೇಕಾಗಿದ್ದೇ. ಗುರುವು ಲಭಿಸಿದ ನಂತರ ನಂಬಿಕೆ ಎನ್ನುವುದು ಮುಖ್ಯವಾಗಿ ಇರಬೇಕು. ಆ ನಂಬಿಕೆಯಿಲ್ಲದಿದ್ದರೆ ಗುರುವಿನ ಹತ್ತಿರದಿಂದ ಗ್ರಹಿಸುವುದು ಏನೂ ಇರುವುದಿಲ್ಲ. ನಂಬಿಕೆ ಇರುವವನೇ ಗುರು ಹತ್ತಿರದಿಂದ ಸರ್ವವೂ ಗ್ರಹಿಸಬಹುದು ನಂಬಿಕೆ ಎಂಬುವುದೇ ಭಕ್ತಿ. ಭಕ್ತಿ ಇಲ್ಲದವನು ಯಾವ ಮನುಷ್ಯನಾದರೂ ನಿಷ್ಪ್ರಯೋಜಕನೆ. ಮಾನವ ಜನ್ಮದಲ್ಲಿ ಹುಟ್ಟಿ ನಮಗಿರುವ ತಿಳುವಳಿಕೆ ಎಲ್ಲವೂ ಸ್ವಲ್ಪಕಾಲ ಇರುವ ಪ್ರಪಂಚದಲ್ಲಿ ವಿನಿಯೋಗಿಸಿ ಸತ್ತುಹೋ

ಗುತ್ತಿದ್ದೇವೆ ಅಲ್ಲವೆ! ಏನು ಪ್ರಯೋಜನ? ನಮ್ಮ ತಿಳುವಳಿಕೆಯನ್ನು ಯಾವುದರ ಮೇಲೆ ಉಪಯೋಗಿಸಬೇಕೋ ತಿಳಿದುಕೊಂಡು, ಅದರ ಮೇಲೆ ಉಪಯೋಗಿಸಿದರೆ ಮಾನವ ಜನ್ಮಕ್ಕೆ ಸಾರ್ಥಕತೆ ಏರ್ಪಡುತ್ತದೆ. ಹಾಗೆ ಆಗದಿದ್ದ ಪಕ್ಷದಲ್ಲಿ ಪ್ರಾಣಿಗಳಿಗು ನಮಗು ಏನು ವ್ಯತ್ಯಾಸವಿದೆ? ಅವು ಕೆಲಸ ಮಾಡುತ್ತಿವೆ, ತಿನ್ನುತ್ತಿವೆ. ಹಾಗೆ ನಾವು ಕೆಲಸ ಮಾಡುತ್ತಿದ್ದೇವೆ, ತಿನ್ನುತ್ತಿದ್ದೇವೆ, ಹಾಗಿರುವಾಗ ಪ್ರಾಣಿಗಳ ಜೊತೆ ಸಮಾನರಾಗುತ್ತೇವೆ. ಆದ್ದರಿಂದ ಹಾಗಾಗದೆ ಮಾನವಜನ್ಮವನ್ನು ಪ್ರತ್ಯೇಕಪಡಿಸಬೇಕೆಂದರೆ, ಯಾವ ಜೀವರಾಶಿ ಮಾಡದಿರುವುದನ್ನು ನಾವು ಮಾಡಬೇಕು. ಅದೇ ಪರಮಾತ್ಮನನ್ನು ಸಾಧಿಸುವ ಸಾಧನೆ. ಪ್ರತಿಯೊಬ್ಬರು ಸಾಧನಪರರಾಗಿ ಮಾನವಜನ್ಮ ಎಲ್ಲಾ ಜನ್ಮಗಳಿಗಿಂತ ಉತ್ತಮವಾದುದೆಂದು ನಿರೂಪಿಸಿರಿ. ನಿಮ್ಮ ಜೀವನವನ್ನು ನಾನಾ ಮಾರ್ಗಗಳಿಂದ ಪರಮಾತ್ಮ ಮಾರ್ಗಕ್ಕೆ ಮರಳಿಸಿಕೊಳ್ಳಿ.

# ಚರ, ಅಚರ ಪ್ರಕೃತಿ

ಪ್ರಕೃತಿ ಎಂದರೆ ಕಣ್ಣಿಗೆ ಕಾಣಿಸುವುದೆಂದು ಅರ್ಥ. ಸ್ಥಾವರ ಜಂಗಮ ರೂಪವಾಗಿರುವುದೆಲ್ಲವೂ ಪ್ರಕೃತಿಯೇ. ಪ್ರಕೃತಿಯನ್ನು ಎರಡಾಗಿ ಹೇಳಬಹುದು. ಒಂದು ಚರ ಪ್ರಕೃತಿ, ಮತ್ತೊಂದು ಅಚರ ಪ್ರಕೃತಿ. ಇವುಗಳನ್ನೇ ಚೇತನ ಅಚೇತನ ಪ್ರಕೃತಿಗಳೆಂದು ಸಹಾ ಕರೆಯುತ್ತೇವೆ. ಚೇತನ ಅಚೇತನ ಪ್ರಕೃತಿಗಳು ಹೇಗೆ ತಯಾರಾಗಿವೆ? ಎಂದರೆ!.

ಹೇಳುವುದಕ್ಕು ಬರೆಯುವುದಕ್ಕು ಸಿಗದ ಪರಮಾತ್ಮನಿಂದ ಮೊದಲು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಶಕ್ತಿ ನಿರ್ಮುಕ್ತಗಳಾದ ಭಾಗಗಳು ಬಯಲ್ಪಟ್ಟಿವೆ. ಬಯಲ್ಪಟ್ಟ ನಂತರ ಆಕಾಶ ಎರಡು ಭಾಗಗಳಾಗಿದೆ. ಗಾಳಿ ಎರಡು ಭಾಗಗಳಾಗಿದೆ. ಅಗ್ನಿ ಎರಡು ಭಾಗಗಳಾಗಿದೆ. ನೀರು ಎರಡು ಭಾಗಗಳಾಗಿದೆ. ಭೂಮಿ ಎರಡು ಭಾಗಗಳಾಗಿದೆ. ಆಕಾಶ ಎರಡು ಭಾಗಗಳಾಗಿದೆಯಲ್ಲವೆ! ಅದರಲ್ಲಿ ಮೊದಲ ಭಾಗ ಅರ್ಥ ನಮಗೆ

ಅರ್ಧಗೋಳಾಕೃತಿಯಲ್ಲಿ ಮೇಲೆ ಕಾಣಿಸುತ್ತಲೇ ಇದೆ. ಗಾಳಿ ಎರಡು ಭಾಗಗಳಾಗಿದೆಯಲ್ಲ! ಅದರಲ್ಲಿ ಮೊದಲ ಭಾಗ ಅರ್ಧಭೂಮಿ ಮೊದಲುಗೊಂಡು ಮೇಲಕ್ಕೆ ಸ್ವಲ್ಪದವರೆಗೂ ವ್ಯಾಪಿಸಿದೆ. ಅಗ್ನಿಯು ಎರಡು ಭಾಗಗಳಾಗಿದೆ ಅಲ್ಲವೆ! ಅದರಲ್ಲಿ ಮೊದಲ ಅರ್ಧಭಾಗ ಸೂರ್ಯನಿಂದ ಪ್ರಾರಂಭವಾಗಿ ಭೂಮಿಯ ವರೆಗೂ ವ್ಯಾಪಿಸಿದೆ. ನೀರು ಎರಡು ಭಾಗಗಳಾಗಿದೆಯಲ್ಲವೆ! ಅದರಲ್ಲಿ ಮೊದಲ ಅರ್ಧಭಾಗ ಭೂ ಭಾಗದ ಮೇಲೆ ಸಮುದ್ರರೂಪದಿಂದ ಇದ್ದೇ ಇದೆ. ಭೂಮಿ ಎರಡು ಭಾಗಗಳಲ್ಲಿ ಸಹ ಮೊದಲ ಅರ್ಧಭಾಗದ ಮೇಲೆಯೇ ನಾವು ನಿವಾಸಿಸುತ್ತಿದ್ದೇವೆ. ಈ ವಿಧವಾಗಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಿಂದ ಪ್ರಪಂಚ ಏರ್ಪಟ್ಟಿದೆ. ಇದನ್ನೇ ಅಚರ ಪ್ರಕೃತಿ ಎನ್ನುತ್ತಾರೆ. ಇನ್ನು ಚರ ಪ್ರಕೃತಿ ಹೇಗೆ ಏರ್ಪಟ್ಟಿದೆ ಎಂದರೆ? ಆಕಾಶ, ಗಾಳಿ, ಅಗ್ನಿ, ನೀರು, ಭೂಮಿವೊಂದರ ಎರಡನೇ ಭಾಗಗಳಾದ ಅರ್ಧ ಅರ್ಧ ಭಾಗಗಳಾಗಿವೆಯಲ್ಲವೆ! ಅವು ಒಂದೊಂದು ಐದು ಭಾಗಗಳಾಗಿ ಸೀಳಿಹೋಗಿವೆ. ಹೀಗೆ ಸೀಳಿಹೋಗಿ ಒಟ್ಟು ಇಪ್ಪತ್ತೈದು ಆಗಿವೆ.

| | | | | |
|---|---|---|---|---|
| **ಎರಡನೆ ಅರ್ಧಭಾಗವಾದ** | **...** | **ಆಕಾಶ** | **...** | **5 ಭಾಗಗಳು** |
| **ಎರಡನೆ ಅರ್ಧಭಾಗವಾದ** | **...** | **ಗಾಳಿ** | **...** | **5 ಭಾಗಗಳು** |
| **ಎರಡನೆ ಅರ್ಧಭಾಗವಾದ** | **...** | **ಅಗ್ನಿ** | **...** | **5 ಭಾಗಗಳು** |
| **ಎರಡನೆ ಅರ್ಧಭಾಗವಾದ** | **...** | **ನೀರು** | **...** | **5 ಭಾಗಗಳು** |
| **ಎರಡನೆ ಅರ್ಧಭಾಗವಾದ** | **...** | **ಭೂಮಿ** | **...** | **5 ಭಾಗಗಳು** |

ಒಟ್ಟು ಭಾಗಗಳು 25. ಈ 25 ಭಾಗಗಳು ಒಂದರಜೊತೆ ಒಂದು ಸೇರಿ ಜೀವಶರೀರಗಳು ಏರ್ಪಟ್ಟಿವೆ. ಅರ್ಧ ಆಕಾಶ 5 ಭಾಗಗಳಾಗಿದೆಯಲ್ಲವೆ! ಅದರಲ್ಲಿನ ಮೊದಲ ಭಾಗ ಪರಮಾತ್ಮ ಅಂಶದೊಂದಿಗೆ ಸೇರಿ ಜೀವಾತ್ಮವಾಗಿದೆ. ಗಾಳಿಯಲ್ಲಿನ ಒಂದು ಭಾಗದೊಂದಿಗೆ ಸೇರಿ ಮನಸ್ಸು ಏರ್ಪಟ್ಟಿದೆ. ಅಗ್ನಿಯಲ್ಲಿನ ಒಂದು ಭಾಗದೊಂದಿಗೆ ಸೇರಿ ಬುದ್ಧಿ ಏರ್ಪಟ್ಟಿದೆ. ನೀರಿನಲ್ಲಿನ ಒಂದು ಭಾಗದೊಂದಿಗೆ ಸೇರಿ ಚಿತ್ತವು ಏರ್ಪಟ್ಟಿದೆ. ಭೂಮಿಯಲ್ಲಿನ ಭಾಗದೊಂದಿಗೆ

ಸೇರಿ ಅಹಮ್ ಏರ್ಪಟ್ಟಿದೆ. ಹೀಗೆ ಮೊದಲ ಆಕಾಶ ಭಾಗ ಐದು ಇತರ ಭಾಗಗಳಜೊತೆ ಸೇರಿ ಜೀವಾತ್ಮ, ಮನಸ್ಸು, ಬುದ್ಧಿ, ಚಿತ್ತ, ಅಹಮ್ ತಯಾರಾಗಿದೆ. ಇವುಗಳನ್ನೆ ಆಕಾಶತತ್ತ್ವಗಳು ಎನ್ನುತ್ತಾರೆ. ಮತ್ತು ಅಂತಃಕರಣಗಳು ಎಂದು ಸಹ ಅನ್ನುತ್ತಾರೆ.

**ಆಕಾಶ ಮೊದಲ ಭಾಗ 1+ ಪರಮಾತ್ಮ ಅಂಶ = ಜೀವಿಯು**
**ಆಕಾಶ ಮೊದಲ ಭಾಗ 1+ ಗಾಳಿಯಲ್ಲಿನ 1ನೇ ಭಾಗ = ಮನಸ್ಸು**
**ಆಕಾಶ ಮೊದಲ ಭಾಗ 1+ ಅಗ್ನಿಯಲ್ಲಿನ 1ನೇ ಭಾಗ =ಬುದ್ಧಿ**
**ಆಕಾಶ ಮೊದಲ ಭಾಗ 1+ ನೀರಿನಲ್ಲಿನ 1ನೇ ಭಾಗ = ಚಿತ್ತ**
**ಆಕಾಶ ಮೊದಲ ಭಾಗ 1+ ಭೂಮಿಯಲ್ಲಿನ 1ನೇಭಾಗ = ಅಹಮ್**

**ಜೀವಿಯು, ಮನಸ್ಸು, ಬುದ್ಧಿ, ಚಿತ್ತ, ಅಹಮ್ ಎನ್ನುವ ಐದು ಆಕಾಶದ ಮೊದಲ ಭಾಗದ ಮೂಲಕ ಹುಟ್ಟಿವೆ ಎಂದು ತಿಳಿಯಬೇಕು.**

ವಾಯುವೂ ಸಹ ಐದು ಭಾಗಗಳಾಗಿದೆ ಅಲ್ಲವೆ! ಅದರಲ್ಲಿ ಮೊದಲನೆ ಯದು ಆಕಾಶತತ್ವದಿಂದ ಕೂಡಿಕೊಂಡು ಮನಸ್ಸಾಗಿದೆಯಲ್ಲಾ! ಇನ್ನು ನಾಲ್ಕು ಭಾಗಗಳು ಉಳಿದಿವೆಯಲ್ಲ! ಅದರಲ್ಲಿನ ಎರಡನೆ ಭಾಗ ಪರಮಾತ್ಮ ಅಂಶದಿಂದ ಕೂಡಿಕೊಂಡು ನಮ್ಮ ಶರೀರದಲ್ಲಿರುವ ವ್ಯಾನ ವಾಯುವಾಗಿದೆ. ವಾಯುವಿನ ಎರಡನೆಯ ಭಾಗ ಆಕಾಶದಲ್ಲಿನ ಎರಡನೇ ಭಾಗದೊಂದಿಗೆ ಸೇರುವುದರಿಂದ ಸಮಾನವಾಯುವು ಏರ್ಪಟ್ಟಿದೆ. ವಾಯುವಿನಲ್ಲಿನ ಎರಡನೇ ಭಾಗವು ಅಗ್ನಿಯಲ್ಲಿನ ಎರಡನೇ ಭಾಗದಜೊತೆ ಸೇರುವುದರಿಂದ ಉದಾನವಾಯುವು ಏರ್ಪಟ್ಟಿದೆ. ಗಾಳಿಯಲ್ಲಿನ ಎರಡನೆ ಭಾಗ ನೀರಿನಲ್ಲಿನ ಎರಡನೆ ಭಾಗದೊಂದಿಗೆ ಸೇರುವುದರಿಂದ ಪ್ರಾಣವಾಯುವು ಏರ್ಪಟ್ಟಿದೆ. ಗಾಳಿಯಲ್ಲಿನ ಎರಡನೆಭಾಗ ಭೂಮಿಯಲ್ಲಿ ಎರಡನೆ ಭಾಗದೊಂದಿಗೆ ಸೇರುವುದರಿಂದ ಅಪಾನವಾಯುವು ಏರ್ಪಟ್ಟಿದೆ. ಇವುಗಳನ್ನೇ ವಾಯುತತ್ತ್ವಗಳು ಎನ್ನುತ್ತಾರೆ. ಮತ್ತು ಪಂಚಪ್ರಾಣಗಳು ಎಂದು ಸಹ ಕರೆಯುತ್ತಾರೆ.

**ಗಾಳಿ ಎರಡನೆ ಭಾಗ + ಪರಮಾತ್ಮ ಅಂಶ = ವ್ಯಾನವಾಯು**

**ಗಾಳಿ ಎರಡನೆ ಭಾಗ + ಆಕಾಶ ಎರಡನೇಭಾಗ = ಸಮಾನವಾಯು**

**ಗಾಳಿ ಎರಡನೆ ಭಾಗ + ಅಗ್ನಿ ಎರಡನೇಭಾಗ = ಉದಾನವಾಯು**

**ಗಾಳಿ ಎರಡನೆ ಭಾಗ + ನೀರು ಎರಡನೇಭಾಗ = ಪ್ರಾಣವಾಯು**

**ಗಾಳಿ ಎರಡನೆ ಭಾಗ + ಭೂಮಿ ಎರಡನೇಭಾಗ = ಅಪಾನವಾಯು**

**ವ್ಯಾನ, ಸಮಾನ, ಉದಾನ, ಪ್ರಾಣ, ಅಪಾನ ವಾಯುಗಳು ಐದು ಗಾಳಿವೊಂದರ ಎರಡನೇ ಭಾಗದಿಂದ ಹುಟ್ಟಿವೆ ಎಂದು ತಿಳಿಯಬೇಕು.**

ಅಗ್ನಿಯೂ ಸಹ ಐದು ಭಾಗಗಳಾಗಿದೆಯಲ್ಲವೆ! ಅದರಲ್ಲಿ ಮೊದಲನೆಯದು ಆಕಾಶತತ್ತ್ವದಜೊತೆ ಕೂಡಿಕೊಂಡು ಬುದ್ಧಿಯಾಗಿ ಬದಲಾಗಿದೆ. ಎರಡನೆಯದು ಗಾಳಿಜೊತೆ ಕೂಡಿಕೊಂಡು ಉದಾನವಾಯುವಾಗಿದೆ. ಇನ್ನು ಅಗ್ನಿಯಲ್ಲಿ ಮೂರು ಭಾಗಗಳು ಉಳಿದಿವೆ. ಅದರಲ್ಲಿ ಮೂರನೇ ಭಾಗವು ಪರಮಾತ್ಮ ಅಂಶದಜೊತೆ ಕೂಡಿಕೊಂಡು ಕಣ್ಣಾಗಿ ತಯಾರಾಗಿದೆ. ಆಕಾಶದಲ್ಲಿನ ಮೂರನೇ ಭಾಗದಜೊತೆ ಸೇರಿ ಕಿವಿಯಾಗಿ ತಯಾರಾಗಿದೆ. ವಾಯುವಿನಲ್ಲಿನ ಮೂರನೇ ಭಾಗದಜೊತೆ ಸೇರಿ ಚರ್ಮವಾಗಿ ಏರ್ಪಟ್ಟಿದೆ. ಮತ್ತು ನೀರಿನಲ್ಲಿನ ಮೂರನೇ ಭಾಗದಜೊತೆ ಸೇರಿ ನಾಲಿಗೆಯಾಗಿ ಏರ್ಪಟ್ಟಿದೆ. ಹಾಗೆ ಭೂಭಾಗದಲ್ಲಿನ ಮೂರನೇ ಭಾಗದಜೊತೆ ಸೇರಿ ಮೂಗು ಏರ್ಪಟ್ಟಿದೆ. ಈ ವಿಧವಾಗಿಯೇ ಅಗ್ನಿಯಿಂದ ತಯಾರಾದವುಗಳನ್ನೇ ಜ್ಞಾನೇಂದ್ರಿಯಗಳೆಂದು ಕರೆಯುತ್ತಾರೆ. ಮತ್ತು ಅಗ್ನಿತತ್ತ್ವಗಳೆಂದು ಸಹ ಕರೆಯುತ್ತಾರೆ.

**ಅಗ್ನಿಯಲ್ಲಿನ ಮೂರನೆಭಾಗ + ಪರಮಾತ್ಮ ಅಂಶ = ಕಣ್ಣುಗಳು**

**ಅಗ್ನಿಯಲ್ಲಿನ ಮೂರನೆಭಾಗ + ಆಕಾಶ ಮೂರನೇಭಾಗ = ಕಿವಿಗಳು**

**ಅಗ್ನಿಯಲ್ಲಿನ ಮೂರನೆಭಾಗ + ಗಾಳಿ ಮೂರನೇಭಾಗ = ಚರ್ಮ**

**ಅಗ್ನಿಯಲ್ಲಿನ ಮೂರನೆಭಾಗ + ನೀರು ಮೂರನೇಭಾಗ = ನಾಲಿಗೆ**

**ಅಗ್ನಿಯಲ್ಲಿನ ಮೂರನೆಭಾಗ + ಭೂಮಿ ಮೂರನೇಭಾಗ = ಮೂಗು**

**ಕಣ್ಣು, ಕಿವಿಗಳು, ಚರ್ಮ, ನಾಲಿಗೆ, ಮೂಗು ಎನ್ನುವ ವಿಷಯ ಶೇಕರಣೆ ಭಾಗಗಳು ಐದು ಅಗ್ನಿ ಮೂರನೇ ಭಾಗದಿಂದ ಹುಟ್ಟಿವೆ ಎಂದು ಜ್ಞಾಪಕ ಇಟ್ಟು ಕೊಳ್ಳಬೇಕು.**

ನೀರು ಸಹ ಐದು ಭಾಗಗಳಾಗಿದೆ ಅಲ್ಲವೆ! ಅದರಲ್ಲಿ ಒಂದು ಭಾಗವು ಆಕಾಶದೊಂದಿಗೆ ಸೇರಿ ಚಿತ್ತವಾಗಿ, ಎರಡನೇ ಭಾಗವು ಗಾಳಿಯಜೊತೆ ಸೇರಿ ಪ್ರಾಣವಾಯುವಾಗಿ, ಮೂರನೇ ಭಾಗವು ಅಗ್ನಿಯಜೊತೆ ಸೇರಿ ನಾಲಿಗೆಯಾಗಿ ಏರ್ಪಟ್ಟಿದೆ ಯಲ್ಲವೆ! ಇನ್ನು ಉಳಿದ ನಾಲ್ಕನೇ ಭಾಗ ಪರಮಾತ್ಮ ಅಂಶದಜೊತೆ ಸೇರಿಕೊಂಡು ರುಚಿಯಾಗಿ(ರಸ) ತಯಾರಾಗಿದೆ. ಆಕಾಶದಲ್ಲಿನ ನಾಲ್ಕನೇ ಭಾಗದಜೊತೆ ಸೇರಿಕೊಂಡು ಶಬ್ಧವಾಗಿ, ಗಾಳಿಯಲ್ಲಿನ ನಾಲ್ಕನೆ ಭಾಗದಜೊತೆ ಸೇರಿ ಸ್ಪರ್ಶವಾಗಿ, ಅಗ್ನಿಯಲ್ಲಿನ ನಾಲ್ಕನೆಯ ಭಾಗದಜೊತೆ ಸೇರಿಕೊಂಡು ರೂಪವಾಗಿ, ಭೂಮಿಯಲ್ಲಿನ ನಾಲ್ಕನೇ ಭಾಗದಜೊತೆ ಸೇರಿಕೊಂಡು ವಾಸನೆಯಾಗಿ ತಯಾರಾಗಿದೆ. ಇವುಗಳನ್ನು ನೀರಿನ ತತ್ವಗಳೆಂದು ಕರೆಯುತ್ತಾರೆ.

**ನೀರಿನಲ್ಲಿನ ನಾಲ್ಕನೆಭಾಗ + ಪರಮಾತ್ಮ ಅಂಶ = ರಸ (ರುಚಿ)**
**ನೀರಿನಲ್ಲಿನ ನಾಲ್ಕನೆಭಾಗ + ಆಕಾಶ ನಾಲ್ಕನೆಯ ಭಾಗ = ಶಬ್ದ**
**ನೀರಿನಲ್ಲಿನ ನಾಲ್ಕನೆಭಾಗ + ಗಾಳಿ ನಾಲ್ಕನೆಯ ಭಾಗ = ಸ್ಪರ್ಶ**
**ನೀರಿನಲ್ಲಿನ ನಾಲ್ಕನೆಭಾಗ + ಅಗ್ನಿ ನಾಲ್ಕನೆಯ ಭಾಗ = ರೂಪ**
**ನೀರಿನಲ್ಲಿನ ನಾಲ್ಕನೆಭಾಗ + ಭೂಮಿ ನಾಲ್ಕನೆಯಭಾಗ = ವಾಸನೆ**

**ರುಚಿ, ಶಬ್ದ, ಸ್ಪರ್ಶ, ರೂಪ, ವಾಸನೆ ಎನ್ನುವ ವಿಷಯ ಕೂಡಿಕೆಗಳು ಐದು ನೀರಿನ ನಾಲ್ಕನೆಯ ಭಾಗದಿಂದ ಹುಟ್ಟಿವೆ ಎಂದು ಮರೆಯಬಾರದು.**

ಭೂಮಿ ಸಹ ಐದು ಭಾಗಗಳಾಗಿದೆಯಲ್ಲ! ಅದರಲ್ಲಿ ಒಂದು ಭಾಗ ಆಕಾಶದ ಜೊತೆ ಸೇರಿ ಅಹಂಕಾರ, ಎರಡನೇ ಭಾಗ ಗಾಳಿಯಜೊತೆ ಸೇರಿ ಅಪಾನವಾಯು, ಮೂರನೇ ಭಾಗವು ಅಗ್ನಿಯಜೊತೆ ಸೇರಿ ಮೂಗು, ನಾಲ್ಕನೇ ಭಾಗ ನೀರಿನಜೊತೆ ಸೇರಿ ಗಂಧ ತಯಾರಾಗಿವೆಯಲ್ಲವೆ! ಉಳಿದ ಐದನೆ

ಭಾಗವು ಪರಮಾತ್ಮ ಅಂಶದ ಜೊತೆ ಸೇರಿ ಗುದ, ಆಕಾಶ ಐದನೆ ಭಾಗದಜೊತೆ ಸೇರಿ ಬಾಯಿ, ವಾಯು ಐದನೆಯ ಭಾಗದಜೊತೆ ಸೇರಿ ಕೈಗಳು, ಅಗ್ನಿ ಐದನೇ ಭಾಗದಜೊತೆ ಸೇರಿ ಪಾದಗಳು, ನೀರಿನ ಐದನೆ ಭಾಗದಜೊತೆ ಸೇರಿ ಲಿಂಗವು ತಯಾರಾಗಿದೆ. ಇವುಗಳನ್ನೇ ಕರ್ಮೇಂದ್ರಿಯಗಳೆಂದು ಕರೆಯುತ್ತಾರೆ.

**ಭೂಮಿ ಐದನೆ ಭಾಗ + ಪರಮಾತ್ಮ ಅಂಶ = ಗುದ.**
**ಭೂಮಿ ಐದನೆ ಭಾಗ + ಆಕಾಶ ಐದನೆಯ ಭಾಗ = ಬಾಯಿ**
**ಭೂಮಿ ಐದನೆ ಭಾಗ + ಗಾಳಿ ಐದನೆಯ ಭಾಗ = ಕೈಗಳು**
**ಭೂಮಿ ಐದನೆ ಭಾಗ + ಅಗ್ನಿ ಐದನೆಯ ಭಾಗ = ಪಾದಗಳು**
**ಭೂಮಿ ಐದನೆ ಭಾಗ + ನೀರು ಐದನೆಯ ಭಾಗ = ಲಿಂಗ**

**ಗುದ, ಬಾಯಿ, ಕೈಗಳು, ಪಾದಗಳು, ಸ್ತ್ರೀಯರಿಗಾದರೆ ಯೋನಿ ಪುರುಷರಿಗಾದರೆ ಲಿಂಗ ಭೂಮಿ ಐದನೆಯ ಭಾಗದಿಂದ ತಯಾರಾಗಿವೆಂದು ಗುರ್ತಿಟ್ಟುಕೊಳ್ಳಬೇಕು.**

ಈ ವಿಧವಾಗಿ ಅರ್ಧ ಭಾಗಗಳಾಗಿ ಉಳಿದುಹೋಗಿರುವ ಐದು ಶಕ್ತಿಗಳು ಒಟ್ಟು 25 ಭಾಗಗಳಾಗಿ, ಒಂದರಜೊತೆ ಒಂದು ಸೇರಿ ಪ್ರಪಂಚದಲ್ಲಿ ಜೀವರೂಪ ಶರೀರಗಳಾಗಿ ಸಂಚರಿಸಲ್ಪಟ್ಟಿವೆ. ಇದನ್ನೇ ಚರ ಪ್ರಕೃತಿ ಎಂದು ಚೇತನ ಪ್ರಕೃತಿ ಎಂದೂ ಅನ್ನುತ್ತಾರೆ. ಹೀಗೆ ಅಚೇತನವಾದ ಪ್ರಪಂಚವು, ಚೇತನವಾದ ಜೀವಶರೀರಗಳು ಸೇರಿ "ಪ್ರಕೃತಿ" ಎಂದು ಕರೆಯಲಾಗಿದೆ. ಆದ್ದರಿಂದ ಪ್ರಕೃತಿಯನ್ನು ವಿಭಜಿಸಿ ಒಂದು ಚೇತನ, ಎರಡನೆಯದು ಅಚೇತನ ಪ್ರಕೃತಿ ಎಂದು ಹೇಳಬಹುದು. 1) ಚೇತನ ಎಂದರೆ ಸರ್ವಜೀವರಾಶಿಗಳ ಒಟ್ಟು ಎಲ್ಲಾ ಶರೀರಗಳೆಂದು ಅರ್ಥ. ಇದನ್ನೇ ಚರ ಎಂದು, ಜಗತ್ತು ಎಂದು ಅನ್ನುತ್ತಾರೆ. 2) ಅಚೇತನ ಎಂದರೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವವು. ಇವುಗಳನ್ನೇ ಅಚರ ಎಂದು ಕರೆಯುತ್ತಾರೆ. ಅಚೇತನದ ಗಾಳಿ, ಆಕಾಶ, ಅಗ್ನಿ, ನೀರು, ಭೂಮಿಯಿಂದ ಪ್ರಪಂಚವು ಏರ್ಪಟ್ಟಿದೆ. ಚೇತನ ಶರೀರಗಳಿರುವ ಜೀವರಾಶಿಗಳು ಅಚೇತನವೆಂಬ ಪ್ರಪಂಚದಲ್ಲಿ ತುಂಬಿಕೊಂಡಿವೆ

ಅಂದರೆ ಈಗ ಮಾನವ ಶರೀರ ಧರಿಸಿರುವ ನಾವೂ ಸಹ ಪ್ರಕೃತಿಯಲ್ಲಿನ ಒಂದು ಭಾಗವೇ.

ಭಗವದ್ಗೀತೆಯ ವಿಜ್ಞಾನಯೋಗದಲ್ಲಿ ಪರಮಾತ್ಮ ಏನು ಹೇಳುತ್ತಿದ್ದಾನೆಂದರೆ **"ಜೀವರಾಶಿಗಳ ಸಾವು ಹುಟ್ಟುಗಳನ್ನು ಈ ಚೇತನ ಅಚೇತನ ಪ್ರಕೃತಿಗಳು ಮಾಡಿಸುತ್ತಿರುತ್ತವೆ, ನಾನು ಕಾರಣಭೂತನಾಗಿ ಮಾತ್ರವೆ ಇರುತ್ತೇನೆ."** ಎಂದು ಹೇಳಿದ್ದಾನೆ ಮತ್ತು "ಪ್ರತಿ ಗುಣವು ಈ ಪ್ರಕೃತಿಗಳಿಂದಲೇ ಹುಟ್ಟುತ್ತಿವೆ ಎಂದು ಜ್ಞಾನಿ ತಿಳಿದುಕೊಳ್ಳುತ್ತಾನೆ, ಪ್ರಕೃತಿ ನನ್ನ ಅಧೀನದಲ್ಲಿದೆ. ಜೀವರಾಶಿಗಳ ಪಾಪ ಪುಣ್ಯಗಳನ್ನು ಅನುಸರಿಸಿ ನನ್ನ ಪ್ರಕೃತಿಯೇ ಅವರಿಗೆ ಕಷ್ಟ ಸುಖಗಳನ್ನು, ಲಾಭನಷ್ಟಗಳನ್ನು ಉಂಟುಮಾಡುತ್ತಿರುತ್ತದೆ. ನಾನು ಮಾತ್ರ ಎಲ್ಲವುಗಳಿಗೂ ಸಾಕ್ಷಿಯಾಗಿದ್ದು ನೋಡುತ್ತಿರುತ್ತೇನೆ. ಇಂತಹ ನನ್ನನ್ನು ತಿಳಿದುಕೊಳ್ಳುವುದು ಯೋಗಿಗಳಿಗೆ ಮಾತ್ರವೇ ಸಾಧ್ಯ. ನಾನು ಮೇಲೆ ಆಕಾಶದಿಂದ ಪ್ರಾರಂಭಿಸಿ ಭೂಮಿಯವರೆಗೂ ಸರ್ವದಿಕ್ಕುಗಳು ವ್ಯಾಪಿಸಿ, ಅಚೇತನ ಪ್ರಕೃತಿಯಲ್ಲಿ ಸೂಜಿಮೊನೆಯಷ್ಟು ಸಹ ಸ್ಥಳ ಇಲ್ಲದೆ ತುಂಬಿಕೊಂಡಿದ್ದೇನೆ. ಅದೇ ವಿಧವಾಗಿ ಚೇತನ ಪ್ರಕೃತಿಯಾದ ಎಲ್ಲಾ ಶರೀರಗಳಲ್ಲಿ ಪಾದಗಳು ಮೊದಲುಗೊಂಡು ಶಿರಸ್ಸಿನವರೆಗೂ ವ್ಯಾಪಿಸಿದ್ದೇನೆ. ಆದ್ದರಿಂದಲೇ ನನಗೆ ತಿಳಿಯದೆ ಈ ಚರ ಅಚರ ಪ್ರಪಂಚದಲ್ಲಿ ಏನು ನಡೆಯುವುದಿಲ್ಲ. ಈ ಚರಾಚರ ಪ್ರಪಂಚದಲ್ಲಿ ರಾತ್ರಿಯಾಗಲಿ, ಹಗಲಾಗಲಿ ಯಾವ ಸಮಯದಲ್ಲಾಗಲಿ, ಯಾವ ಸ್ಥಳದಲ್ಲಿಯಾದರೂ, ನಡೆದಿರುವುದು, ನಡೆಯುತ್ತಿರುವುದು, ನಡೆಯಬೇಕಾಗಿರುವುದು ನನಗೆ ತಿಳಿಯುತ್ತದೆ. ಆದ್ದರಿಂದಲೇ ವಿಜ್ಞಾನಯೋಗದಲ್ಲಿ **"ನನಗೆ ತಿಳಿಯುವ ಭೂತ ಜಾಲಗಳಿಗೆ ಜಗತ್ತಿನಲ್ಲಿ ನಡೆದಂತಹ, ನಡೆಯಬಹುದಾದ ವೃತ್ತಾಂತಗಳು, ಇಂತಹ ನನ್ನನ್ನು ತಿಳಿದವರು ಯಾರು"** ಎಂದಿದ್ದಾನೆ, ಮತ್ತು ವಿಜ್ಞಾನಯೋಗದಲ್ಲಿಯೇ **"ಸರ್ವ ಭೂತಗಳಿಗೂ ಜನ್ಮ ಈ ಚೇತನಾಚೇತನ ಪ್ರಕೃತಿಗಳು ಮಾಡಿಸುತ್ತಿರುತ್ತವೆ, ನಾನು ಹೇತುವಾಗುತ್ತೇನೆ ಅಖಿಲ ಜಗಗಳ ಹುಟ್ಟು ಮತ್ತು ಸಾವುಗಳಿಗೂ"** ಅಂದಿದ್ದೇನೆ. ಈಗ ನಿನಗಾಗಲಿ ಯಾರಿಗಾದರೂ ಆಗಲಿ

ಚರ ಅಚರ ಪ್ರಕೃತಿ ಯಾವ ವಿಧವಾಗಿ ಪ್ರಳಯ ಸಂಭವಗಳು ಮಾಡಿಸುತ್ತಿದೆ ಎಂದು? ಪ್ರಶ್ನೆ ಬರಬಹುದು. ಅದನ್ನು ಕುರಿತು ವಿಶದೀಕರಿಸಿಕೊಳ್ಳೋಣ.

ಈ ವಿಷಯವಾಗಿ ದೇವರೇನನ್ನುತ್ತಿದ್ದಾನೆಂದರೆ **"ನನ್ನ ಅಚೇತನಾ(ಅಚರ) ಪ್ರಕೃತಿ ಐದು ಭಾಗಗಳಾಗಿ ಇದೆಯಲ್ಲ! ಅದರಲ್ಲಿ ಗಾಳಿ ಉದ್ರೇಕಗೊಂಡಷ್ಟು ಮಾತ್ರಕ್ಕೆ ಯಾವ ವಸ್ತುವು ಅದಕ್ಕೆ ನಿಲ್ಲುವುದಿಲ್ಲ. ದೊಡ್ಡ ಬೆಟ್ಟವನ್ನಾದರು ಮೇಲಕ್ಕೆತ್ತಿ ಗಿರಗಿರ ತಿರುಗಿಸಿ ಕೆಲವು ಮೈಲಿ ದೂರದಲ್ಲಿ ಬಿಸಾಡುತ್ತದೆ. ದೊಡ್ಡ ಮರಗಳನ್ನು ಸಹಿತವು ಬೆರಳುಗಳಿಂದ ಸಹ ಕಿತ್ತು ಹಾಕುತ್ತದೆ. ಇಂತಹ ಬಲವಾದ ನನ್ನ ಅಧೀನದಲ್ಲಿರುವ ಗಾಳಿ ಮನೆಗಳನ್ನು, ವೃಕ್ಷಗಳನ್ನು, ಭೂಮಿ ಮೇಲೆ ವಸ್ತುಗಳನ್ನು ತಾರುಮಾರು ಮಾಡಬಲ್ಲದು. ಪ್ರಕೃತಿ ಶಕ್ತಿಗಳಲ್ಲಿ ಒಂದಾದ ಗಾಳಿ ವಿಜೃಂಭಿಸಿದೆಯಾ! ಪ್ರಪಂಚದಲ್ಲಿ ಯಾವ ಜೀವರಾಶಿ ಉಳಿಯುವುದಿಲ್ಲ. ಇನ್ನು ಅಗ್ನಿ ಅನ್ನೋಣ ಅದಕ್ಕೆ ಒಳಗಾಗದ ವಸ್ತುವಂತು ಯಾವುದು ಇಲ್ಲ. ಪ್ರಪಂಚದಲ್ಲಿ ಕಲ್ಲುಗಳನ್ನು, ಕಬ್ಬಿಣವನ್ನು, ಮರಗಳನ್ನು, ಮನುಷ್ಯರನ್ನು, ಸರ್ವ ಜೀವರಾಶಿಗಳನ್ನು ಸುಟ್ಟು ಬೂದಿ ಮಾಡುತ್ತದೆ. ನಂತರ ನೀರು ಅನ್ನೋಣ ಇದು ವಿಜೃಂಭಿಸಿದರೂ ಸರ್ವಪ್ರಪಂಚಗಳನ್ನು ಮುಳುಗಿಸುತ್ತದೆ ಎಲ್ಲವೂ ಅದರಲ್ಲಿ ಲಯವಾಗಿಹೋಗಬೇಕಾಗಿದ್ದೆ. ಅದೇ ವಿಧವಾಗಿ ಭೂಮಿಗೆ ಕೋಪ ಬಂದಿದೆಯಾ ಮೇಲಿನದು ಕೆಳಕ್ಕೆ, ಕೆಳಗಿನದು ಮೇಲಕ್ಕೆ ಮಾಡಿ ಎಲ್ಲವನ್ನು ಭೂಸಮಾಧಿ ಮಾಡುತ್ತದೆ. ಈ ವಿಧವಾಗಿ ನನ್ನ ಪ್ರಕೃತಿ ಆದ ಐದು ಶಕ್ತಿಗಳು ಒಂದೇ ಬಾರಿ ವಿಜೃಂಭಿಸಿದರೆ ಬೇರೆ ಹೇಳಬೇಕಾದ ಅವಶ್ಯಕತೆ ಇಲ್ಲ. ಈ ಪ್ರಕೃತಿಯಲ್ಲಿಯೆ ಚೇತನವಾಗಿ ನಿಂತಿರುವ ಈ ಜೀವರೂಪ ಪ್ರಪಂಚವೆಲ್ಲಾ ನನ್ನ ಪ್ರಕೃತಿಗೆ ಅಧೀನವಾಗಿದೆ"** ಅಂದಿದ್ದಾನೆ. ಆ ವಿಧವಾಗಿ ಹೇಳಿದ ದೇವರ ಮಾತು ಕೇಳಿ ಸ್ವಲ್ಪಜನ ಏನನ್ನುತ್ತಿದ್ದಾರೆಂದರೆ! ರೋಗ ಬಂದು ಮರಣಿಸುತ್ತಿರುವ ಜೀವಿಗಳನ್ನು ಪ್ರಕೃತಿ ಬಾಧಿಸಲಿಲ್ಲವಲ್ಲ? ಎಂದು ಅನ್ನುತ್ತಿದ್ದಾರೆ. ಅವರಿಗೆ ಪರಮಾತ್ಮ ಏನು ಹೇಳುತ್ತಿದ್ದಾನೆಂದರೆ **"ಮಾಯೆಯಿಂದ ಮುಚ್ಚಿರುವ ನೀವು ನನ್ನನ್ನು, ನನ್ನ ಮಹಿಮೆಯನ್ನು ತಿಳಿಯದೆ ಹಾಗೆ ಅನ್ನುತ್ತಿದ್ದಾರೆ ಹೊರತು ಬೇರೆಯಲ್ಲ ಅದರ ರಹಸ್ಯ ತಿಳಿಸುತ್ತಿದ್ದೇನೆ ಸಾವಧಾನವಾಗಿ ಕೇಳಿರಿ"** ಅಂದಿದ್ದಾನೆ.

"ಸರ್ವಜೀವರಾಶಿಗಳ ಶರೀರಗಳು ಪಂಚಭೂತಗಳಿಂದಲೇ ತಾನೆ ನಿರ್ಮಾಣವಾಗಿರುವವು. ಈ ಶರೀರರೂಪವಾಗಿರುವುದನ್ನೇ ಅಲ್ಲವೆ, ಚೇತನಾ ಪ್ರಕೃತಿ ಅನ್ನುತ್ತಿದ್ದೇವೆ. ಈ ಪ್ರಕೃತಿಯಲ್ಲಿ ಒಂದು ಗಾಳಿ ವಿಜೃಂಭಿಸಿದರೆ ಕೆಮ್ಮು, ಸೀನುಗಳು ಪ್ರಾರಂಭವಾಗುತ್ತವೆ. ಇದನ್ನೇ ನೆಗಡಿ ಆಗಿದೆ ಅನ್ನುತ್ತೇವೆ. ಇದರ ಮೂಲಕ ಜೀವಿಗಳು ದುಃಖಪಡುತ್ತಿಲ್ಲವಾ? ಇನ್ನು ಉಬ್ಬಸರೋಗ ಪ್ರಾರಂಭ ವಾಗುತ್ತದೆ. ಇದರ ಮೂಲಕ ಜೀವಿಗಳು ದುಃಖಪಡುವುದಿಲ್ಲವಾ? ಅಪಾನ ವಾಯುವು ಹೆಚ್ಚಾಗಿದೆಯಾ ಹೊಟ್ಟೆ ಉಬ್ಬರ ನೋವು ಭೇದಿ ಬರುತ್ತಿವೆ. ಇದರ ಮೂಲಕ ದುಃಖಪಡುತ್ತಿಲ್ಲವಾ? ಉಪವಾಯುವಾದ ಧನಂಜಯ ವಾಯುವು ವಿರೋಧಿಸಿದರೆ ಗರ್ಭದಲ್ಲಿನ ಮಗು ಹೊರಗೆ ಬರದಂತಿರುತ್ತದೆ ಅದರಿಂದ ಜೀವಿಗಳು ದುಃಖಪಡುತ್ತಿಲ್ಲವಾ? ವ್ಯಾನ ಸಮಾನ ವಾಯುಗಳು ವಿರೋಧಿಸಿದಂತಾದರೆ ಶರೀರ ಅವಯವಗಳು ಸರಿಸಮಾನ ಬಲವನ್ನೇ ಕಳೆದುಕೊಳ್ಳುತ್ತವೆ. ಒಂದು ಗಾಳಿಗೆ ಜೀವಿಯು ದುಃಖ ಅನುಭವಿಸಿ ಮರಣಿಸುವ ಸ್ಥಿತಿ ಏರ್ಪಡುತ್ತಿದೆ. ಹಾಗೆ ಶರೀರದಲ್ಲಿರುವ ನೀರು ವಿರೋಧಿಸಿದರು ಶರೀರವೆಲ್ಲಾ ನೀರು ತುಂಬಿಕೊಂಡು ಕಾಲು ಕೈಗಳು ಊದಿಕೊಳ್ಳುತ್ತವೆ. ಅದರ ಮೂಲಕ ಜೀವಾತ್ಮ ಎಷ್ಟೋ ದುಃಖ ಅನುಭವಿಸಬೇಕಾಗಿ ಬರುತ್ತಿದೆ ಮತ್ತು ಮೂತ್ರವ್ಯಾಧಿ ಸಂಭವಿಸುತ್ತದೆ. ಬಾಯಲ್ಲಿ ತೇವ ಕಡಿಮೆಯಾಗುತ್ತದೆ ಮೆದಳಿನಲ್ಲಿ ತೇವ ಕಡಿಮೆಯಾಗುವುದರಿಂದ ನಿದ್ರೆ ಕಡಿಮೆಯಾಗುತ್ತದೆ, ಕಾಲು ಕೈಗಳು ಭಾರವಾಗಿ ಜೋಮು ಬಂದು ಸ್ಪರ್ಶ ಕಳೆದುಕೊಳ್ಳುತ್ತದೆ, ದೃಷ್ಟಿ ಕಡಿಮೆಯಾಗುತ್ತದೆ, ಶಬ್ದ ಕೇಳಿಸದೆ ಹೋಗುತ್ತದೆ. ಮೂಗು ವಾಸನೆಯನ್ನು ಗ್ರಹಿಸದೆಹೋಗುತ್ತದೆ. ನಾಲಿಗೆ ರುಚಿಯನ್ನು ತಿಳಿದುಕೊಳ್ಳದೆಹೋಗುತ್ತದೆ. ಹೀಗೆ ಯಾವುದು ಲೋಪವಾದರೂ ಜೀವಿಯು ದುಃಖಪಡಬೇಕಾಗಿ ಬರುತ್ತದೆ ಮತ್ತು ಮರಣಿಸಬೇಕಾಗಿ ಬರುತ್ತಿದೆ. ಚೇತನಾ ಪ್ರಕೃತಿಯಲ್ಲಿ ಒಂದು ಭಾಗವಾದ ಭೂಮಿ ವಿಜೃಂಭಿಸಿ ಕಂಪಿಸಿದರೆ, ಕಾಲು ಕೈಗಳು ಬಲಹೀನ ವಾಗುವುದೋ, ನೋವು ಬರುವುದೋ ಸಂಭವಿಸುತ್ತದೆ. ಮೂಲವ್ಯಾಧಿ ಪ್ರಾರಂಭವಾಗುತ್ತದೆ, ಸುಖವ್ಯಾಧಿಗಳು ಉಂಟಾಗುತ್ತವೆ. ದಂತಬಾಧೆಯು ಬರುತ್ತದೆ, ಮತ್ತು ಮೂರ್ಛೆರೋಗವು ಬರಬಹುದು. ಹೀಗೆ

ಭೂಮಿ ಬಾಧಿಸಿ ಕಡೆಗೆ ಸಾಯಿಸುತ್ತಿದೆ. ಚೇತನ ಪ್ರಕೃತಿಯಲ್ಲಿರುವ ಆಕಾಶ ವಿರೋಧಿಸಿದರು ಮೂಗಿನ ರಂಧ್ರಗಳು ಮುಚ್ಚಿಕೊಂಡು ಶ್ವಾಸ ಆಡುವುದಕ್ಕೆ ಕಷ್ಟವಾಗುತ್ತದೆ. ಮೂಗು ಪೂರ್ತಿ ಮುಚ್ಚಿಕೊಂಡರೆ ಶ್ವಾಸ ನಿರೋಧಿಸಲ್ಪಡುತ್ತದೆ. ಗಂಟಲಲ್ಲಿನ ಕಂಡರಗಳು ಬಾವುಬಂದು ಕಂಠರಂಧ್ರವು ಮುಚ್ಚಲ್ಪಟ್ಟು ಅನ್ನ ತಿನ್ನುವುದಕ್ಕೆ ನೀರು ಕುಡಿಯುವುದಕ್ಕೂ ಸಹ ಕಷ್ಟವಾಗುತ್ತದೆ. ಮೂತ್ರನಾಳವೂ ಸಹ ಮುಚ್ಚಿಕೊಂಡುಹೋಗಿ ಮೂತ್ರ ಹೋಗುವುದಕ್ಕೆ ಕಷ್ಟವಾಗುತ್ತದೆ. ಮನಸ್ಸು ಸ್ಥಿರವಿಲ್ಲದೆ ಮನೋರೋಗ ಏರ್ಪಡುತ್ತದೆ. ಮತ್ತು ಹುಚ್ಚು ಸಹ ಸಂಭವಿಸ ಬಹುದು. ಹೀಗೆ ಅನೇಕವಾದ ಶರೀರ ಸಂಬಂಧವಾದ ರೋಗಗಳು ಪ್ರಾರಂಭ ವಾಗಿ ಜೀವಿಯನ್ನು ಬಾಧಿಸಿ ಕೊನೆಗೆ ಅದರಿಂದಲೇ ಮರಣಿಸುವಂತೆ ಸಹ ಮಾಡುತ್ತಿವೆ. ಇನ್ನೂ ಚೇತನ ಪ್ರಕೃತಿಯಾದ ಅಗ್ನಿ ವಿಜೃಂಭಿಸಿದರೆ ಎಷ್ಟೋ ರೋಗಗಳು ಹೊರಟು ಜೀವಿಯನ್ನು ಸಾಯಿಸುತ್ತಿವೆ. ಈ ವಿಧವಾಗಿ ಚೇತನ, ಅಚೇತನ ಪ್ರಕೃತಿಗಳು ಜೀವಿಯನ್ನು ಮೃತ್ಯುಕೂಪದಲ್ಲಿ ಹಾಕುತ್ತಿವೆ. ಮತ್ತು ಪ್ರಕೃತಿಯೇ ಒಂದು ಭಾಗದಿಂದ ಒಂದು ಭಾಗವು ಕೂಡಿಕೊಂಡು ಜೀವಿಗಳಿಗೆ ಜನ್ಮ ಕೊಡುತ್ತಿದೆ. ಆದ್ದರಿಂದ ಜೀವಿಗಳ ಪ್ರಳಯ ಸಂಭವಗಳಿಗೆ ನನ್ನ ಪ್ರಕೃತಿಯೇ ಕಾರಣ ಎಂದಿದ್ದೇನೆ".

"ಚೇತನ, ಅಚೇತನ ಪ್ರಕೃತಿಗಳೇ ಸರ್ವಜೀವರಾಶಿಗಳಿಗೂ ಸಾವು ಹುಟ್ಟುಗಳನ್ನು ಪಾಪಪುಣ್ಯಗಳನ್ನು ಅನುಸರಿಸಿ ಕೊಡುತ್ತಿವೆ. ನಾನು ಪ್ರಕೃತಿಗೆ ಅಧ್ಯಕ್ಷತೆ ವಹಿಸಿದ್ದೇನೆ. ಆದ್ದರಿಂದಲೇ ಜಗವು ಚಕ್ರದಂತೆ ತಿರುಗುತ್ತಿರುತ್ತದೆ ನಾನು ಯಾರ ಪಾಪವನ್ನಾಗಲಿ, ಯಾರ ಪುಣ್ಯವನ್ನಾಗಲಿ ತೊಲಗಿಸುವುದಿಲ್ಲ. ನನಗೆ ಪ್ರಪಂಚದಲ್ಲಿ ಎಲ್ಲರೂ ಸಮಾನರೇ, ಆದರೆ ನನ್ನ ಭಕ್ತರು ಮಾತ್ರ ನನಗೆ ಪರಮ ಪ್ರಿಯರು. ಅವರ ಪಾಪ ಪುಣ್ಯಗಳು ಮಾತ್ರ ನನ್ನಿಂದ ಕೊಡಲ್ಪಡುವಂತಹ ಜ್ಞಾನವೆಂಬ ಅಗ್ನಿಯಿಂದ ಸುಟ್ಟು ಬೂದಿಯಾಗಿ, ಅವರು ಅನುಭವಿಸುವುದಕ್ಕೆ ಸ್ವಲ್ಪವೂ ಸಹ ಕೆಲಸಕ್ಕೆ ಬಾರದಂತೆ ಹೋಗುತ್ತಿವೆ. ಪ್ರಪಂಚದಲ್ಲಿ ನನ್ನ ಭಕ್ತರಾದವರು ನನಗೆ ಬಹಳ ಪ್ರಿಯರು. ನನಗೆ ನಿತ್ಯ ಸಂಬಂಧಿಕರು

ಅವರೆ. ಆದ್ದರಿಂದ ನಾನೇ ಅವರು, ಅವರೆ ನಾನು ಎಂದು ತಿಳಿಯುತ್ತಿದ್ದೇನೆ. ಅವರಿಗೆ ನನ್ನ ನಿಮಿತ್ತವಾಗಿರುವ ಜ್ಞಾನವು ಸಂಪ್ರಾಪ್ತವಾಗುವಂತೆ ಮಾಡುತ್ತಿದ್ದೇನೆ. ಅದರಿಂದ ಅವರ ಕರ್ಮವಾದ ಪಾಪಪುಣ್ಯಗಳು ಎರಡೂ ನಿಶ್ಶೇಷವಾಗಿ ನಶಿಸಿ ನನ್ನೊಳಗೆ ಐಕ್ಯವಾಗುತ್ತಿದ್ದಾರೆ. ಆದ್ದರಿಂದಲೇ ನಾನು ನನ್ನ ಗೀತಾ ಶಾಸ್ತ್ರದಲ್ಲಿ ನನ್ನನ್ನು ಮಾತ್ರವೇ ನಂಬಿಕೋ ಅರ್ಜುನಾ ನಿನ್ನನ್ನು ಸರ್ವಪಾಪ ನೀಚಗಳಿಂದ ಮುಕ್ತನನ್ನಾಗಿ ಮಾಡುತ್ತೇನೆಂದು ಹೇಳಿದ್ದೇನೆ. ಅರ್ಜುನನೇ ಅಲ್ಲ ಯಾರಾದರೂ ನಾನು ಹೇಳಿದಂತೆ ನನ್ನನ್ನು ನಂಬಿಕೊಂಡವರನ್ನು ನಿಸ್ಸಂಶಯವಾಗಿ ಮಾಯೆ ಎಂಬ ಸಮುದ್ರದಿಂದ ಹೊರಗೆ ಹಾಕುತ್ತೇನೆ. ನಾನೇ ಪ್ರಪಂಚವೆಲ್ಲ ತುಂಬಿಕೊಂಡಿದ್ದೇನೆ. ನನಗೆ ತಿಳಿಯದಂತೆ ಏನು ನಡೆಯುವುದಿಲ್ಲ. ಎಲ್ಲವನ್ನು ನಡೆಸುವುದು ನಾನೇ. ಎಲ್ಲಾ ಜೀವರಾಶಿಗಳ ಆತ್ಮವು ನಾನೇಯೆಂದು ಯಾರು ತಿಳಿದು ನನ್ನನ್ನೇ ಮನಸ್ಸಿನಲ್ಲಿ ಅನುಕ್ಷಣವು ಮರೆಯದೆ ಇದ್ದಾರೋ ಅಂತಹ ಭಕ್ತನಿಗೆ ಬಹಳ ಹತ್ತಿರದವನಾಗಿದ್ದೇನೆ. ನನ್ನ ಭಕ್ತರು ನನ್ನ ಪ್ರಕೃತಿಗೆ ಅತೀತರಾಗುತ್ತಾರೆ. ನನ್ನ ಭಕ್ತರನ್ನು ನನ್ನ ಪ್ರಕೃತಿ ಏನು ಮಾಡಲಾರದು. ನನ್ನ ಪ್ರಕೃತಿಯಲ್ಲಿನ ಅಗ್ನಿ ಸುಡಲಾರದು, ನನ್ನ ಭಕ್ತನು ಸುಡುವುದಿಲ್ಲ. ನನ್ನ ಪ್ರಕೃತಿಯಲ್ಲಿನ ನೀರು ತೋಯಿಸಲಾರವು, ನನ್ನ ಭಕ್ತನು ತೋಯುವುದಿಲ್ಲ ಹಾಗೆ ಗಾಳಿಗೆ ಹೊಡೆದುಕೊಂಡುಹೋಗುವುದಿಲ್ಲ, ಭೂಮಿ ನಲುಗಿಸಲಾರದು, ಒಣಗಿಹೋಗುವುದಿಲ್ಲ, ತೋಯುವುದಿಲ್ಲ, ಸುಡುವುದಿಲ್ಲ, ಕತ್ತರಿಸಲ್ಪಡುವುದಿಲ್ಲ, ಎಲ್ಲದಕ್ಕೂ ಅತೀತನಾಗಿ ನನ್ನ ರೀತಿಯೇ ನನ್ನ ಭಕ್ತನು ಬದಲಾಗಿಹೋಗುತ್ತಾನೆ. ಅವನೇ ನಾನಾಗಿ, ನಾನೇ ಅವನಾಗುತ್ತೇನೆ ಇದೇ ಮೋಕ್ಷ. ಇದೇ ಜೀವಬ್ರಹ್ಮ ಐಕ್ಯಸಂಧಾನವು". ಎಂದು ಹೇಳಿದ ದೇವರು ಇನ್ನೂ ಏನನ್ನುತ್ತಿದ್ದಾನೆಂದರೆ!

"ಓ ಜೀವಾ ನೀನು ನನ್ನನ್ನು ಮಾತ್ರವೇ ನಂಬಿಕೊಂಡು, ಸರ್ವ ವೇಳೆಯಲ್ಲಿ ಸರ್ವಾವಸ್ಥೆಯಲ್ಲಿ ನನ್ನ ನಿರಾಕಾರ ಸ್ವರೂಪವನ್ನೇ ನೆನೆಯುತ್ತಿರು. ಎಂದರೆ ಯೋಗದಲ್ಲಿ ಸಕ್ರಮವಾಗಿರು. ಸ್ವಲ್ಪ ಕಾಲಕ್ಕೆ ನೀನು ನನ್ನ ಹಾಗೆಯೇ ಬದಲಾಗಿಹೋಗುತ್ತೀಯಾ. ನೀನು ನಾನಾದ ನಂತರ ಪ್ರಕೃತಿಗೇ ನಿರ್ಮು

ಕ್ತಧಾತನಾದ ನನ್ನನ್ನು ಪ್ರಕೃತಿ ಏನು ಮಾಡಲಾರದು. ಆಗ ನೀನು ನನ್ನಲ್ಲಿ ಐಕ್ಯವಾಗಿದ್ದೀಯ ಆದ್ದರಿಂದ ಪ್ರಕೃತಿ ನಿನ್ನನ್ನು ಏನು ಮಾಡಲಾರದು" ಎಂದು ಭಗವಂತನು ಹೇಳಿದ್ದಾನೆ. ಆದ್ದರಿಂದ ಸರ್ವಜನರು ಪ್ರಕೃತಿಯಲ್ಲಿ ಸಿಲುಕಿಕೊಂಡು ದುಃಖಪಡದೆ ತಪ್ಪಿಸಿಕೊಳ್ಳುವುದಕ್ಕೆ ಇಂದಿನಿಂದ ಜ್ಞಾನವೆಂಬ ಅಗ್ನಿಯನ್ನು ಸಂಪಾದಿಸುವುದಕ್ಕೆ ಪ್ರಯತ್ನ ಮಾಡಿರಿ.

# ಮೋಕ್ಷ

ಪ್ರತಿ ಮಾನವನು ಮೋಕ್ಷ ಎಂದರೆ ಏನು? ಎಂದು ತಿಳಿದುಕೊಳ್ಳಬೇಕು. ಮೋಕ್ಷವನ್ನು ಕುರಿತು ತಿಳಿದುಕೊಳ್ಳದ ಮಾನವನು ಆತ್ಮವನ್ನು ತಿಳಿದುಕೊಳ್ಳುವುದಕ್ಕೆ ಸ್ವಲ್ಪವೂ ಪ್ರಯತ್ನಿಸುವುದಿಲ್ಲ. ಯಾರಾದರೂ ಹೇಳಿದರೂ ಅದರಿಂದ ನಮಗೇನು ಪ್ರಯೋಜನವಿದೆ? ಎಂದು ಅನ್ನುತ್ತಾನೆ. ಮೋಕ್ಷದವೊಂದು ಬೆಲೆ ತಿಳಿದುಕೊಳ್ಳದ ಮಾನವನ ಜೀವನವು ವಾಸನೆಯಿಲ್ಲದ ಹೂವಿಗೆ ಸಮಾನ. ಮೋಕ್ಷದ ಅರ್ಥ ತಿಳಿದುಕೊಳ್ಳದ ಮಾನವನು "ಹುತ್ತದಲ್ಲಿನ ಗೆದ್ದಲು ಹುಟ್ಟುತ್ತದೆ ಸಾಯುತ್ತದೆ." ಎನ್ನುವಂತೆ ಇದ್ದರೂ ಹೋದರು ಒಂದೇ, ಮೋಕ್ಷದ ಬಗ್ಗೆ ತಿಳಿದುಕೊಳ್ಳದವರ ಭಕ್ತಿ, ಗಮ್ಯವು ತಿಳಿಯದ ಪ್ರಯಾಣದಂತೆ ಇರುತ್ತದೆ. ಕೆಲವರಿಗೆ ಮೋಕ್ಷದ ಬಗ್ಗೆ ತಿಳಿಸಿ, ಮೋಕ್ಷವನ್ನು ಸೇರಿದರೆ ಜನ್ಮಿಸುವ ಅವಶ್ಯಕತೆ ಇಲ್ಲವೆಂದರೂ, ಅದರ ದೊಡ್ಡತನ ತಿಳಿಯದ ಅಜ್ಞಾನಿಗಳು "ಅಲ್ಲಿಗೆ ಹೋಗಿ ಸುಮ್ಮನಿದ್ದರೆ ಹೊತ್ತು ಹೇಗೆ ಕಳೆಯುತ್ತದೆ? ಸತ್ತು ಹುಟ್ಟುತ್ತಿದ್ದರೆ ತಾನೆ ಹೊತ್ತುಹೋಗುವುದು" ಎಂದು ಅನ್ನುತ್ತಿದ್ದಾರೆ. ಮತ್ತು "ಸುಮ್ಮನೆ ಇದ್ದರೆ ಏನು ಚೆನ್ನಾಗಿರುತ್ತದೆ, ಭೂಲೋಕದಲ್ಲಿ ಹುಟ್ಟಿ ಎಲ್ಲಾ ಸುಖಗಳು ಹೊಂದಿದರೆ ತಾನೇ ಚೆನ್ನಾಗಿರುವುದು" ಎಂದೂ ಸಹ ಅನ್ನುತ್ತಾರೆ, ಇನ್ನೂ "ನಿಮಗೆ ಹುಚ್ಚು ಹಿಡಿದು ಮೋಕ್ಷ ಮೋಕ್ಷ ಎನ್ನುತ್ತಿದ್ದೀರ, ಅದು ನಮಗೆ ಬೇಕಾಗಿಲ್ಲ" ಎಂದು ಜ್ಞಾನಿಗಳನ್ನೇ ಉದ್ರೇಕತೆಯಿಂದ ಹೇಳುತ್ತಿದ್ದಾರೆ. ಮೋಕ್ಷ ಎಂದರೆ ಏನು ಎಂಬ ವಿಷಯ ತಿಳಿಯದವರಿಗೆ ಪರಮಾತ್ಮನ ಬಗ್ಗೆ ಹೇಳಿದರೆ ಗಾಳಿಯಿಲ್ಲದ ಕೊಠಡಿಯಲ್ಲಿ ಹಾಕಿ ಬಾಗಿಲು

ಮುಚ್ಚಿದಂತಾಗುತ್ತದೆ, ಆದ್ದರಿಂದ ಅವರು ಕೇಳದೆ ಇರುವುದಲ್ಲದೆ, ಅಲ್ಲಿಂದ ಯಾವಾಗ ಹೊರ ಬೀಳುತ್ತೇವೊ ಎಂದು ಆಲೋಚಿಸಿ ತಪ್ಪಿಸಿಕೊಳ್ಳುತ್ತಾರೆ. ಮೋಕ್ಷವನ್ನು ಕುರಿತು ತಿಳಿದುಕೊಳ್ಳದವರು ಯಾರು ಪರಮಾತ್ಮನನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಇಷ್ಟಪಡುವುದಿಲ್ಲ. ಮತ್ತು ಪರಮಾತ್ಮ ವಿಷಯಗಳಲ್ಲಿರುವ ವರನ್ನು ನೋಡಿ ಅಸಹ್ಯಿಸಿಕೊಳ್ಳುತ್ತಾರೆ. ಆದ್ದರಿಂದ ಪ್ರತಿ ಮಾನವನು ಮೊದಲು ಮೋಕ್ಷವನ್ನು ಕುರಿತು ತಿಳಿದುಕೊಳ್ಳಬೇಕು.

ಮೋಕ್ಷವನ್ನು ಕುರಿತು ಸ್ವಲ್ಪ ವಿವರಿಸಿಕೊಂಡು ನೋಡಿದಂತಾದರೆ ಅದು ಅಜ್ಞಾನಿಗಳು ಅಂದುಕೊಂಡಂತೆ ಒಂದು ಲೋಕವಲ್ಲ. ಮೋಕ್ಷ ಎಲ್ಲೋ ಇದೆಯೆಂದು ಕೆಲವರು ಅಂದುಕೊಳ್ಳುತ್ತಿರುತ್ತಾರೆ. ಅದು ಎಲ್ಲಿಯೋ ಇಲ್ಲ ಎಲ್ಲಾಕಡೆ ಇದೆ. ಮೋಕ್ಷ ಹೊಂದಿದ ಜೀವಿಯು ಕಾಲವಾಗಿಯೇ ಬದಲಾ ಗುತ್ತಿದ್ದಾನೆ. ಕಾಲವೇ ತಾನಾದ ನಂತರ ಹೊತ್ತುಹೋಗುವುದಿಲ್ಲ ಅನ್ನುವ ಸಮಸ್ಯೆ ಹೇಗಿರುತ್ತದೆ? ಮೋಕ್ಷವನ್ನು ಹೊಂದಿದ ಜೀವಿಯು ಅಣುವಣುವಿನಲ್ಲಿ ತುಂಬಿಕೊಂಡುಹೋಗಿ, ಪ್ರಪಂಚದಲ್ಲಿರುವ ಕಷ್ಟಗಳನ್ನು ಹೊಂದದೆ, ಎಲ್ಲದಕ್ಕೂ ಸಾಕ್ಷಿಯಾಗಿರುತ್ತಿದ್ದಾನೆ ಆದ್ದರಿಂದ ಅಲ್ಲಿಗೆ ಹೋಗಿ ಏನು ಮಾಡಬೇಕೆಂಬ ಸಮಸ್ಯೆ ಏನೂ ಇರುವುದಿಲ್ಲ. ಮೋಕ್ಷವನ್ನು ಹೊಂದಿದ ಜೀವಿಯು ಪ್ರಕೃತಿ ಯೊಳಗೂ ಹೊರಗೂ ಪ್ರಪಂಚವೆಲ್ಲಾ ಇದ್ದಾನೆ, ಆದ್ದರಿಂದ ಪ್ರಕೃತಿ ಏನು ಮಾಡುವುದಿಲ್ಲ. ಸಾಮಾನ್ಯ ಮಾನವರು ಪ್ರಕೃತಿಯ ಒಳಗೇ ಇರುವುದರಿಂದ ಅವರನ್ನು ಪ್ರಕೃತಿ ನಾಶ ಮಾಡುತ್ತದೆ. ಮೋಕ್ಷ ಹೊಂದಿದ ಜೀವಿಯು ಅಗ್ನಿಯೂ ಸಹ ತಾನಾಗಿರುವುದರಿಂದ ಅಗ್ನಿಗೆ ಸುಡುವನು ಅನ್ನುವ ಸಮಸ್ಯೆ ಏನೂ ಇರುವುದಿಲ್ಲ. ಮೋಕ್ಷ ಹೊಂದದ ಜೀವಿಯು ಅಗ್ನಿ ತಾನು ಅಲ್ಲದಿರುವುದರಿಂದ ಅಗ್ನಿಗೆ ಸುಡುವನು. ಮೋಕ್ಷ ಹೊಂದಿದ ಜೀವಿಯು ಗುಣಗಳಿಗೆ ಅತೀತನು, ಅವು ಅವನನ್ನು ಏನು ಮಾಡಲಾರವು. ಸಾಮಾನ್ಯ ಮಾನವನು ಗುಣಗಳಿಂದ ಕೂಡಿಕೊಂಡಿರುತ್ತಾನೆ. ಗುಣಗಳು ಮಾನವನನ್ನು ನಾನಾಕಷ್ಟಗಳು ಇಡುತ್ತಿವೆ. ಮೋಕ್ಷ ಹೊಂದಿದ ಜೀವಿಯು ಕಣ್ಣಿಗೆ ಕಾಣಿಸದೆ ಇಂತಹ ಕಡೆ ಇದ್ದಾನೆಂದು

ಗುರುತಿಸುವುದಕ್ಕೆ ಸಾಧ್ಯವಿಲ್ಲದೆ ಇದ್ದಾನೆ. ಸಾಮಾನ್ಯ ಮಾನವನನ್ನು ಗುರುತಿಸಬಹುದು. ಮೋಕ್ಷ ಹೊಂದಿದ ಜೀವಿಯು ಪ್ರಳಯದಲ್ಲಿ ಪ್ರಪಂಚ ಎಲ್ಲವೂ ನಾಶವಾಗಿಹೋದರು ತಾನು ನಾಶವಾಗದೆ ಇರುತ್ತಾನೆ. ಮೋಕ್ಷ ಹೊಂದಿದ ಜೀವಿಯು ಪ್ರಪಂಚದಲ್ಲಿ ಎಲ್ಲ ಶರೀರಗಳಿಗೆ ಒಳಗೂ ಹೊರಗೂ ಇರುತ್ತಾನೆ. ಮೋಕ್ಷ ಹೊಂದದ ಮಾನವರು ಶರೀರದೊಳಗೆ ಇರುತ್ತಾರೆ. ಮೋಕ್ಷ ಹೊಂದಿದ ಜೀವಿಯು ಎಲ್ಲ ಸ್ಥಳಗಳನ್ನು ನೋಡುತ್ತಿರುತ್ತಾನೆ. ಅದನ್ನು ಹೊಂದ ದವನು ಹಾಗೆ ನೋಡಲಾರನು. ಮೋಕ್ಷ ಹೊಂದಿದ ಜೀವಿಯು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವ ಅಗತ್ಯವಿಲ್ಲದೆ ಎಲ್ಲಾಕಡೆ ಇರುತ್ತಾನೆ. ಅದನ್ನು ಹೊಂದದವನು ವ್ಯರ್ಥ ಪ್ರಯಾಣಗಳಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಬೇಕಾಗಿರುತ್ತದೆ. ಮೋಕ್ಷ ಹೊಂದಿದ ಜೀವಿಯು ಅಗ್ನಿಗೆ ಸುಡುವುದಿಲ್ಲ, ನೀರಿಗೆ ತೋಯುವುದಿಲ್ಲ, ಗಾಳಿಗೆ ಹೊಡೆದುಕೊಂಡು ಹೋಗುವುದಿಲ್ಲ ಆದ್ದರಿಂದ ಅವನು ಭಯಪಡುವುದಿಲ್ಲ. ಅದನ್ನು ಹೊಂದದ ಜೀವಿಯು ಅಗ್ನಿಗೂ, ಗಾಳಿಗೂ, ನೀರಿಗೂ, ನಿತ್ಯ ಭಯಪಡಬೇಕಾಗಿರುತ್ತದೆ. ಮೋಕ್ಷ ಹೊಂದಿದ ಜೀವಿಗೆ ಅಹಾರದ ಅವಶ್ಯಕತೆಯಿಲ್ಲ. ಅದನ್ನು ಹೊಂದ ದವನಿಗೆ ಆಹಾರ ಪ್ರತಿನಿತ್ಯ ಅಗತ್ಯ. ಮೋಕ್ಷ ಹೊಂದಿದವನು ಶಾಶ್ವತವಾಗಿ ಹೇಳಲಾರದ ಸುಖವನ್ನು ಪಡೆಯುತ್ತಾ ತೃಪ್ತಿಯಾಗಿರುತ್ತಾನೆ. ಅದನ್ನು ಪಡೆಯ ದವನು ಕ್ಷಣಕಾಲದ ಸುಖಗಳನ್ನು ಅನುಭವಿಸುತ್ತಾ ಯಾವಾಗಲೂ ಅಸಂತೃಪ್ತಿಯಾಗಿಯೇ ಇರುತ್ತಾನೆ. ಮೋಕ್ಷ ಹೊಂದಿದವನು ಎಷ್ಟು ಮಾತ್ರ ದುಃಖಪಡಬೇಕಾಗಿರುವುದಿಲ್ಲ. ಅದನ್ನು ಹೊಂದದವನು ಅನೇಕ ದುಃಖಗಳು ಅನುಭವಿಸಬೇಕಾಗಿರುತ್ತದೆ. ಮೋಕ್ಷ ಹೊಂದಿದವನಿಗಿಂತ ಯಾರೂ ದೊಡ್ಡದಾಗಿರುವುದಿಲ್ಲ. ಅದನ್ನು ಹೊಂದದ ಮಾನವನಿಗೆ ದೇವರೆಂಬುವವನು ಒಬ್ಬನು ದೊಡ್ಡವನು ಇದ್ದಾನೆ. ಮೋಕ್ಷ ಹೊಂದಿದವನು ಯಾವಾಗಲೂ ಒಂದೇ ವಿಧವಾಗಿ ಇರುತ್ತಾನೆ, ಹೊಂದದವನು ಅನೇಕ ಜನ್ಮಗಳಲ್ಲಿ ಬಾಲ್ಯ, ಯೌವನ, ಕೌಮಾರ, ವೃದ್ಧಾಪ್ಯ ಎನ್ನುವ ಸ್ಥಿತಿಗಳನ್ನು ಹೊಂದುತ್ತಿದ್ದಾನೆ. ಈ ವಿಧವಾಗಿ ಹೇಳುತ್ತಾ ಹೋದರೂ ಅನೇಕವಾಗಿ ಮೋಕ್ಷವೊಂದರ ಬೆಲೆ ಇದೆ. ಅದರ

ಬಗ್ಗೆ ಪೂರ್ತಿ ಹೇಳುವುದಕ್ಕೆ ಯಾರಿಗೂ ಕೈಲಾಗುವುದಿಲ್ಲ. ಇದೆಲ್ಲವೂ ತಿಳಿದುಕೊಂಡ ನಾವು ಈಗಿರುವ ಸ್ಥಿತಿ ಒಳ್ಳೆಯದಾ? ಇಲ್ಲವೆ ಮೋಕ್ಷಸ್ಥಿತಿ ಒಳ್ಳೆಯದಾ? ಎಂದು ನೀವೇ ಆಲೋಚಿಸಿಕೊಳ್ಳಬೇಕಾಗಿದೆ.

ಮೋಕ್ಷದ ಬೆಲೆ ತಿಳಿಯದವರು ಅದರಿಂದ ಏನು ಕೆಲಸ ಎನ್ನುತ್ತಿದ್ದಾರೆ. ಮೋಕ್ಷದ ಮುಂದೆ ಈಗ ನಾವು ಅನುಭವಿಸುವ ಸ್ಥಿತಿ ಪರ್ವತದ ಮುಂದೆ ಚಿಕ್ಕಕಲ್ಲಿಗೆ ಸಮಾನವೆಂದು ಅವರಿಗೆ ತಿಳಿದಿಲ್ಲ. ಮೋಕ್ಷದ ಬೆಲೆಯನ್ನು ತಿಳಿಯದವರು ಪರಮಾತ್ಮನ ಬಗ್ಗೆ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸುವುದಿಲ್ಲ. ಆದ್ದರಿಂದ ಮೊದಲು ಪ್ರತಿ ಒಬ್ಬರು ಮೋಕ್ಷವನ್ನು ಕುರಿತು ತಿಳಿದುಕೊಳ್ಳಬೇಕು. ಮೋಕ್ಷದ ಬಗ್ಗೆ ತಿಳಿದುಕೊಂಡ ನಂತರ ಅದನ್ನು ಹೊಂದುವುದಕ್ಕೆ ಮಾರ್ಗ ಅನ್ವೇಷಿಸಬೇಕು. ಮೋಕ್ಷ ಹೊಂದುವುದಕ್ಕೆ ಜ್ಞಾನ ಅವಶ್ಯಕ. ಜ್ಞಾನ ಹೊಂದುವುದಕ್ಕೆ ಗುರು ಅವಶ್ಯ. ಗುರು ಲಭಿಸಿದ ನಂತರ ಅವರ ಮೂಲಕ ಮೋಕ್ಷವನ್ನು ಹೊಂದುವುಕ್ಕೆ ಸಾಧ್ಯವಿದೆ.

ಮೋಕ್ಷಸಾಮ್ರಾಜ್ಯ ಹೊಂದುವುದಕ್ಕೆ ದ್ವಾರ ಒಬ್ಬ ಗುರುವೆ. ಆದ್ದರಿಂದ ಗುರುವನ್ನು ಆಶ್ರಯಿಸಿ ಆತನ ಮೂಲಕ ಜ್ಞಾನ, ಯೋಗ ಹೊಂದಿ ಜನ್ಮ ರಹಿತವಾದ ಮೋಕ್ಷ ಸಂಪಾದಿಸಿಕೊಳ್ಳಿ, 60 ಅಥವಾ 70 ವರ್ಷಗಳ ಕಾಲ ಬದುಕುವ ಈ ಜನ್ಮದಲ್ಲಿ 20 ಅಥವಾ 30 ವರ್ಷಗಳು ಪ್ರಪಂಚ ಓದುಗಳು ಓದಿ, ದೊಡ್ಡ ದೊಡ್ಡ ಡಿಗ್ರೀಗಳು ಸಂಪಾದಿಸಿಕೊಂಡು, ದೊಡ್ಡವರೆಂದೆನಿಸಿಕೊಂಡರೂ ಆ ಬಲೆ ಎಲ್ಲವೂ ಮರಣಿಸುವವರೆಗೇ ಇರುತ್ತದೆ. ಡಾಕ್ಟರ್‌ಗಳಾಗಿ, ಇಂಜಿನೀಯರ್‌ಗಳಾಗಿ ಸರ್ಟಿಫಿಕೆಟ್ ಹೊಂದಿದರು ಅದರ ಪ್ರಯೋಜನ ಸ್ವಲ್ಪಕಾಲವೆ ಇರುತ್ತದೆ. ಎಷ್ಟು ಹಣ ಸಂಪಾದಿಸಿದರು ಅದರ ಹತ್ತಿರ ನಾವಿರುವುದು ಸ್ವಲ್ಪಕಾಲವೆ, ಪ್ರಪಂಚದಲ್ಲಿ ಒಂದೊಂದು ಜನ್ಮ ಸ್ವಲ್ಪ ಕಾಲವೇ ಇರುತ್ತದೆ. ಆದ್ದರಿಂದ ಈ ಜನ್ಮ ಸಹ ಸ್ವಲ್ಪಕಾಲವೆ ಇರುತ್ತದೆ. ಕತ್ತಲಲ್ಲಿ ಹಗ್ಗವನ್ನು ಹಾವೆಂದು ಭ್ರಮಿಸಿದಂತೆ, ಅಜ್ಞಾನದಲ್ಲಿ ಶಾಶ್ವತವಲ್ಲದಿರುವುದನ್ನು, ಶಾಶ್ವತ ಅಂದುಕೊಂಡು ನಾವು ಎಷ್ಟೋ ತಪ್ಪು ಮಾಡುತ್ತಿದ್ದೇವೆ. ಆ ತಪ್ಪನ್ನು ತಿಳಿದುಕೊಂಡು ಶಾಶ್ವತವಲ್ಲದ

ಈ ಜೀವನವನ್ನು ನಿರ್ಲಕ್ಷ್ಯಮಾಡಿ ಶಾಶ್ವತವಾದ ಮೋಕ್ಷಕ್ಕಾಗಿ ಪ್ರಯತ್ನ ಮಾಡಬೇಕು. ಮಾನವರಾದ ನಮಗೆ ಎಷ್ಟೋ ತಿಳುವಳಿಕೆ ಇದೆ. ಅದನ್ನು ಉಪಯೋಗಿಸಿ ಇದಕ್ಕೂ ಮೊದಲು ಮೋಕ್ಷಕ್ಕಾಗಿ ಪ್ರಯತ್ನಿಸಿದವರನ್ನು ಕುರಿತು ಆಲೋಚಿಸಿದರು, ನಮಗಿಂತ ಹೆಚ್ಚಾಗಿ ತಿಳುವಳಿಕೆಯುಳ್ಳವರೆ ಅದಕ್ಕೆ ಪ್ರಯತ್ನ ಮಾಡಿದಂತೆ ತಿಳಿಯುತ್ತದೆ. ಮೋಕ್ಷ ಎನ್ನುತ್ತಾ ಮೋಸ ಮಾಡುವ ಕಳ್ಳ ಭಕ್ತರು ಪ್ರಪಂಚದಲ್ಲಿ ಇರಬಹುದು. ಅವರನ್ನು ನೋಡಿ ಮೋಕ್ಷ ಎನ್ನುವುದು ಕೆಟ್ಟದು, ಅದನ್ನು ಪ್ರಯತ್ನಿಸುವವರು ಎಲ್ಲರೂ ಕೆಟ್ಟವರು ಅಂದುಕೊಳ್ಳದೆ, ಮೋಕ್ಷದ ಸಾರಾಂಶದ ಮೇಲೆ ಒಂದು ಬಾರಿ ನಿಮ್ಮ ದೃಷ್ಠಿಯಿಂದ ನೋಡಿ. ಮೋಕ್ಷವನ್ನು ಕುರಿತು ತಿಳಿದುಕೊಳ್ಳದ ಜೀವನ ನಿರರ್ಥಕ ಎಂದು ಸಹ ತಿಳಿದುಕೊಳ್ಳಿ, ಮೋಕ್ಷವನ್ನು ಕುರಿತು ತಿಳಿದುಕೊಂಡ ಜನ್ಮ ಸಾರ್ಥಕವಾದಂತೆ ಎಂದು ತಿಳಿದುಕೊಳ್ಳಿ.

# ಯಮಲೋಕ – ಸ್ವರ್ಗಲೋಕ

ಜೀವಿಗಳು ಭೂಮಿ ಮೇಲೆ ಹುಟ್ಟಿ ನಿತ್ಯ ಕರ್ಮಗಳನ್ನು ಮಾಡುತ್ತಲೇ ಇದ್ದಾರೆ. ಜೀವನದಲ್ಲಿ ಹುಟ್ಟಿದ್ದು ಮೊದಲು ಸಾಯುವವರೆಗೂ ಕಷ್ಟಸುಖಗಳನ್ನು ಅನುಭವಿಸುತ್ತಲೇ ಇದ್ದಾರೆ. ಜೀವನಕಾಲದಲ್ಲಿ ಸ್ವಾರ್ಥಕ್ಕಾಗಿ ಮಾಡುವವು, ಮಾಡದಿರುವವು ಮಾಡಿ ಪುಣ್ಯ ಪಾಪ ಸಂಪಾದಿಸಿಕೊಳ್ಳುತ್ತಿದ್ದಾರೆ. ಮಾಡುವ ಕೆಲಸಗಳಲ್ಲಿ ಕಣ್ಣಿಗೆ ಕಾಣಿಸದಂತೆ ಬರುವ ಪಾಪಪುಣ್ಯ ಭೀತಿ ಸ್ವಲ್ಪವೂ ಸಹ ಇಲ್ಲದಂತೆ ಇದ್ದಾರೆ. ಮಾಡುವ ಕೆಲಸಗಳಲ್ಲಿ ಪಾಪ ಬರುತ್ತದೆಂದು ತಿಳಿದರೂ ಯಮಲೋಕಕ್ಕೆ ಹೋದದಿನವಲ್ಲವೆ ನರಕ ಅನುಭವಿಸುವುದು, ಯಾವಾಗಲೋ ಬರುವ ನರಕಕ್ಕೆ ಭಯಪಟ್ಟು ಈದಿನ ನಮಗೆ ಅನುಕೂಲವಾದ ಕೆಲಸಗಳನ್ನು ಏಕೆ ಬಿಡಬೇಕೆಂದು, ನರಕ ಬಂದ ದಿನ ನೋಡೋಣ ಬಿಡು ಎಂದು ಅಂದುಕೊಳ್ಳುತ್ತಿದ್ದಾರೆ. ಪಾಪಪುಣ್ಯಗಳು ಇವೆಯೆಂದು ತಿಳಿದಿದೆ, ಅದನ್ನು

ತಪ್ಪದೆ ಅನುಭವಿಸಬೇಕೆಂಬುವುದು ತಿಳಿದಿದೆ, ಆದರೆ ಸ್ವಲ್ಪವೂ ಭಯವಿಲ್ಲದೆ ಮಾಡುತ್ತಿದ್ದಾರೆಂದರೆ ಅದರ ನಿಜಸ್ಥಿತಿ ತಿಳಿದುಕೊಳ್ಳಲಿಲ್ಲವೆಂದು ಅರ್ಥವಾಗುತ್ತಿದೆ.

ಕರ್ಮ ಕಾರಣದಿಂದ ಜೀವಿಯು ಭೂಮಿಮೇಲೆ ಹುಟ್ಟುತ್ತಿದ್ದಾನೆ. ಕರ್ಮ ಎಂದರೆ ಪಾಪಪುಣ್ಯಗಳ ಮಿಶ್ರಣ. ಪಾಪದಿಂದ ನರಕ, ಪುಣ್ಯದಿಂದ ಸುಖ ಸಂಭವಿಸುತ್ತಿದೆ. ಸ್ವಲ್ಪ ಜನರನ್ನು ಕೇಳಿದಾಗ ನರಕ ಯಮಲೋಕದಲ್ಲಿ, ಸ್ವರ್ಗ ದೇವೇಂದ್ರಲೋಕದಲ್ಲಿ ಇವೆಯೆಂದು ತಿಳಿಸುತ್ತಿದ್ದಾರೆ. ಮತ್ತು ಪಾಪ ಮಾಡಿದವರನ್ನು ಯಮಲೋಕದಲ್ಲಿ ಯಮನೂ, ಯಮಕಿಂಕರರು ಅನೇಕ ಹಿಂಸೆಗಳು ಕೊಡುತ್ತಿದ್ದಾರೆಂದು, ಅಲ್ಲಿ ಶಿಕ್ಷೆಗಳೆಲ್ಲವೂ ಅನುಭವಿಸಿದ ನಂತರ ಪುಣ್ಯ ಇದ್ದರೆ ಸ್ವರ್ಗಲೋಕಕ್ಕೆ ಹೋಗಿ ಸುಖಗಳು ಅನುಭವಿಸುತ್ತಿದ್ದಾರೆಂದು ಹೇಳುತ್ತಿದ್ದಾರೆ. **ಗೀತೆಯಲ್ಲಿ ಸಾಂಖ್ಯಯೋಗದಲ್ಲಿ "ಜೀವಿಯು ಶರೀರವನ್ನು ಬಿಟ್ಟ ನಂತರ ತಾಯಿ ಗರ್ಭದಲ್ಲಿ ಪೂರ್ತಿ ತಯಾರಾಗಿ ಪ್ರಸವಿಸಲ್ಪಟ್ಟ ಮತ್ತೊಂದು ಶಿಶುಶರೀರದಲ್ಲಿ ಹೋಗಿ ಸೇರುತ್ತಿದ್ದಾನೆ. ಹೇಗೆಂದರೆ 'ಹಳೆ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದಂತೆ" ಎಂದು ಭಗವಂತನು ಹೇಳಿರುವಾಗ** ನಾವು ಅಜ್ಞಾನದಿಂದ ಜೀವಿಯು ಮತ್ತೊಂದು ಕಡೆ ಇರುವ ಯಮಲೋಕಕ್ಕೆ ಹೋಗುತ್ತಾನೆಂದು ಅಂದುಕೊಳ್ಳುತ್ತಿದ್ದೇವೆ. ಹಾಗೆ ನಡೆಯುತ್ತಿಲ್ಲವೆಂದು ತಿಳಿದವರು ಹೇಳಿದಾಗ ಕೆಲವರು ಕೇಳದೆ, ಜೀವಿಗಳು ಯಮಲೋಕಕ್ಕೆ ಹೋಗಿ ನರಕವನ್ನು ಅನುಭವಿಸದೆಹೋದರೆ ಯಮಧರ್ಮರಾಜ ಎಲ್ಲಿಗೆ ಹೊಗುತ್ತಾನೆ? ಯಮ ಕಿಂಕರರು ಎಲ್ಲಿಗೆ ಹೋಗುತ್ತಾರೆ? ಯಮಲೋಕ ಏಕೆ? ಎಂದು ವಾದಿಸುತ್ತಿದ್ದಾರೆ. ಇವರ ಮಾತಿನ ಪ್ರಕಾರ ಹೋದರೂ ಗೀತೆಯಲ್ಲಿ ಹೇಳಿದ ವಾಕ್ಯ ಅಸತ್ಯವಾಗುತ್ತದೆ. ಸರೀ ಗೀತೆ ಪ್ರಕಾರ ಹೋದರು ಇವರ ವಾದ ಅಸತ್ಯವಾಗುತ್ತದೆ. ಎರಡು ಗಟ್ಟಿ ವಾದನಗಳೇ ಆಗಲಿ ಪರಮಾತ್ಮನ ವಾದನೆ ಎಂದಿಗೂ ಅಸತ್ಯವಾಗುವುದಿಲ್ಲ. ಮಾನವರ ವಾದವೂ ಸಹ ಅಸತ್ಯವಲ್ಲ ಆದರೆ ಸ್ವಲ್ಪ ತಿಳಿದುಕೊಳ್ಳಬೇಕಾಗಿದೆ.

ಮಾನವರು ಹುಟ್ಟಿದ್ದು ಮೊದಲು ಕಷ್ಟಸುಖಗಳು ಅನುಭವಿಸುತ್ತಿದ್ದಾರೆ. ಸ್ವಲ್ಪಜನ ಹೆಚ್ಚು ಸುಖ ಅನುಭವಿಸುತ್ತಿದ್ದಾರೆ. ಸ್ವಲ್ಪಜನ ಹೆಚ್ಚಾಗಿ ಕಷ್ಟವನ್ನನುಭವಿ

ಸುತ್ತಿದ್ದಾರೆ. ಒಬ್ಬನು ಯಾವ ಕೆಲಸ ಮಾಡದೆ ಸುಮ್ಮನಿದ್ದರೂ ಅಷ್ಟೈಶ್ವರ್ಯಗಳು ಅನುಭವಿಸುತ್ತಿದ್ದಾನೆ. ಒಬ್ಬನು ದಿನವೆಲ್ಲವೂ ಎಷ್ಟು ಶ್ರಮಪಡುತ್ತಿದ್ದರೂ ಅವನಿಗೆ ಹೊಟ್ಟೆತುಂಬ ಅನ್ನ ಸಿಗುತ್ತಿಲ್ಲ. ಪರಮಾತ್ಮ ಅಂಶ ಎಲ್ಲರಲ್ಲಿಯೂ ಸಮಾನವಾದರೂ ಸ್ವಲ್ಪಜನರಿಗೆ ಕಷ್ಟ ಏಕೆ ಸಂಭವಿಸುತ್ತಿದೆ ಎಂದು ಯಾರು ಆಲೋಚಿಸುತ್ತಿಲ್ಲ. ಹಣ ಇರುವವನು ಸುಖಪಡುತ್ತಿದ್ದಾನೆ, ಇಲ್ಲದವನು ಬಾಧೆಪಡುತ್ತಿದ್ದಾನೆಂದು ಅಂದುಕೊಳ್ಳುತ್ತಿದ್ದಾರೆ. ಆದರೆ ಕಷ್ಟಸುಖಗಳಿಗೆ ಮೂಲಕಾರಣವಾದ ಪಾಪ ಪುಣ್ಯಗಳನ್ನು ಸ್ವಲ್ಪವೂ ಗ್ರಹಿಸದೆ ಇದ್ದಾರೆ. ತಾನು ಕಷ್ಟಪಡುತ್ತಾ ಇತರರ ಕಷ್ಟಗಳನ್ನು ನೋಡುತ್ತಿದ್ದರೂ, ಇವು ಎಲ್ಲಿಯವು ಎಂದು ಆಲೋಚಿಸುತ್ತಿಲ್ಲ. ನಾವು ಪೂರ್ವಜನ್ಮದಲ್ಲಿ ಸಂಪಾದಿಸಿಕೊಂಡ ಪಾಪಪುಣ್ಯ ಫಲಿತವಲ್ಲವೆ! ಎಂದು ತಿಳಿದುಕೊಳ್ಳಲಿಲ್ಲ. ಒಂದುವೇಳೆ ತಿಳಿದವರು ಹೇಳಿದರು ನಂಬಲಾರದಿದ್ದಾರೆ. ಯಾರು ನಂಬಿದರೂ ನಂಬದೆಹೋದರೂ ಪೂರ್ವಜನ್ಮದಲ್ಲಿ ಮಾಡಿದ ಪಾಪಪುಣ್ಯವೇ ಈ ಜನ್ಮದಲ್ಲಿ ತನಗೆ ತಿಳಿಯದೆಯೇ ಮಾನವನು ಅನುಭವಿಸುತ್ತಿದ್ದಾನೆ. ಅದು ಹೇಗೆಂದರೆ ಒಬ್ಬ ಉದ್ಯೋಗಿ ಒಂದು ತಿಂಗಳೆಲ್ಲವೂ ಕೆಲಸ ಮಾಡಿದರೆ ಅದರ ಫಲಿತವಾಗಿ ತಿಂಗಳ ಕೊನೆಯಲ್ಲಿ ಸಂಬಳ ಬರುತ್ತದೆ. ಆ ಸಂಬಳ ಎಂದರೆ ಮೊದಲ ತಿಂಗಳು ಮಾಡಿದ ಕೆಲಸದ ಫಲಿತ ಎರಡನೇ ತಿಂಗಳೆಲ್ಲವೂ ನಿತ್ಯಾವಸರ ವಸ್ತುಗಳಿಗಾಗಿ ವಿನಿಯೋಗಿಸುತ್ತಾ ಅನುಭವಿಸುತ್ತಾನೆ. ಹಾಗೆ ಒಬ್ಬ ಕೂಲಿಯವನು ದಿನವೆಲ್ಲವೂ ಹೊಲದಲ್ಲಿ ಕೆಲಸಮಾಡಿದಾಗ ಅದರ ಫಲಿತ ಎರಡನೇ ದಿನದಂದು ಅನುಭವಿಸುತ್ತಿದ್ದಾನೆ. ಮತ್ತು ರೈತನು ಒಂದು ವರ್ಷವೆಲ್ಲವೂ ಕಷ್ಟಬಿದ್ದು ವ್ಯವಸಾಯಮಾಡಿ ಬೆಳೆ ಬೆಳೆದಾಗ ಆ ಬೆಳೆಯನ್ನು ಎರಡನೇ ವರ್ಷ ಅನುಭವಿಸುತ್ತಿದ್ದಾನೆ. ಈ ವಿಧವಾಗಿಯೇ ಮಾನವನು ಒಂದು ಜನ್ಮದಲ್ಲಿ ಸಂಪಾದಿಸಿಕೊಂಡ ಪಾಪಪುಣ್ಯಗಳೊಂದರ ಫಲಿತ ಎರಡನೇ ಜನ್ಮದಲ್ಲಿಯೂ, ಎರಡನೇ ಜನ್ಮದಲ್ಲಿ ಸಂಪಾದಿಸಿಕೊಂಡ ಪಾಪಪುಣ್ಯಗಳನ್ನು ಮೂರನೆ ಜನ್ಮದಲ್ಲಿ ಅನುಭವಿಸುತ್ತಿದ್ದಾನೆ. ಆದ್ದರಿಂದ ಶ್ರೀಕೃಷ್ಣಪರಮಾತ್ಮ ಹೇಳಿದಂತೆ ಜೀವಿಯು ಶರೀರವನ್ನು ಬಿಟ್ಟ ತಕ್ಷಣ ಬೇರೆ ಶರೀರ ಧರಿಸುತ್ತಿದ್ದಾನೆ. ಆದರೆ ಯಮಲೋಕಕ್ಕೆ ಹೋಗಲಿಲ್ಲ. ಆದ್ದರಿಂದಲೇ ಜೀವಾತ್ಮ ಹಿಂದಿನ ಜನ್ಮದಲ್ಲಿ

ಮಾಡಿಕೊಂಡ ಪಾಪಪುಣ್ಯದ ಪ್ರಕಾರ ಭೂಮಿಮೇಲೆ ಕಷ್ಟ ಸುಖಗಳನ್ನು ಅನುಭವಿಸುತ್ತಿದ್ದಾನೆ. ಒಬ್ಬ ಜೀವಿ ಎಲ್ಲಾ ಕೆಟ್ಟಕೆಲಸಗಳನ್ನು ಮಾಡುತ್ತಿಲ್ಲ. ಹಾಗೆ ಎಲ್ಲಾ ಒಳ್ಳೆಯಕೆಲಸಗಳು ಮಾಡುತ್ತಿಲ್ಲ. ಒಳ್ಳೆಯ ಕೆಲಸಗಳಲ್ಲಿ ಪುಣ್ಯ, ಕೆಟ್ಟಕೆಲಸಗಳಲ್ಲಿ ಪಾಪ ಯಾರಿಗೂ ತಿಳಿಯದೇನೇ ಸಂಭವಿಸುತ್ತಿದೆ. ಆದ್ದರಿಂದ ಯಾವ ಜೀವಿಯಾದರೂ ಪಾಪಪುಣ್ಯ ಮಿಶ್ರಿತನಾಗಿರುತ್ತಾನೆ. ಜೀವಿಯು ತನ್ನ ಜೀವನಕಾಲ ಹೆಚ್ಚಾಗಿ ಒಳ್ಳೆಯ ಕಾರ್ಯಗಳನ್ನೇ ಮಾಡಿದ್ದರೆ ಪುಣ್ಯ ಹೆಚ್ಚಾಗಿ ಲಭಿಸಿರುತ್ತದೆ. ಹಾಗಲ್ಲದೆ ಜೀವನಕಾಲದಲ್ಲಿ ಹೆಚ್ಚಾಗಿ ಕೆಟ್ಟಕೆಲಸಗಳು ಮಾಡಿದ್ದರೆ ಪಾಪ ಹೆಚ್ಚಾಗಿ ಸಂಭವಿಸಿರುತ್ತದೆ. ಆದ್ದರಿಂದಲೇ ಒಬ್ಬ ಜೀವಿಯು ಹೆಚ್ಚಾಗಿ ಸುಖ ಅನುಭವಿಸುವುದು, ಒಬ್ಬ ಜೀವಿ ಹೆಚ್ಚಾಗಿ ಕಷ್ಟ ಅನುಭವಿಸುವುದು ಭೂಮಿಮೇಲೆ ನಡೆಯುತ್ತಿದೆ.

ಯಮಧರ್ಮರಾಜ ಎಲ್ಲಿ? ಯಮಕಿಂಕರರು ಎಲ್ಲಿ? ಯಮಲೋಕ ಎಲ್ಲಿ? ಎನ್ನುವ ಪ್ರಶ್ನೆಗಳಿಗೆ ಸಮಾಧಾನ ಏನೆಂದರೆ! ಗೀತಾಶಾಸ್ತ್ರದಲ್ಲಿ **'ದಂಡನಾಧಿಕಾರಿಗಳಲ್ಲಿ ಯಮನು ನಾನು'** ಎಂದು ಪರಮಾತ್ಮ ಹೇಳಿದ್ದಾನೆ. ಆದ್ದರಿಂದ ಯಮಧರ್ಮರಾಜ ಎಲ್ಲಾ ಶರೀರಗಳಲ್ಲಿ ನಿವಾಸಿಸುವ ಆತ್ಮ ಎಂದೂ, ಯಮಕಿಂಕರರು ಆತ್ಮದಿಂದ ಪ್ರೇರೇಪಿತವಾಗಿ ಒಬ್ಬ ಜೀವಿಯನ್ನು ಬಾಧಿಸುವ ಎಲ್ಲಾ ರೂಪಗಳು ಎಂದು ತಿಳಿಯುತ್ತಿದೆ. ಆದ್ದರಿಂದ ದೊಡ್ಡವರು **'ನಾನಾ ರೂಪೇಣ ಕಾಲ ಕಿಂಕರಃ'** ಎಂದು ಹೇಳಿದ್ದಾರೆ. ಇನ್ನು ಯಮಲೋಕ ಎಂದರೂ ಜೀವಿಯು ಕಷ್ಟಪಡುವ ಸ್ಥಳವೇ ಎಂಬಮಾತು. ಆದ್ದರಿಂದ ಭೂಲೋಕವೇ ಯಮಲೋಕವೆಂದು ತಿಳಿಯುತ್ತಿದೆ. ಪಾಪಕಾರಣವಾದ ಕಷ್ಟಗಳನ್ನು ಯಮಧರ್ಮರಾಜಾ? ಅಥವಾ ಯಮಕಿಂಕರರಾ? ಬಾಧಿಸುತ್ತಿರುವುದು ಅನ್ನುವ ಅನುಮಾನ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ತನ್ನ ಶರೀರದಿಂದ ಬರುವ ಬಾಧೆಗಳೆಲ್ಲವೂ ಯಮಧರ್ಮರಾಜ ವಿಧಿಸಿರುವವೆ ಎಂದು, ಹಾಗಲ್ಲದೆ ತನ್ನಗಿಂತ ಇತರ ರೂಪಗಳಿಂದ ಬರುವ ಪ್ರತಿ ಬಾಧೆ ಯಮಕಿಂಕರರು ವಿಧಿಸಿರುವವೇ ಎಂದು ತಿಳಿಯುತ್ತಿದೆ. ನಮ್ಮ ಶರೀರದಲ್ಲಿ

ಎಲ್ಲವೇಳೆಗಳಲ್ಲಿ ಆತ್ಮ ಇದೆ ಅಲ್ಲವೆ! ಆತ್ಮಕ್ಕೆ ತಿಳಿಯದೆ ಏನೂ ಮಾಡಲಾರೆವು, ಆದ ಕಾರಣ ಸರ್ವಕೆಲಸಗಳಿಗೆ ಆತ್ಮ ಸಾಕ್ಷಿಯಾಗಿ ಇದೆ. ಶರೀರದಲ್ಲಿರುವ ಆತ್ಮವೇ ನವಗ್ರಹಗಳಿಂದ ಪಾಪಪುಣ್ಯಗಳನ್ನು ಗ್ರಹಿಸಿ ಕರ್ಮಚಕ್ರದಲ್ಲಿಟ್ಟು ಮರುಜನ್ಮದಲ್ಲಿ ಅನುಭವಿಸುವಂತೆ ಮಾಡುತ್ತಿದೆ.

ನಾವು ಪಾಪಪುಣ್ಯಗಳನ್ನು ಅನುಭವಿಸುತ್ತಿದ್ದರೂ, ಅವುಗಳನ್ನು ಮಾಯೆಯಿಂದ ಗ್ರಹಿಸಿಕೊಳ್ಳದಿದ್ದೇವೆ. ಮಾಯೆಯೇ ಪಾಪಪುಣ್ಯಗಳ ನಿಜಸ್ಥಿತಿಯನ್ನು ತಿಳಿಯದಂತೆ ಮಾಡುತ್ತಿದೆ. ಕುರುಡನು ಆನೆ ಕಾಲು ಹಿಡಿದುಕೊಂಡು ಸ್ಥಂಭವೆಂದುಕೊಂಡು ಆನೆಯನ್ನು ಗುರುತಿಸದೆ ಹೋದಂತೆ, ಮಾಯೆ ಎಂಬ ಕುರುಡುತನದಿಂದ ಕಣ್ಣುಗಳು ಕಾಣಿಸದವರು ಪಾಪಪುಣ್ಯಗಳನ್ನು ಅನುಭವಿಸುತ್ತಿದ್ದರೂ ಹೇಗೆ ಭ್ರಮಿಸುತ್ತಿದ್ದಾರೆಂದರೆ!

ನಮ್ಮ ಮೂಟೆಯನ್ನು ನಾವೇ ಹೊರುತ್ತಿದ್ದೇವೆಂದುಕೊಳ್ಳಿ, ಯಾರು ಹೊರೆಸಲಿಲ್ಲತಾನೆ! ನನ್ನ ಮೂಟೆಯನ್ನು ನಾನೇ ಹೊರುತ್ತಿದ್ದೇನಲ್ಲ! ಎಂದು ಅಂದುಕೊಳ್ಳುವುದೇ ಮಾಯೆ. ನಮ್ಮ ಮೂಟೆಯನ್ನು ನಾವು ಹೊರುತ್ತಿದ್ದರೂ, ಹೊರಿಸುವುದು ಬೇರೊಂದಿದೆ, ಅದೇ ಕರ್ಮ. ನಮ್ಮಲ್ಲಿರುವ ಮೂಟೆಯನ್ನು ಮತ್ತೊಂದು ಕಡೆಗೆ ತೆಗೆದುಕೊಂಡುಹೋಗಬೇಕೆಂಬ ಕರ್ಮ ಸಂಕಲ್ಪ ಇದ್ದರಲ್ಲವೆ! ನಾವು ಹೊರುತ್ತಿರುವುದು. ಪ್ರೇರೇಪಣೆಗೆ ಕಾರಣ ಕರ್ಮ. ಆದ್ದರಿಂದ ಆ ಕೆಲಸಕ್ಕೆ ಮೂಲ ಕರ್ಮ. ಮಾಡುತ್ತಿರುವ ಕೆಲಸ ನಮ್ಮದಾಗಲಿ ಅಥವಾ ಇನ್ನ್ಯಾರದಾಗಲಿ ಭಾರ ಹೊರುವುದೇ ಅಲ್ಲವೆ! ಮೂಟೆ ಭಾರದ ಬಾಧೆ ಅನುಭವಿಸುತ್ತಿರುವುದು ಜೀವಿಯೇ ತಾನೆ! ಆದ್ದರಿಂದ ಬಾಧೆಯನ್ನು (ಶಿಕ್ಷೆಯನ್ನು) ಅನುಭವಿಸುವವನು ಜೀವಾತ್ಮ. ಶಿಕ್ಷೆಯನ್ನು ವಿಧಿಸುವವನು ಕಾಲನು (ಆತ್ಮ) ಹಾಗೆ ಕರ್ಮ ಪ್ರೇರೇಪಣೆಯಿಂದ ಎಷ್ಟೋ ಕೆಲಸಗಳು ಮಾಡುತ್ತಾ, ಅದರಿಂದ ಸಂಭವಿಸುವ ಬಾಧೆಗಳನ್ನು ಅನುಭವಿಸುತ್ತಲೇ ಇದ್ದೇವೆ. ಒಬ್ಬ ಮಾನವನು ಗುಂಡು ಎತ್ತಿಕೊಂಡು ನನ್ನ ಅವಶ್ಯಕತೆಗೋಸ್ಕರ ನಾನು ಎತ್ತಿಕೊಂಡು ಹೋಗುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ನಿಜವಾಗಲು ನಡೆಯುತ್ತಿರುವುದು

ಪಾಪ ಅನುಭವಿಸುವುದು ಎಂದು ತಿಳಿದುಕೊಳ್ಳದೆ ಹೋಗಿದ್ದಾನೆ. ಸತ್ತುಹೋದ ನಾಯಿ ಶವವನ್ನು ಎಳೆಯುತ್ತಾ ಹೋಗುತ್ತಿರುವವನು ನನಗೆ ಈ ಸಮಯದಲ್ಲಿ ಯಮನು ನಾಯಿ ಶವವನ್ನು ಎಳೆಯುವ ಶಿಕ್ಷೆಯನ್ನು ವಿಧಿಸಿದ್ದಾನಲ್ಲವೆ! ಎಂದು ತಿಳಿದುಕೊಳ್ಳದೆ ಹೋಗುತ್ತಿದ್ದಾನೆ. ಬದನೆಕಾಯಿಯ ಪುಟ್ಟಿಯನ್ನು ಹೊತ್ತುಕೊಂಡು ವ್ಯಾಪಾರ ಮಾಡುತ್ತಿರುವವನು ನನಗೆ ಈ ಸಮಯದಲ್ಲಿ ಯಮನು ಬದನೆಕಾಯಿಯ ಪುಟ್ಟಿಯನ್ನು ತಲೆ ಮೇಲೆ ಹೊತ್ತುಕೊಂಡು, ಅದನ್ನು ಹೊರುತ್ತಾ ಊರೆಲ್ಲವೂ ತಿರುಗುವಂತೆ ಮಾಡುತ್ತಿದ್ದಾನಲ್ಲವೆ! ಎಂದು ತಿಳಿದುಕೊಳ್ಳದೆ ಹೋಗುತ್ತಿದ್ದಾನೆ. ನೆಗಡಿ ಆದ ಒಬ್ಬ ರೋಗಿ ಬೇರೆ ಬಾವಿನೀರು ಕುಡಿದಿರುವುದಕ್ಕೆ ನೆಗಡಿ ಆಗಿದೆಯೆಂದು ಮಾಯೆಯಿಂದ ಭ್ರಮಿಸುತ್ತಿದ್ದಾನೆ. ನೆಗಡಿಗೆ ಕಾರಣ ಪಾಪ, ಆ ಪಾಪವನ್ನು ಈಗ ಅನುಭವಿಸುವ ಸಮಯ ಬಂದಿದೆ ಆದ್ದರಿಂದ ಯಮನು ಆ ಪಾಪದ ಫಲಿತವಾಗಿ ನನಗೆ ನೆಗಡಿಯನ್ನು ಉಂಟುಮಾಡಿ ತಲೆನೋಯಿಸುತ್ತಿದ್ದಾನೆ ಎಂದು ತಿಳಿದುಕೊಳ್ಳದೆ ಹೋಗುತ್ತಿದ್ದಾನೆ. ಹೊಟ್ಟೆನೋವು ಇರುವವನು ಏಕೆ ಬಂದಿದೆ? ಒಳಗೆ ಬಾಧೆಯನ್ನು ಯಾರು ವಿಧಿಸುತ್ತಿದ್ದಾರೆ? ಎಂದು ತಿಳಿದುಕೊಳ್ಳದೆ ಹೋಗುತ್ತಿದ್ದಾನೆ. ಆದರೆ ಜ್ಞಾನಿಯಾದವನು ತಪ್ಪು ಇಲ್ಲದೆ ಶಿಕ್ಷೆ ಇರುವುದಿಲ್ಲ, ಆದ್ದರಿಂದ ಪ್ರತಿ ಬಾಧೆಯನ್ನು ಯಮನು ನ್ಯಾಯವಾಗಿ ಎಷ್ಟು ವಿಧಿಸಬೇಕೊ ಅಷ್ಟೇ ವಿಧಿಸುತ್ತಾನೆ, ಎಂದು ತಿಳಿಯುತ್ತಾನೆ. ಯಮನು ನಮ್ಮಲ್ಲಿಯೇ ವಾಸವಿದ್ದು ಕೆಲಸಗಳನ್ನು ಪ್ರೇರೇಪಿಸುತ್ತಿದ್ದಾನೆ. ಒಬ್ಬನನ್ನು ರೈಲುಕೆಳಗೆ ಬೀಳುವಂತೆ ಮಾಡಿ ಅವನಿಗೆ ಎಷ್ಟು ಬಾಧೆ ಉಂಟಾಗಬೇಕೋ ಅಷ್ಟೇ ಬಾಧೆಪಡುವಂತೆ, ಎಷ್ಟು ಹೊಡೆತ ತಗಲಬೇಕೊ ಅಷ್ಟೇ ತಗಲುವಂತೆ ಮಾಡುತ್ತಿದ್ದಾನೆ. ಈ ವಿಧವಾಗಿ ಎಷ್ಟೋ ಕರ್ಮಗಳನ್ನು ನಾವು ನಿತ್ಯ ಅನುಭವಿಸುತ್ತಿದ್ದರೂ, ಮಾಯೆಯಿಂದ ಸ್ವಲ್ಪವೂ ತಿಳಿದುಕೊಳ್ಳದೆ ಯಮನು ಎಲ್ಲಿಯೋ ಇದ್ದಾನೆ, ಯಮಲೋಕ ಎಲ್ಲಿಯೋ ಇದೆಯೆಂದು ಅಂದು ಕೊಳ್ಳುತ್ತಿದ್ದೇವೆ. ಹಾವನ್ನು ಇರುವೆಗಳು ಹಿಂಸಿಸುತ್ತಿವೆ ಆದರೆ ಹಾವಿನ ಪಾಲಿಗೆ ಆ ಸಮಯದಲ್ಲಿ ಇರುವೆಗಳು ಯಮಕಿಂಕರರೆಂದು ತಿಳಿದುಕೊಳ್ಳದೆ ಹೋಗುತ್ತಿದ್ದೇವೆ. ಇರುವೆಗಳನ್ನು ದೊಣ್ಣೆಕಾಟ ತಿನ್ನುತ್ತಿದೆ. ಆದರೆ ಆ ಸಮಯದಲ್ಲಿ

ಇರುವೆಗೆ ದೊಣ್ಣೆಕಾಟ ಯಮಕಿಂಕರನೆಂದು ಗ್ರಹಿಸಲಾರದೆ ಹೋಗುತ್ತಿದ್ದೇವೆ. ಕುರಿಯನ್ನು ಮನುಷ್ಯರು ಸೀಳಿಸಿಹಾಕುತ್ತಿದ್ದಾರೆ. ಕುರಿಗೆ ಆ ಸಮಯದಲ್ಲಿ ಯಮಕಿಂಕರರು ಮನುಷ್ಯನ ರೂಪದಲ್ಲಿದ್ದಾರೆಂದು ತಿಳಿದುಕೊಳ್ಳದೆ ಹೋಗುತ್ತಿದ್ದೇವೆ. ಅರಣ್ಯದಲ್ಲಿ ಒಂದು ಪ್ರಾಣಿಯನ್ನು ಹುಲಿ ಸೀಳಿಸಿಹಾಕುತ್ತಿದೆ ಅಂದುಕೊಳ್ಳೋಣ. ಆ ಸಮಯದಲ್ಲಿ ಆ ಪ್ರಾಣಿಗೆ ಹುಲಿ ಯಮಕಿಂಕರನು ಎಂದು ತಿಳಿದುಕೊಳ್ಳದೆ ಹೋಗುತ್ತಿದ್ದೇವೆ. ರಿಕ್ಷಾದಲ್ಲಿ ಒಬ್ಬನು ಕುಳಿತುಕೊಂಡಿದ್ದಾನೆ, ಒಬ್ಬನು ರಿಕ್ಷಾವನ್ನು ಕಷ್ಟಪಟ್ಟು ಎಳೆಯುತ್ತಿದ್ದಾನೆ. ರಿಕ್ಷಾದಲ್ಲಿ ಕುಳಿತುಕೊಂಡವನು ಸುಖವನ್ನು, ಗಾಡಿಯನ್ನು ಎಳೆಯುವವನು ಕಷ್ಟವನ್ನು ಅನುಭವಿಸುತ್ತಿದ್ದಾನೆ. ಅದನ್ನು ನೋಡಿದ ನಾವು ಕುಳಿತುಕೊಂಡವನು ಅವನ ಪುಣ್ಯದಿಂದ ಅನುಭವಿಸುತ್ತಿದ್ದಾನೆ, ರಿಕ್ಷಾವನ್ನು ಎಳೆಯುವವನು ಅವನೊಂದರ ಪಾಪವನ್ನು ಅನುಭವಿಸುತ್ತಿದ್ದಾನೆ ಎಂದು ಸ್ವಲ್ಪವೂ ನಾವು ತಿಳಿದುಕೊಳ್ಳದೆ ಹೋಗುತ್ತಿದ್ದೇವೆ. ಹೀಗೆ ಪ್ರಪಂಚದಲ್ಲಿ ನಿಜವಾಗಲು ಏನು ನಡೆಯುತ್ತಿದೆ ಎಂದು ಮಾಯೆಯಿಂದ ತಿಳಿದುಕೊಳ್ಳದೆ ಹೋಗುತ್ತಿದ್ದೇವೆ. ನಿಜವಾಗಿ ನಡೆಯುವುದು ಒಂದಾದರೆ ನಾವು ಅಂದುಕೊಳ್ಳುವುದು ಮತ್ತೊಂದು ಇರುತ್ತದೆ. ಮಾಯೆಯನ್ನು ಬಿಟ್ಟು ನಿಜವಾಗಿ ನಡೆಯುತ್ತಿರುವುದು ಏನು? ಮಾಡುತ್ತಿರುವವರು ಯಾರು? ಎಂದು ತಿಳಿದುಕೊಂಡರೂ ಯಮಲೋಕ ಎಲ್ಲಿರುವುದು, ಯಮಕಿಂಕರರು ಯಾರಾಗಿರುವುದು, ಯಮನು ಯಾರಾಗಿರುವುದು ನಿಜವಾಗಲು ತಿಳಿಯುತ್ತದೆ.

ಕೆಲವರು ಒಳ್ಳೆಯವರು "ನಾವು ಕೆಟ್ಟಕೆಲಸಗಳು ಮಾಡಲಿಲ್ಲವಲ್ಲ! ಭಗವಂತನು ನಮ್ಮನ್ನೇ ಹೆಚ್ಚಾಗಿ ಕಷ್ಟದಲ್ಲಿ ಇಡುತ್ತಿದ್ದಾನೆ. ದುರ್ಮಾರ್ಗರು ಕೆಟ್ಟಕಾರ್ಯಗಳನ್ನು ಮಾಡುತ್ತಿದ್ದರೂ ಅವರನ್ನು ಸುಖವಾಗಿಡುತ್ತಿದ್ದಾನೆ. ದೇವರ ಹತ್ತಿರ ನ್ಯಾಯವಿದೆಯಾ"ಎಂದು ಅನ್ನುತ್ತಿದ್ದಾರೆ. ಕೆಲವರು ಮೂಢರು ದೈವಭಕ್ತರನ್ನು ನೋಡಿ "ಭಕ್ತರಿಗೂ ಸಹ ಕಷ್ಟಗಳಿರುತ್ತವಾ! ದೇವರು ನಿಮಗೆ ಕಷ್ಟ ಕೊಡುವುದಿಲ್ಲವಲ್ಲ!" ಎಂದು ಹೇಳನ ಮಾಡುತ್ತಿದ್ದಾರೆ. ಇದಕ್ಕೆ ಸಮಾಧಾನ, "ಯಾರ ಪಾಪವನ್ನಾದರೂ ಯಾರ ಪುಣ್ಯವನ್ನಾದರೂ ಆತ್ಮ ತೊಲಗಿಸುವುದಿಲ್ಲ"

ಎಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ಮತ್ತು "ನನಗೆ ಯಾರ ಪಾಪಪುಣ್ಯ ಸಂಬಂಧ ಇಲ್ಲ" ಎಂದು ಸಹ ಹೇಳಿದ್ದಾನೆ. ಆದ್ದರಿಂದ ಈ ಜನ್ಮದಲ್ಲಿ ಒಳ್ಳೆಯವರಾದರೂ ಹಿಂದಿನ ಜನ್ಮದ ಪಾಪ ಫಲಿತದಿಂದ ಕಷ್ಟಗಳು ಬರುತ್ತಿರುತ್ತವೆ. ಅಷ್ಟು ಮಾತ್ರಕ್ಕೆ ದೇವರ ಹತ್ತಿರ ನ್ಯಾಯವಿದೆಯಾ ಎಂದು ಒಳ್ಳೆಯವರು ಅನ್ನಬಾರದು. ದುಷ್ಟರು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯಫಲಿತದಿಂದ ಸುಖಗಳು ಈ ಜನ್ಮದಲ್ಲಿ ಅನುಭವಿಸುತ್ತಿರುತ್ತಾರೆ. ಈ ಜನ್ಮದಲ್ಲಿ ಮಾಡಿದ ಪಾಪ ಕೆಲಸಗಳ ಫಲಿತ ಮತ್ತೆ ಬರುವ ಜನ್ಮದಲ್ಲಿ ತಪ್ಪದೆ ಅನುಭವಿಸುತ್ತಾರೆ. ಹಾಗೆ ಈ ಜನ್ಮದಲ್ಲಿ ಒಳ್ಳೆಯವರು ಮಾಡಿದ ಒಳ್ಳೆಕೆಲಸದ ಫಲಿತ, ಮತ್ತೆ ಬರುವ ಜನ್ಮದಲ್ಲಿ ತಪ್ಪದೆ ಅನುಭವಿಸುತ್ತಾರೆ. ಭಕ್ತರೂ ಸಹ ಕಷ್ಟವನ್ನನುಭವಿ ಸುವುದಕ್ಕೆ ಕಾರಣ ಹೋದ ಜನ್ಮದಲ್ಲಿ ಮಾಡಿಕೊಂಡ ಪಾಪವೆ. ಈಗ ಕೆಲವರು ಈ ವಿಧವಾಗಿ ಕೇಳಬಹುದು. ಪಾಪ ಮಾಡಿದರು ಅದರ ಫಲಿತವು ಅನುಭವಿಸಬೇಕಾಗಿದ್ದೇನಾ? ಅಥವಾ ತಪ್ಪಿಸಿಕೊಳ್ಳುವುದಕ್ಕೆ ಬೇರೆ ಮಾರ್ಗ ಇದೆಯಾ? ಅದಕ್ಕೆ ಉತ್ತರ ಜ್ಞಾನಯೋಗದಲ್ಲಿ " **ಅಖಿಲ ಪಾಪಾತ್ಮರಲ್ಲಿ ನೀನೆಷ್ಟು ಅಧಮ ಪಾಪಯುತನಾದರೂ ಕಲುಷ ಜಲದಿಯನ್ನು ನೌಕೆಯಿಂದ ದಾಟಿದಂತೆ ಜ್ಞಾನವೆಂಬ ನೌಕೆಯಿಂದ ಪಾಪವನ್ನು ದಾಟುತ್ತೀಯಾ.**" ಎಂದು ಪರಮಾತ್ಮ ಹೇಳಿದ್ದಾನೆ. ಆದ್ದರಿಂದ ಎಂತಹ ಪಾಪಾತ್ಮನಾದರೂ ಜ್ಞಾನದಿಂದ ತಪ್ಪಿಸಿಕೊಳ್ಳ ಬಹುದು. ಅಗ್ನಿಗೆ ಕಟ್ಟಿಗೆಗಳನ್ನು ಸುಡುವ ಗುಣ ಇರುವಂತೆ, ಜ್ಞಾನಕ್ಕೆ ಪಾಪವನ್ನು ನಶಿಸುವಂತೆ ಮಾಡುವ ಗುಣವಿದೆ. ಆದ್ದರಿಂದ ಯಾರಾದರೆ ಜ್ಞಾನವನ್ನು ಅರ್ಥಮಾಡಿಕೊಳ್ಳುತ್ತಾನೋ ಅವನ ಪಾಪವು ಜ್ಞಾನಾಗ್ನಿಯಿಂದ ದಹಿಸಲ್ಪಟ್ಟು, ಅನುಭವಿಸಬೇಕಾಗಿರುವುದರಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಜ್ಞಾನ ಬೇಕೆಂದರೂ ಪರಮಾತ್ಮನನ್ನು ಆಶ್ರಯಿಸಬೇಕಾಗಿದ್ದೆ. ಸ್ವಲ್ಪಜನ ಭಕ್ತರು ಜ್ಞಾನಮಾರ್ಗವನ್ನು ಅನುಸರಿಸಿ ಪ್ರಪಂಚದಲ್ಲಿ ಬರುವ ಕಷ್ಟಗಳಿಗೆ ಸಹಿಸಿಕೊಳ್ಳದೆ ನಾವು ಪರಮಾತ್ಮನ ಭಕ್ತರು ಅಲ್ಲವೆ! ಜ್ಞಾನ ಇರುವವರು ಅಲ್ಲವೆ! ನಮಗೇ ಕಷ್ಟಗಳು ಬರುತ್ತಿವೆ ಎಂದು ಜ್ಞಾನಮಾರ್ಗವನ್ನೇ ಬಿಟ್ಟುಹೋಗುತ್ತಿದ್ದಾರೆ. ಇದರಿಂದ ದೇವರ ಮಾತನ್ನೇ ಅಸತ್ಯವೆನ್ನುವಂತೆ ಮಾಡುತ್ತಿದ್ದಾರೆ. ಪರಮಾತ್ಮ ಹೇಳಿದ

ಮಾತು ಎಂದಿಗೂ ಅಸತ್ಯ ಅಲ್ಲವೆಂದು ತಿಳಿದುಕೊಳ್ಳದೆ ಹೋಗಿದ್ದಾರೆ. ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳಾದರೂ ಸುಟ್ಟುಹೋಗುವ ವಿಧವಾಗಿ ಜ್ಞಾನಾಗ್ನಿಯಲ್ಲಿ ಸರ್ವ ಕರ್ಮಚಯವು ಭಸ್ಮವಾಗುತ್ತದೆ. ಪಾಪಪುಣ್ಯಗಳೆರಡನ್ನು ಇಲ್ಲದಂತೆ ಸವೆದುಹೋಗುವುದಕ್ಕೆ ಪ್ರಾರಂಭಿಸಿ, ಸ್ವಲ್ಪಕಾಲಕ್ಕೆ ಎರಡೂ ಇಲ್ಲದಂತೆ ಹೋಗುವುದರಿಂದ ಜೀವಿಯು ಪರಮಾತ್ಮನಲ್ಲಿ ಐಕ್ಯವಾಗುತ್ತಿದ್ದಾನೆ. ಪರಮಾತ್ಮನನ್ನು ಸ್ವಲ್ಪಕಾಲ ನಂಬಿದಷ್ಟು ಮಾತ್ರಕ್ಕೆ ಕರ್ಮ ಎಲ್ಲವೂ ಹೋಗಬೇಕೆಂದರೆ ಹೇಗಾಗುತ್ತದೆ? ಒಂದು ಹೊರೆ ಕಟ್ಟಿಗೆಗಳನ್ನು (ಸೌದೆ) ಸುಡುವುಕ್ಕೆ ಗಂಟೆಕಾಲ ಹಿಡಿಯುತ್ತದೆ. ಒಂದು ಗಾಡಿಯ ಸೌದೆಗಳನ್ನು ಸುಡುವುದಕ್ಕೆ ಒಂದು ದಿನ ಹಿಡಿಯುತ್ತದೆ. ಹಾಗೆ ನೂರು ಗಾಡಿಗಳ ಸೌದೆಗಳನ್ನು ಸುಡುವುದಕ್ಕೆ ಕೆಲವು ತಿಂಗಳು ಹಿಡಿಯುತ್ತದೆ. ಸೌದೆ ಹೆಚ್ಚಾದಂತೆಲ್ಲ ಸುಡುವ ಕಾಲ ಹೆಚ್ಚಾಗುತ್ತದೆ. ಹಾಗೆ ಕರ್ಮ ಎನ್ನುವ ಸೌದೆಯನ್ನು ಜ್ಞಾನಾಗ್ನಿ ಸುಡುತ್ತಲೇ ಇರುತ್ತದೆ. ಕರ್ಮ ಪೂರ್ತಿದಹಿಸಲ್ಪಡುವ ವರೆಗೂ ಜೀವಿಯು ಪ್ರಾರಬ್ಧಕರ್ಮವನ್ನು ಅನುಭವಿಸಬೇಕಾಗಿರುತ್ತದೆ. ಭಕ್ತರು ಕರ್ಮವನ್ನು ಒಂದು ಕಡೆ ಅನುಭವಿಸುತ್ತಿರುವಾಗ ಮತ್ತೊಂದುಕಡೆ ಜ್ಞಾನಾಗ್ನಿ ಕರ್ಮವನ್ನು ಸುಡುತ್ತಿರುತ್ತದೆ ಎಂದು ತಿಳಿಯುತ್ತಿದೆ.

ಯಮಲೋಕ ಇಲ್ಲೇ ಇದೆ, ಯಮಧರ್ಮರಾಜ, ಯಮಕಿಂಕರರೂ ಸಹ ಇಲ್ಲಿಯೇ ಇದ್ದಾರೆ. ನಾವು ಅನುಭವಿಸುವ ಕಷ್ಟಗಳೇ ನರಕ ಎಂದೂ, ದೇವತೆಗಳು ದೇವೇಂದ್ರನು ದೇವಲೋಕ ಎಲ್ಲ ಇಲ್ಲೇ ಇದೆಯೆಂದು, ನಾವು ಅನುಭವಿಸುವ ಸುಖಗಳೇ ಸ್ವರ್ಗಸುಖಗಳೆಂದು ತಿಳಿಯುತ್ತಿದೆ. ಆದ್ದರಿಂದ ವಾಸ್ತವ ತಿಳಿದುಕೊಂಡು ಯಮಲೋಕ ಸ್ವರ್ಗಲೋಕಗಳಿಗೆ ಸಿಗದೆ ಇರುವ ಪರಮಾತ್ಮನನ್ನು ಸೇರಬೇಕೆಂದು ಕೋರುತ್ತಿದ್ದೇವೆ.

# ದೇವತೆಗಳು – ರಾಕ್ಷಸರು

ಪ್ರಪಂಚದಲ್ಲಿ ಅನೇಕ ಮಂದಿ ದೇವತೆಗಳು ಇದ್ದಾರೆ. ಮತ್ತು ರಾಕ್ಷಸರೂ ಇದ್ದಾರೆ. ಪ್ರಪಂಚದಲ್ಲಿ ಎರಡೇ ಜಾತಿಗಳು ಮಾನವರಲ್ಲಿ ಆದಿಯಿಂದ ಇಲ್ಲಿಯವರೆಗೂ ಇವೆ. ಅವುಗಳೇ 1) ದೇವ ಜಾತಿ 2) ರಾಕ್ಷಸ ಜಾತಿ. ಜ್ಞಾನ ಇರುವವರು ಈ ಎರಡನ್ನು ಗುರುತಿಸಬಹುದು. ಮತ್ತು ತಾನು ಯಾವಜಾತಿ ಯವನಾಗಿರುವುದು ತಿಳಿದುಕೊಳ್ಳಬಹುದು. ಈ ಎರಡು ಜಾತಿಗಳು ಹೇಗೆ ಏರ್ಪಡುತ್ತಿವೆ ಎಂದರೆ! ಗುಣಗಳನ್ನನುಸರಿಸಿ ಎಂದು ತಿಳಿಯುತ್ತಿದೆ. ಈ ಗುಣಗಳಿರುವವರು ರಾಕ್ಷಸರೆಂದು, ಈ ಗುಣಗಳಿರುವವರು ದೇವತೆಗಳೆಂದು ಗುರುತಿಸಲಾಗುತ್ತದೆ. ಭಗವದ್ಗೀತೆಯಲ್ಲಿ "ದೈವಾಸುರ ಸಂಪದ್ವಿಭಾಗ ಯೋಗ"ದಲ್ಲಿ ಭಗವಂತನು ದೇವತೆಗಳ ಗುಣಗಳನ್ನು, ರಾಕ್ಷಸ ಗುಣಗಳನ್ನು ತಿಳಿಸಿದ್ದಾನೆ. ಮತ್ತು ಅವರ ಪ್ರವರ್ತನೆಗಳನ್ನೂ ಸಹ ತಿಳಿಸಿದ್ದಾನೆ. ಇನ್ನೂ ಶ್ರೀಕೃಷ್ಣಪರಮಾತ್ಮ ಏನಂದಿದ್ದಾನೆಂದರೆ ***"ದ್ವೌಭೂತ ಸರ್ಗೌ ಲೋಕೇಸ್ಮಿನ್ ದೈವಾಸುರ ಏವಚ"*** ಲೋಕದಲ್ಲಿ ದೇವತೆಗಳು, ರಾಕ್ಷಸರು ಎನ್ನುವ ಎರಡು ವಿಧಗಳಾಗಿ ಜೀವರಾಶಿಗಳು ಭೂಮಿ ಮೇಲೆ ಹುಟ್ಟುತ್ತಿವೆ" ಅಂದಿದ್ದಾನೆ. ಆದ್ದರಿಂದ ಭೂಮಿಮೇಲೆಯೇ ದೇವತೆಗಳು, ರಾಕ್ಷಸರು ಇದ್ದಾರೆಂದು ತಿಳಿಯುತ್ತಿದೆ.

ದೇವತೆಗಳು ಮೂವತ್ತು ಮೂರುಕೋಟಿ ಇರುತ್ತಾರೆಂದು ಒಂದು ಪ್ರತೀತಿ. ಅವರು ಎಷ್ಟುಜನ ಆದರೂ ವಿಷ್ಣು, ಈಶ್ವರ, ಬ್ರಹ್ಮ ಮೊದಲುಗೊಂಡು ಇಂದ್ರನು ಇಂದ್ರ ಪರಿಪಾಲನೆಯಲ್ಲಿರುವ ದಿಕ್ಪಾಲಕರು ದೇವತೆಗಳೇ ಅಲ್ಲವೆ! ಅವರು ಎಲ್ಲಿ ಇದ್ದಾರೆ? ಅವರು ಭೂಮಿಮೇಲೆ ಎಲ್ಲಿ ಗುರುತಿಸಲ್ಪಡುವುದಿಲ್ಲವೆ ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಪರಮಾತ್ಮ ಹೇಳಿದಂತೆ ದೇವತೆಗಳು ಎಲ್ಲರೂ ಭೂಮಿಮೇಲೆಯೇ ಇದ್ದಾರೆ ಆದರೆ ನಾವು ಗುರುತಿಸಲಾರದೆ ಹೋಗುತ್ತಿದ್ದೇವೆ. ನಮಗೆ ದೃಷ್ಠಿಯಿಲ್ಲದೆ ಎದುರಿಗೆ ಏನು ಇಲ್ಲವೆನ್ನುವಂತೆ ನಾವು ಅವರನ್ನು ನೋಡಲಾರದೆ ದೇವತೆಗಳು ಭೂಮಿ ಮೇಲೆ ಇಲ್ಲವೆನ್ನುತ್ತಿದ್ದೇವೆ. ನಮಗಿರುವ ಸ್ಥೂಲ ಕಣ್ಣುಗಳಿಂದ ನೋಡಿದರು ಎಲ್ಲಾ ಮಾನವಾಕಾರಗಳೆ ಕಾಣಿಸುತ್ತವೆ. ಆದರೆ ಮಾನವಾಕಾರ

ಗಳಲ್ಲಿರುವ ದೈವತ್ವ ಸ್ವಲ್ಪವೂ ಕಾಣಿಸುವುದಿಲ್ಲ. ಮಾನವರಲ್ಲಿರುವ ದೈವತ್ವವನ್ನು ಕುರಿತು ಈತನು ಇಂತಹ ದೇವರೆಂದು ತಿಳಿದುಕೊಳ್ಳುವುದಕ್ಕೆ ಜ್ಞಾನದೃಷ್ಟಿ ಬೇಕು. ಜ್ಞಾನದೃಷ್ಟಿ ಇಲ್ಲದಿದ್ದರೂ ಸ್ಥೂಲದೃಷ್ಟಿಗೆ ಮೇಲಿನ ಆಕಾರಗಳೇ ಕಾಣಿಸುತ್ತವೆ. ಆದ್ದರಿಂದ ಎಲ್ಲರೂ ಮಾನವರೆ ಎಂದು ಅಂದುಕೊಳ್ಳೋಣ ಸ್ಥೂಲದೃಷ್ಟಿಯಿಂದ ದೇವತೆ ಗಳನ್ನು ಗುರುತಿಸಲಾರೆವು.

ಸ್ವಲ್ಪ ಸ್ವಲ್ಪ ಜ್ಞಾನಶಕ್ತಿ ಇರುವವರೆಲ್ಲರೂ ದೈವಾಂಶಪರರೆ ಅಂದರೆ ದೇವತೆಗಳೆ. ದೇವತೆಗಳು ಎಲ್ಲರೂ ಸಮಾನವಲ್ಲ. ಏಕೆಂದರೆ ಅವರಲ್ಲಿರುವ ಜ್ಞಾನಶಕ್ತಿ ಸಮಾನವಾಗಿರುವುದಿಲ್ಲ. ಅತ್ಯಧಿಕ ಜ್ಞಾನಶಕ್ತಿ ಇರುವವನು ವಿಷ್ಣು. ಅಲ್ಲಿಂದ ಯೋಗಶಕ್ತಿ ಕಡಿಮೆಯಾದಂತೆಲ್ಲ ಈಶ್ವರ, ಬ್ರಹ್ಮ ಮೊದಲುಗೊಂಡು ದಿಕ್ಪಾಲಕರವರೆಗೂ ಇರುತ್ತಾರೆ. ಹಾಗೆ ಅಜ್ಞಾನ ಇರುವವರು ರಾಕ್ಷಸರು. ಅವರೂ ಸಹ ಎಲ್ಲರು ಒಂದೇ ವಿಧವಾಗಿ ಇರುವುದಿಲ್ಲ. ಅವರ ಅಜ್ಞಾನದಿಂದ ಅವರಲ್ಲಿ ಚಿಕ್ಕ, ದೊಡ್ಡ ಎನ್ನುವ ಭೇದಗಳಿರುವುದಕ್ಕೆ ಸಾಧ್ಯವಿದೆ. ಇದರಿಂದ ಜ್ಞಾನಶಕ್ತಿ ಇರುವವರೆಲ್ಲರೂ ದೇವತೆಗಳೆಂದು, ಜ್ಞಾನಶಕ್ತಿ ಇಲ್ಲದವರೆಲ್ಲರೂ ರಾಕ್ಷಸರೆಂದು ತಿಳಿಯುತ್ತಿದೆ.

ದೇವತೆಗಳಾದ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದವರು ಈ ಕಲಿಯುಗ ದಲ್ಲಿಯೂ ಸಹ ಇದ್ದಾರಾ? ವಿಷ್ಣು, ಈಶ್ವರ, ಬ್ರಹ್ಮ ಮೊದಲಾದವರು ದೊಡ್ಡ ಜ್ಞಾನಿಗಳಾದರೂ ದೇವರಲ್ಲಿ ಐಕ್ಯವಾಗದೆ ಕಲಿಯುಗದಲ್ಲಿ ಸಹ ಇದ್ದಾರಾ? ಅವರಿಗೆ ಮೋಕ್ಷ ಇಲ್ಲವಾ? ಅವರೂ ಸಹ ಎಲ್ಲರಂತೆ ಜನ್ಮ ಎತ್ತುತ್ತಲೇ ಇರುತ್ತಾರಾ? ಎನ್ನುವ ಅನುಮಾನ ಎಲ್ಲರಿಗೂ ಬರಬಹುದು. ಅವರಿಗೆ ನನ್ನ ಸಮಾಧಾನ ಏನೆಂದರೆ! ದೇಶದಲ್ಲಿ ರಾಜ, ಯುವರಾಜ, ಮಂತ್ರಿ, ಮುಖ್ಯಮಂತ್ರಿ, ಸೇನಾಧಿಪತಿ ಎಂದು ಎಷ್ಟೋ ಪದವಿಗಳು ಇವೆ ಅಲ್ಲವೆ! ಮೊದಲಿನಿಂದ ಒಬ್ಬನೇ ವ್ಯಕ್ತಿ ರಾಜನಾಗಿ, ಒಬ್ಬನೇ ವ್ಯಕ್ತಿ ಮಂತ್ರಿಯಾಗಿದ್ದಾರಾ, ಹಾಗೆ ಯಾರು ಇಲ್ಲ. ರಾಜ, ಮಂತ್ರಿ ಮೊದಲಾದ ಪದವಿಗಳು ಮಾತ್ರ ಹಾಗೆ ಇವೆ. ಆ ಪದವಿಗಳಲ್ಲಿ ಒಬ್ಬರ ನಂತರ ಒಬ್ಬರು ಅವರ ಯೋಗ್ಯತೆಯನ್ನನುಸರಿಸಿ ನಿರ್ಣ

ಯಿಸಲ್ಪಡುತ್ತಿದ್ದಾರೆ. ಈ ವಿಧವಾಗಿಯೇ ಪ್ರಪಂಚದಲ್ಲಿ ವಿಷ್ಣು, ಈಶ್ವರ, ಬ್ರಹ್ಮ ಅನ್ನುವ ಮೊದಲಾದ ಪದವಿಗಳು ಇವೆ. ಯೋಗಶಕ್ತಿಯನ್ನನುಸರಿಸಿ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದ ಪದವಿಗಳು ಜೀವಿಗಳಿಗೆ ಕೊಡಲಾಗುತ್ತಿದೆ. ಒಬ್ಬ ಜೀವಾತ್ಮ ಪ್ರಪಂಚವೆಲ್ಲದರಲ್ಲಿಯೂ ಯೋಗಶಕ್ತಿಯಲ್ಲಿ ಮೊದಲನೆಯವನಾಗಿದ್ದಾನೆ ಎಂದುಕೊಳ್ಳೋಣ. ಆ ಜೀವಿಯು ಒಂದು ಶರೀರವನ್ನು ಧರಿಸಿ ಭೂಮಿಮೇಲೆ ಹುಟ್ಟುತ್ತಾನೆ. ಯೋಗಶಕ್ತಿಯಲ್ಲಿ ಮೊದಲನೆಯವನಾದ್ದರಿಂದ ಮೊದಲನೆ ದೇವತಾ ಪದವಿಯಾದ ವಿಷ್ಣು ಪದವಿಗೆ ಆತನು ಅರ್ಹನು. ಆದ್ದರಿಂದ ಆ ಜೀವಿಯೇ ದೇಶದಲ್ಲಿ ವಿಷ್ಣು. ಆ ಜೀವಿಯು ಆ ಜನ್ಮದಲ್ಲಿ ಸಹ ಯೋಗ ಸಾಧಿಸಿ ಪೂರ್ತಿ ಯೋಗಶಕ್ತಿ ಸಂಪಾದಿಸಿಕೊಂಡವನಾಗಿ ದೇವರಲ್ಲಿ ಐಕ್ಯತೆ ಹೊಂದುತ್ತಿದ್ದಾನೆ. ಆದ್ದರಿಂದಲೇ ಪೂರ್ವಕಾಲದಲ್ಲಿ ವೈಕುಂಠದಲ್ಲಿರುವ ವಿಷ್ಣು ಸಹ ಯೋಗ ಮಾಡಿದಂತೆ ತಿಳಿಯುತ್ತಿದೆ. ಅದೇ ಅಂಶಕ್ಕೆ ತಕ್ಕಂತವರು ಎಷ್ಟೋ ಜನ ಯೋಗ ಮಾಡಿದಂತೆ ತಿಳಿಯುತ್ತಿದೆ. ವಿಷ್ಣು ಪದವಿಯನ್ನು ಒಬ್ಬ ಜೀವಿಯು ಸ್ವಲ್ಪಕಾಲ ಅಧಿಷ್ಟಿಸಿ ದೇವರಲ್ಲಿ ಐಕ್ಯವಾಗುತ್ತಲೇ, ಆ ಸೀಟಿಗೆ ತಕ್ಕ ಮತ್ತೊಬ್ಬ ಜೀವಿ ಪ್ರಪಂಚದಲ್ಲಿ ತಯಾರಾಗಿಯೇ ಇರುತ್ತಾರೆ. ರಾಜ ಪದವಿ ಖಾಲಿ ಏರ್ಪಡುತ್ತಲೇ ದೇಶದಲ್ಲಿ ಮತ್ತೊಬ್ಬನು ಆ ಪದವಿಗೆ ಅರ್ಹನಾದಂತೆ ಪ್ರಪಂಚದಲ್ಲಿ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದ ಪದವಿಗಳು ಖಾಲಿ ಏರ್ಪಡುತ್ತಲೇ ಆ ಅಂಶಕ್ಕೆ ತಕ್ಕ ಜ್ಞಾನಶಕ್ತಿ (ಯೋಗಶಕ್ತಿ) ಪರರು ತಯಾರಾಗುತ್ತಲೇ ಇರುತ್ತಾರೆ. ಆದ್ದರಿಂದ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದವರೂ ಸಹ ಶರೀರಗಳು ಧರಿಸಿದ್ದಾರೆ. ಅವರು ಸಹ ಮೋಕ್ಷಕ್ಕೋಸ್ಕರ ವಿಶೇಷವಾಗಿ ಯೋಗವಾಚರಿಸುತ್ತಿದ್ದಾರೆ. ಅವರು ಅವರಲ್ಲಿ ಯೋಗಶಕ್ತಿ ಸಂಪೂರ್ಣಸ್ಥಿತಿ ಹೊಂದಿದಾಗ ಪರಮಾತ್ಮನಲ್ಲಿ ಲೀನವಾಗುತ್ತಿದ್ದಾರೆ. ಪುನಃ ಬೇರೆ ಜೀವಿಗಳು ಅವರ ಅಂಶಕ್ಕೆ ತಕ್ಕಂತೆ ಅವರ ಪದವಿಯೊಂದರ ನಾಮವನ್ನು ಹೊಂದುತ್ತಿದ್ದಾರೆ.

ಇಲ್ಲಿ ಸ್ವಲ್ಪಜನರು ಒಂದೇ ಕಾಲದಲ್ಲಿ ಒಂದೇ ಅಂಶಕ್ಕೆ ಸೇರಿದವರು ಇಬ್ಬರು ಜೀವಿಗಳು ಇರುತ್ತಾರಾ! ರಾಮನು, ಪರಶುರಾಮನು ವಿಷ್ಣುವಾಂಶಪರರೆ

ತಾನೇ ಎಂದು ಸಂಶಯಪಡಬಹುದು. ಅದಕ್ಕೆ ನನ್ನ ಸಮಾಧಾನ. ಒಂದೇ ಕಾಲದಲ್ಲಿ ಒಂದೇ ಅಂಶಕ್ಕೆ ಸೇರಿದ ಇಬ್ಬರು ಜೀವಿಗಳು ಇರುವುದು ಎಂದಿಗೂ ಸಂಭವಿಸುವುದಿಲ್ಲ. ಇನ್ನು ರಾಮನು, ಪರುಶುರಾಮನೆಂದರೂ ಇಬ್ಬರು ವಿಷ್ಣು ಅಂಶವನ್ನು ಅಲಂಕರಿಸಿದವರೆ ಆಗಿದ್ದರೆ ಇಬ್ಬರು ಒಂದೇ ಕಾಲದಲ್ಲಿ ವಿಷ್ಣು ಅಂಶಕ್ಕೆ ಸರಿಹೋಗಿರುವುದಿಲ್ಲ. ಸ್ವಲ್ಪಕಾಲ ಪರಶುರಾಮನ ಬಳಿ, ಸ್ವಲ್ಪಕಾಲ ರಾಮನ ಬಳಿ ವಿಷ್ಣುವಾಂಶ ಇದ್ದೇ ಇರುತ್ತದೆ. ಅಂದರೆ ಸ್ವಲ್ಪಕಾಲ ಒಬ್ಬ ಜೀವಾತ್ಮ ವಿಷ್ಣುವು, ಮತ್ತೆಸ್ವಲ್ಪಕಾಲ ಇನ್ನೊಬ್ಬ ಜೀವಾತ್ಮ ವಿಷ್ಣುವು. ರಾಮನಿಗೆ ವಿವಾಹ ಆಗುವವರೆಗೂ ವಿಷ್ಣು ಅನ್ನುವ ಪದಕ್ಕೆ ಪರಶುರಾಮನೆ ಅರ್ಹನು. ಅಲ್ಲಿಯ ವರೆಗೂ ಯೋಗಶಕ್ತಿಯಲ್ಲಿ ಆತನನ್ನು ಮೀರಿದವರು ಪ್ರಪಂಚದಲ್ಲಿ ಇಲ್ಲದಂತಿದ್ದರು. ರಾಮನ ವಿವಾಹ ಸಮಯದಲ್ಲಿ, ಪರುಶುರಾಮನು ರಾಮನನ್ನು ಎದುರುಗೊಂಡ ಸಮಯದಲ್ಲಿ, ಯೋಗಶಕ್ತಿಯಲ್ಲಿ ಮಿನ್ನ ರಾಮನೇ ಆದನು, ಪರಶುರಾಮನ ಯೋಗಶಕ್ತಿಯನ್ನು ರಾಮನು ಮೀರಿದವನಾಗಿ ಅಂದಿನಿಂದ ರಾಮನ ಜೀವನವೆಲ್ಲಾ ರಾಮನೇ ವಿಷ್ಣುವಾದಂತೆ ತಿಳಿಯುತ್ತಿದೆ. ಆದ್ದರಿಂದ ರಾಮನು ಪರಶುರಾಮನು ಇಬ್ಬರು ವಿಷ್ಣುವಾಂಶಸಂಭೂತರೇ ಎಂದು ತಿಳಿಯುತ್ತಿದೆ. ಈ ವಿಧವಾಗಿಯೇ ಮೂವತ್ತು ಮೂರು ಕೋಟಿ ದೇವತಾ ಅಂಶಗಳು ಇವೆ. ಆ ಅಂಶಗಳಿಗೆ ತಕ್ಕ ಜ್ಞಾನಶಕ್ತಿ ಇರುವ ಜೀವಿಗಳು ಆ ದೇವತೆಗಳೆಂದು ಅನಿಸಿಕೊಂಡಿರುತ್ತಾರೆ. ನಡೆದುಹೋದ ಕಾಲವನ್ನು ವಿಶಧೀಕರಿಸಿ ನೋಡಿದರು ಮಚ್ಚೀಂದ್ರನು ವಿಷ್ಣುಪದವಿಗೆ, ಆತನ ಶಿಷ್ಯನು ಗೋರಾ ಕುಮಾರನು ಈಶ್ವರ ಪದವಿಗೆ, ಅರ್ಹರಾದಂತೆ ತಿಳಿಯುತ್ತಿದೆ. ಆ ಕಾಲದಲ್ಲಿಯೇ ಅಲ್ಲದೆ ಈ ಕಾಲದಲ್ಲಿ ಸಹ ವಿಷ್ಣು, ಈಶ್ವರ ಮೊದಲುಗೊಂಡು ಕೊನೆಯವರೆಗೂ ಯೋಗ್ಯತೆ ಹೊಂದಿದ ಯೋಗಶಕ್ತಿಪರರು ಇದ್ದಾರೆ. ಸ್ವಲ್ಪಕಾಲ ಅವರಲ್ಲಿನ ಮಾಯೆಯಿಂದ ಅವರ ಯೋಗ್ಯತೆ ಅವರಿಗೆ ತಿಳಿಯದಂತೆ ಹೋಗಿದೆ. ಸ್ವಲ್ಪ ಮಂದಿ ತಮ್ಮ ಯೋಗ್ಯತೆಯನ್ನು ತಿಳಿದುಕೊಂಡಿದ್ದಾರೆ. ಗೀತೆಯಲ್ಲಿ ಪರಮಾತ್ಮ ಹೇಳಿದ ಹಾಗೆ ಭೂಮಿ ಮೇಲೆಯೇ ಸಜೀವಿಗಳಾಗಿ ದೇವತೆಗಳೆಲ್ಲರೂ ಇದ್ದಾರೆ. ಅವರು ಪರಮಾತ್ಮನಿಗೆ ಭಕ್ತಿ ಪರರಾಗಿ ಯೋಗ ಮಾಡುತ್ತಲೇ ಇದ್ದಾರೆ.

ಜ್ಞಾನಿಗಳಿಗೆ ಅಂದರೆ ಜ್ಞಾನಶಕ್ತಿ ಹೊಂದಿದವರಿಗೆ (ದೇವತೆಗಳಿಗೆ) ವಿರುದ್ದವಾಗಿ ಇರುವವರೆಲ್ಲರೂ ರಾಕ್ಷಸರೆ. ಇವರಲ್ಲಿ ಜ್ಞಾನಶಕ್ತಿ ಸ್ವಲ್ಪವೂ ಇರುವುದಿಲ್ಲ ಎಲ್ಲವೂ ತಮ್ಮ ಶಕ್ತಿಯಿಂದಲೇ ನಡೆಯುತ್ತಿದೆ ಎಂದು ಅಂದುಕೊಳ್ಳುತ್ತಾರೆ ಪರಮಾತ್ಮ ವಿಷಯ ಇವರಿಗೆ ವಿರುದ್ಧವಾಗಿರುತ್ತದೆ. ಅನೇಕ ಭಯಂಕರವಾದ ಪಾಪಗಳು ಸಂಪಾದಿಸಿಕೊಳ್ಳುವವರಾಗಿ ಇರುತ್ತಾರೆ. ರಾಕ್ಷಸರೆಲ್ಲರೂ ಆಸೆಗೆ ಮೀರಿದ ಕೋರಿಕೆಗಳು ಕೋರುತ್ತಿರುತ್ತಾರೆ, ಅವರಲ್ಲಿ ಗರ್ವವು ತಾಂಡವಿಸುತ್ತಿರುತ್ತದೆ. ಅಪರಿಮಿತವಾದ ಕೋರಿಕೆಗಳಿಂದ ವಿಷಯಸುಖಗಳಿಗಿಂತ ಬೇರೆ ಸುಖಗಳು ದೊಡ್ಡವು ಇಲ್ಲವೆಂದು ಹೇಳುತ್ತಿರುತ್ತಾರೆ. ಮತ್ತು ಆಸೆ ಎಂಬ ಹಗ್ಗದಿಂದ ಕಟ್ಟಿಹಾಕಿದವರಾಗಿ ಸುಖಗಳು ಬೇಕೆಂದು ಆಶಿಸುತ್ತಾ, ಆ ಸುಖಗಳಿಗೋಸ್ಕರ ಧನವನ್ನು ಬಹಳ ಅನ್ಯಾಯಮಾರ್ಗದಲ್ಲಿ ಸಂಪಾದಿಸುತ್ತಿದ್ದಾರೆ. ಇನ್ನು ತನಗಿಂತ ಯಾರೂ ತಿಳಿದವರು ಇಲ್ಲವೆಂದು ಅವರ ಇಷ್ಟಾನುಸಾರವಾಗಿ ಪೂಜೆಗಳು ಮಾಡುತ್ತಿದ್ದಾರೆ. ಇಂತಹ ರಾಕ್ಷಸರನ್ನು ಗೀತೆಯಲ್ಲಿ **"ಕ್ರೂರರನ್ನು, ದ್ವೇಷಿಗಳನ್ನು ಒಳ್ಳೆಯದನ್ನು ದೂಷಿಸುವವರು ಆದ ಈ ನರರನ್ನು ರಾಕ್ಷಸ ಗರ್ಭಗಳಲ್ಲಿ ಜನ್ಮಿಸುವಂತೆ ಮಾಡಿ ಅವರನ್ನು ಮಾಯೆಯಲ್ಲಿ ದುಃಖಗಳನ್ನು ಹೊಂದುವಂತೆ ಮಾಡುತ್ತೇನೆ. ಈ ವಿಧವಾಗಿ ರಾಕ್ಷಸರ ಹೊಟ್ಟೆಯಲ್ಲಿಯೇ ಜನ್ಮಿಸಿ ಜನ್ಮ ಜನ್ಮಕ್ಕೂ ಅಜ್ಞಾನಿಗಳಾಗುತ್ತಾ ನನ್ನನ್ನು ತಿಳಿದು ಕೊಳ್ಳುವ ಜ್ಞಾನದ ಒಂದು ತೀರ ಎಷ್ಟು ಮಾತ್ರ ಕಾಣಿಸದೆ ಅಧಮ ಗತಿಗೆ ಹೋಗುತ್ತಾರೆ"** ಎಂದು ತಿಳಿಸಿದ್ದಾನೆ. ಆದ್ದರಿಂದ ಪ್ರಪಂಚದಲ್ಲಿ ಅಜ್ಞಾನದಲ್ಲಿಬಿದ್ದು ರಾಕ್ಷಸ ಜನ್ಮವೆತ್ತದೆ, ಜ್ಞಾನಮಾರ್ಗವನ್ನನುಸರಿಸಿ ಜ್ಞಾನಶಕ್ತಿ ಸಂಪಾದಿಸಿಕೊಂಡು ದೇವತೆಗಳ ಹೊಟ್ಟೆಯಲ್ಲಿಯೇ ಜನ್ಮಿಸುತ್ತಾ, ಜನ್ಮ ಜನ್ಮಕ್ಕೂ ಯೋಗಶಕ್ತಿ ಹೆಚ್ಚಾದವರಾಗಿ ಕೊನೆಗೆ ಪರಮಾತ್ಮನಲ್ಲಿ ಲೀನರಾಗಬೇಕೆಂದು ತಿಳಿಸುತ್ತಿದ್ದೇವೆ.

ಇಲ್ಲಿಯವರೆಗೂ ಹೇಳಿದರು ಕೆಲವರಿಗೆ ಇನ್ನು ಅನುಮಾನವಿದ್ದು ಗೀತಾ ಶಾಸ್ತ್ರದಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ ಶ್ರೀಕೃಷ್ಣನು **"ಅಬ್ರಹ್ಮ *ಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ! ಮಾ ಮುಪೇತ್ಯತು ಕೌಂತೇಯ!***

**ಪುನರ್ಜನ್ಮ ನವಿದ್ಯತೇ " ಬ್ರಹ್ಮಲೋಕ ಮೊದಲಾದ ಲೋಕಗಳೆಲ್ಲವೂ ಮತ್ತೆ ಜನ್ಮವನ್ನು ಉಂಟುಮಾಡುತ್ತಿವೆ. ಆದರೆ ನನ್ನನ್ನು ಹೊಂದಿದವರಿಗೆ ಮತ್ತೆ ಜನ್ಮ ಬರುವುದಿಲ್ಲ"** ಎಂದು ಅಂದಿದ್ದಾನಲ್ಲ! ಈ ಮಾತಿನಿಂದ ಲೋಕಗಳು ಬೇರೆ ಇರುವಂತೆ, ಅಲ್ಲಿ ದೇವತೆಗಳು ಇರುವಂತೆ ತಿಳಿಯುತ್ತಿದೆಯಲ್ಲವೆ! ಎಂದು ಕೇಳಬಹುದು. ಅದಕ್ಕೆ ನನ್ನ ಸಮಾಧಾನ, ದೇವತೆಗಳೆಲ್ಲರೂ ಇಲ್ಲೇ ಇದ್ದಾರೆ. ಅವರ ಸಮೀಪದಲ್ಲಿ ಜನ್ಮಿಸಬೇಕೆಂದರೆ ಎಷ್ಟೋ ಪುಣ್ಯ ಮಾಡಿರಬೇಕು. ಅವರ ಹತ್ತಿರ ಜನ್ಮಿಸುವುದೇ ಅವರ ಲೋಕದಲ್ಲಿ ಜನ್ಮಿಸುವುದು. ಹಾಗೆ ಪುಣ್ಯ ಮಾಡಿ ಅವರ ಹತ್ತಿರ ಜನ್ಮಿಸಿದರೂ ಅವರಿಗೆ ಮತ್ತೆ ಜನ್ಮಗಳು ಇವೆ. ಆದರೆ ನನ್ನನ್ನು ಹೊಂದಿದವನಿಗೆ ಮತ್ತೆ ಜನ್ಮವಿಲ್ಲ. ಎಂದು ಪರಮಾತ್ಮ ತಿಳಿಸಿದ್ದಾನೆ ಹೊರತು ಬೇರೆಯಲ್ಲ. ಹಾಗೆ ರಾಜವಿದ್ಯಾ ರಾಜ್ಯಗುಹ್ಯ ಯೋಗದಲ್ಲಿ **"ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ತೇ ಪುಣ್ಯ ಮಾಸಾದ್ಯ ಸುರೇಂದ್ರಲೋಕ ಮಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್" "ತೇತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇಪುಣ್ಯೇ ಮರ್ತ್ಯ ಲೋಕಂ ವಿಶಂತಿ ಏವಂ ತ್ರಯೀಧರ್ಮ ಮನುಪ್ರಸನ್ನಾ ಗತಾಗತಂ ಕಾಮ ಕಾಮಾ ಲಭನ್ತೇ"** "ಯಾಜ್ಞಿಕರು, ಸೋಮಪಾನರು, ಪಾಪ ಇಲ್ಲದವರಾಗಿ ನನ್ನ ದಯೆಯಿಂದ ಸ್ವರ್ಗ ಸೇರಿಕೊಂಡು ಹೆಚ್ಚಾಗಿ ಪುಣ್ಯ ಜನ್ಮಗಳನ್ನು, ದಿವ್ಯಗಳಾದ ಭೋಗಗಳನ್ನು, ದಿವ್ಯಸುಖಗಳನ್ನು ಅನುಭವಿಸುತ್ತಾರೆ. ಹಾಗೆ ಸ್ವರ್ಗ ಸುಖಗಳನ್ನು ಅನುಭವಿಸಿದ ನಂತರ ಕೆಳ ಲೋಕಕ್ಕೆ ಬರುತ್ತಾರೆ. ಹೀಗೆ ಕಾಮಪರರಾಗಿ ಪುಣ್ಯ ಸಂಪಾದಿಸಿ ಕೊಂಡವರ ಗತಿ ಇರುತ್ತದೆ. ಅವರಿಗೆ ಅಶಾಶ್ವತಗಳಾದ ಸುಖಗಳೇ ಲಭಿಸುತ್ತವೆ" ಎಂದು ಪರಮಾತ್ಮ ಹೇಳಿದ್ದಾನೆ. ಇಲ್ಲಿಯೂ ಸಹ ಸ್ವರ್ಗಲೋಕ ಬೇರೆ ಇದೆಯೆಂದು ಬಹಳ ಜನ ತಪ್ಪಾಗಿ ಅಂದುಕೊಳ್ಳುತ್ತಿದ್ದಾರೆ. ಪುಣ್ಯ ಮಾಡಿದವರಿಗೆ ಸ್ವರ್ಗ ಇಲ್ಲಿಯೇ ಇದೆ. ಅವರು ಸ್ವರ್ಗ ಸುಖಗಳನ್ನು ಇಲ್ಲಿಯೇ ಅನುಭವಿ ಸುತ್ತಿದ್ದಾರೆ. ಪುಣ್ಯಫಲಿತ ಮುಗಿದುಹೋದ ತಕ್ಷಣ ಕಷ್ಟಪಡುವ ಜನ್ಮಗಳು ಪುನಃ ಎತ್ತುತ್ತಿದ್ದಾರೆ. ಅದಕ್ಕೆ ನಾವು ಅನುಭವದ ಪ್ರಕಾರ ಚೆನ್ನಾಗಿ ಸುಖಪಡುವವನನ್ನು ಮೇಲಿನ ಸ್ಥಿತಿಯಲ್ಲಿ ಇದ್ದಾನೆಂದು, ಕಷ್ಟಪಡುವವನನ್ನು

ಕೆಳಗಿನ ಸ್ಥಿತಿಯಲ್ಲಿ ಇದ್ದಾನೆಂದು ಅನ್ನುತ್ತಿದ್ದೇವೆ. ಹಾಗೆ ಧನಿಕನಿಗೂ ಬಡವನಿಗೂ ಹೋಲಿಸುವ ಸಮಯದಲ್ಲಿಯೂ ಸಹ ಅವನೆಲ್ಲಿ ಇವನೆಲ್ಲಿ ಎಂದು ಅನ್ನುತ್ತೇವೆ. ಈ ಮಾತಿನಲ್ಲಿ ಸಹ ಅವನಿಗೂ ಇವನಿಗೂ ಎಷ್ಟೋ ದೂರ ಎನ್ನುವಂತಿದೆ. ಆ ದೂರ ಏನೋ ಅರ್ಥ ಮಾಡಿಕೊಳ್ಳಬೇಕು. ಆ ವ್ಯತ್ಯಾಸ ಭೂಮಿಮೇಲೆಯೇ ಕಾಣಿಸುತ್ತಿದೆ ಎಂದು ತಿಳಿದುಕೊಳ್ಳಬೇಕು. ಅವನು ಮೇಲಿನ ಸ್ಥಿತಿಯಲ್ಲಿ ಇವನು ಕೆಳಗಿನ ಸ್ಥಿತಿಯಲ್ಲಿ ಇದ್ದಾನೆ ಎನ್ನುತ್ತಿದ್ದೇವೆ. ಅವನ ಮೇಲಿನ ಸ್ಥಿತಿ ಇವನ ಕೆಳಗಿನ ಸ್ಥಿತಿ ಭೂಮಿಮೇಲೆ ಇದೆಯೆಂದು ತಿಳಿದುಕೊಳ್ಳಬೇಕು. ಹಾಗೆ ಒಬ್ಬನು ಚೆನ್ನಾಗಿ ಬದುಕಿ ಸುಖಗಳು ಅನುಭವಿಸಿ ನಂತರ ಅವನು ಕಷ್ಟಗಳ ಪಾಲಾಗಿದ್ದಾನೆಂದು ಕೊಳ್ಳೋಣ, ಆಗಲೂ ಸಹ ಅವನು ಅಧೋಗತಿ ಹಿಡಿದಿದ್ದಾನೆಂದು ಅನ್ನುತ್ತಿದ್ದೇವೆ. ಅಧೋಗತಿ ಎಂದರೆ ತಗ್ಗು ಸ್ಥಿತಿ ಆ ತಗ್ಗುಸ್ಥಿತಿ ಸಹ ಭೂಮಿ ಮೇಲೆ ಇರುವಂತೆ ತಿಳಿದುಕೊಳ್ಳಬೇಕು.

ಪುಣ್ಯ ಮಾಡಿದವನು ಭೂಮಿಮೇಲೆ ಸ್ವರ್ಗಸುಖಗಳು ಅನುಭವಿಸುತ್ತಿದ್ದಾನೆ. ಪಾಪ ಮಾಡಿದವನು ಭೂಮಿಮೇಲೆಯೇ ನರಕ ಅನುಭವಿಸುತ್ತಿದ್ದಾನೆ. ಮೇಲಿನ ಲೋಕ, ಕೆಳಗಿನ ಲೋಕ ಎನ್ನುವವು ಎಲ್ಲವೂ ಈ ಭೂಮಿ ಮೇಲೆಯೇ ಇವೆ. ಯಾರ ಲೋಕ ಅವನದು, ಅವನ ಲೋಕಕ್ಕೆ ಇವನು ಬರುವುದಿಲ್ಲ, ಇವನ ಲೋಕಕ್ಕೆ ಅವನು ಬರುವುದಿಲ್ಲ ಎಂದು ಜ್ಞಾನಿಯನ್ನು ಅಜ್ಞಾನಿಯನ್ನು ಹೋಲಿಸಿ ಹೇಳುವ ಸಮಯದಲ್ಲಿ ಸಹ ಅನ್ನುತ್ತಾರೆ. ಒಂದುದಿನ ಗುರುಗಳಾದ ವೀರಬ್ರಹ್ಮಯ್ಯನವರು ಶಿಷ್ಯನಾದ ಸಿದ್ಧಯ್ಯನನ್ನು ಲೋಕ ಹೇಗಿದೆ ಎಂದು ಪ್ರಶ್ನಿಸಿದಾಗ ಯಾರ ಲೋಕ ಅವರದು ಸ್ವಾಮಿ ಎಂದು ಸಮಾಧಾನವಾಗಿ ಸಿದ್ಧಯ್ಯ ಹೇಳಿದನಂತೆ. ಪರಮಾತ್ಮ ಸಹ ನಾನು ಮೂರುಲೋಕಗಳು ಆವರಿಸಿದ್ದೇನೆ. ನಾನು ಇಲ್ಲದ ಸ್ಥಳವಿಲ್ಲವೆಂದು ತಿಳಿಸಿದ್ದಾನೆ. ಕೊನೆಗೆ ಲೋಕಗಳನ್ನು ಕುರಿತು ತಿಳಿದುಕೊಳ್ಳಬೇಕೆಂದರೆ ಜ್ಞಾನದೃಷ್ಟಿಯಿಂದಲೇ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಎಲ್ಲಾ ಲೋಕಗಳು ಭೂಮಿಮೇಲೆಯೇ ಇವೆ. ಇವುಗಳ ಬಗ್ಗೆ ಪೂರ್ತಿಯಾಗಿ ತಿಳಿದುಕೊಳ್ಳಬೇಕೆಂದರೆ ಅಸಾಧ್ಯವೇನೋ ಅನಿಸುತ್ತದೆ. ಆದರೆ ಜ್ಞಾನದ ಪ್ರಕಾರ ವಿವರಿಸಿಕೊಂಡರೆ ಸುಲಭವಾಗಿಯೇ ಅರ್ಥವಾಗುತ್ತದೆ.

ಮುಖ್ಯವಾಗಿ ಇರುವವು ಮೂರು ಲೋಕಗಳೇ. ಅದರಲ್ಲಿ ಒಂದೊಂದು ಲೋಕದಲ್ಲಿ 108 ಉಪಲೋಕಗಳಿವೆ. ಒಟ್ಟು 324 ಲೋಕಗಳು ನಮ್ಮ ತಲೆಯಲ್ಲಿಯೇ ಗುಣಗಳರೂಪದಿಂದ ಇವೆ. ಒಬ್ಬ ಜೀವಿಯು ಅವನ ಕರ್ಮಾನುಸಾರ ಶರೀರಧಾರಿಯಾಗಿ ಭೂಮಿಮೇಲೆಯೇ ಇರುವ ಲೋಕಗಳಲ್ಲಿ ಸಿಲುಕಿಕೊಳ್ಳುತ್ತಿರುತ್ತಾನೆ. ಯಾರ ಲೋಕ ಅವರಿಗೆ ಒಳ್ಳೆಯದಾಗಿ ಕಾಣಿಸುತ್ತಿರುತ್ತದೆ. ಇವುಗಳನ್ನು ವಿವರಿಸುತ್ತಾ ಹೋಗುವುದಕ್ಕೆ ಈಗ ಸಂದರ್ಭವಲ್ಲ. ಆದ್ದರಿಂದ ಇಲ್ಲಿಗೆ ಉಳಿದ ಲೋಕಗಳ ವಿವರವನ್ನು ಮುಗಿಸುತ್ತಾ, ನರಕ ಕಷ್ಟಗಳು, ಸ್ವರ್ಗ ಸುಖಗಳನ್ನು ಜೀವಿಯು ಇಲ್ಲಿಯೇ ಅನುಭವಿಸುತ್ತಿದ್ದಾನೆಂದು ತಿಳಿಸುತ್ತಿದ್ದೇವೆ. ಹಾಗಲ್ಲದೆ ಸ್ವರ್ಗಲೋಕ ನರಕಲೋಕ ಇತರಕಡೆ ಇದ್ದರೆ ಪಾಪಪುಣ್ಯಗಳು ಎರಡನ್ನು ಜೀವಾತ್ಮ ಅಲ್ಲಿಯೇ ಅನುಭವಿಸಿದರೆ, ಇಲ್ಲಿ ಭೂಮಿಮೇಲೆ ಹುಟ್ಟುವ ಅವಶ್ಯಕತೆ ಇಲ್ಲವಲ್ಲ! ಪಾಪ ಪುಣ್ಯಗಳ ಕಾರಣದಿಂದ ನಾವು ಜನ್ಮಕ್ಕೆ ಬರುತ್ತಿದ್ದೇವೆಂದು ಚೆನ್ನಾಗಿ ತಿಳಿದೂ, ಪಾಪ ಪುಣ್ಯಗಳನ್ನು ಎಲ್ಲಿಯೋ ಅನುಭವಿಸಿ ಬರುತ್ತೇವೆಂದರೆ ಅದಕ್ಕೆ ಅರ್ಥವೇ ಇಲ್ಲ. ಬೇರೆ ಲೋಕಗಳಲ್ಲಿ ಪಾಪಪುಣ್ಯಗಳನ್ನು ಅನುಭವಿಸಿದರೆ ಇಲ್ಲಿ ಜನ್ಮಿಸುವ ಅವಶ್ಯಕತೆಯೇ ಇಲ್ಲ. ಆದ್ದರಿಂದ ಎಲ್ಲಾ ಲೋಕಗಳು ಇಲ್ಲಿಯೇ ಇವೆಯೆಂದು, ದೇವತೆಗಳೆಲ್ಲರೂ ಇಲ್ಲಿಯೇ ಇದ್ದಾರೆಂದು ತಿಳಿದುಕೊಳ್ಳಬೇಕು. ಪರಮಾತ್ಮ ಸಹ ಇದೆ ಭಾವನೆಯಿಂದ ಗೀತೆಯಲ್ಲಿ ಹೇಳಿದ್ದಾನೆ. ಆ ಭಾವವನ್ನು ಅರ್ಥಮಾಡಿಕೊಳ್ಳದೆ ನಾವೇ ಕಂಗಾಲಾಗುತ್ತಿದ್ದೇವೆ. ಪರಮಾತ್ಮ ತಿಳಿಸಿದ ಗೀತಾಶಾಸ್ತ್ರವನ್ನು ಪರಮಾತ್ಮ ಭಾವದ ಪ್ರಕಾರವೇ ಅರ್ಥ ಮಾಡಿಕೊಳ್ಳಬೇಕೆಂದರೆ ಎಷ್ಟೋ ಜ್ಞಾನ ಹೊಂದಿರಬೇಕು. ಹಾಗೆ ಆಗದೆಹೋದರೆ ಬೇರೆ ವಿಧವಾಗಿ ಅರ್ಥವಾಗುತ್ತದೆ. ಯಾರ ಜ್ಞಾನಫಲಿತವನ್ನನುಸರಿಸಿ ಅವನಿಗೆ ಅರ್ಥವಾಗುತ್ತದೆ. ಅದಕ್ಕೆ ಈ ಕಾಲದಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿಕೊಳ್ಳುತ್ತಿದ್ದಾರೆ. ನಮ್ಮ ದೃಷ್ಟಿಯಲ್ಲಿ ಗೀತಾಶಾಸ್ತ್ರವನ್ನು ವಕ್ರಮಾರ್ಗದಲ್ಲಿ ಅರ್ಥಮಾಡಿಕೊಳ್ಳುವವರಿಗೆ ಪರಮಾತ್ಮ ಪುನಃ ಮಾನವರೂಪವಾಗಿ ಬಂದು ಹೇಳಿದರೂ ಅಲ್ಲಿಗೂ ಅರ್ಥಮಾಡಿಕೊಳ್ಳದೆ ಹೇಳುವವನು ನಮ್ಮ ಹಾಗೆ

ಮಾನವನೆ ತಾನೆ! ನಮಗಿಂತ ಇವನಿಗೆ ಹೆಚ್ಚಾಗಿ ತಿಳಿದಿರುತ್ತದಾ? ಎಂಬ ಗರ್ವ ಬಿಡದಿದ್ದರೆ ಏನು ಪ್ರಯೋಜನ ಇಲ್ಲ.

ನಾವು ಯಾವಾಗಾದರೆ ಗರ್ವವನ್ನು ಬಿಟ್ಟು ನಮಗೆ ತಿಳಿಯದ ಯಥಾರ್ಥ ಇನ್ನೂ ಎಷ್ಟೋ ಇದೆಯೆಂಬ ಭಾವನೆಗೆ ಬಂದದಿನವೇ ಚೆನ್ನಾಗಾಗುತ್ತೇವೆಂದು ತಿಳಿಸುತ್ತಿದ್ದೇನೆ. ಆದ್ದರಿಂದ ನನಗೇ ಚೆನ್ನಾಗಿ ತಿಳಿದಿದೆ ಎಂಬ ಗರ್ವವನ್ನು ಬಿಟ್ಟವರಾಗಿ, ದೇವತೆಗಳು ಅವರಲೋಕಗಳು ಇಲ್ಲಿಯೇ ಇವೆಯೆಂದು ತಿಳಿದುಕೊಳ್ಳಬೇಕು. ಮತ್ತು ರಾಕ್ಷಸರು ಅವರ ಲೋಕಗಳು ಇಲ್ಲಿಯೇ ಇವೆಯೆಂದು ಸಹ ತಿಳಿದುಕೊಳ್ಳಬೇಕು.

# ವಿದ್ಯೆ - ಅವಿದ್ಯೆ

ವಿತ್ ಎನ್ನುವ ಪದದಿಂದ ವಿದ್ಯೆ ಎನ್ನುವ ಪದ ಹುಟ್ಟಿದೆ. ವಿತ್ ಎಂದರೆ ತಿಳಿದುಕೊಳ್ಳುವುದೆಂದು ಅರ್ಥ. ಆದ್ದರಿಂದ ಅದರಿಂದ ಹುಟ್ಟಿದ ವಿದ್ಯೆ ಅನ್ನುವ ಪದಕ್ಕೂ ಸಹ ಅದೇ ಅರ್ಥ ವರ್ತಿಸುತ್ತಿದೆ. ಅವಿದ್ಯೆ ಎಂದರೆ ತಿಳಿಯದಿರುವುದೆಂದು ತಿಳಿಯುತ್ತಿದೆ. ಚಿಕ್ಕಂದಿನಿಂದ ಶಾಲೆಗೆಹೋಗಿ ನಮಗೆ ತಿಳಿಯದ ಭಾಷೆಯನ್ನೊ, ಪರಿಸರ ವಿಷಯಗಳನ್ನೊ, ಗಣಿತವನ್ನೊ ಯಾವುದೊ ಒಟ್ಟಿನಲ್ಲಿ ತಿಳಿಯದಿರುವುದನ್ನು ತಿಳಿದುಕೊಳ್ಳುತ್ತೇವೆ. ಹಾಗೆ ತಿಳಿದುಕೊಳ್ಳುತ್ತಿರುವುದನ್ನು ವಿದ್ಯೆ ಅನ್ನುತ್ತಿದ್ದೇವೆ. ವಿದ್ಯೆಗೋಸ್ಕರ ಹಣವನ್ನು ಕೊಟ್ಟು ನನಗೆ ತಿಳಿಯದಿರುವವು ತಿಳಿಸಿರೆಂದು ಅರ್ಥಿಸುವವನನ್ನು (ಕೇಳುವವನನ್ನು) ವಿದ್ಯಾರ್ಥಿ ಅನ್ನುತ್ತಿದ್ದೇವೆ. ವಿದ್ಯೆ+ಅರ್ಥಿ = ವಿದ್ಯಾರ್ಥಿ. ವಿದ್ಯಾರ್ಥಿ ಎಂದರೆ ವಿದ್ಯೆಯನ್ನು ಅರ್ಥಿಸುವವನೆಂದು, ಇನ್ನೂ ತಿಳಿಯುವಂತೆ ಹೇಳಿಕೊಳ್ಳಬೇಕೆಂದರೆ ತನಗೆ ತಿಳಿಯದವುಗಳನ್ನು ತಿಳಿಯುವುದಕ್ಕಾಗಿ ಇನ್ನೊಬ್ಬರ ಹತ್ತಿರಕ್ಕೆಹೋಗಿ ಕೇಳುವವನೆಂದು ಅರ್ಥ.

ತಿಳಿಯದಿರುವವು ತಿಳಿಸುವವನನ್ನು ಬೋಧಕನು ಎನ್ನುತ್ತಿದ್ದೇವೆ. ತಿಳಿಸುವವನು ಬೋಧಕನು, ತಿಳಿಹೇಳಿಸಿಕೊಳ್ಳುವವನು ವಿದ್ಯಾರ್ಥಿ ಎನ್ನುವುದು ಸೂತ್ರ. ಈ ಸೂತ್ರದ ಪ್ರಕಾರ ಯಾವ ವಿಷಯವನ್ನು ಹೇಳುವವನಾದರು ಬೋಧಕನೆ. ಹಾಗೆಯೇ ಯಾವ ವಿಷಯವನ್ನು ಹೇಳಿಸಿಕೊಳ್ಳುವವನಾದರೂ ವಿದ್ಯಾರ್ಥಿಯೇ, ಹೇಳಿಸಿಕೊಳ್ಳುವುದು ಏನಾದರು ವಿದ್ಯೆಯೇ. ಮಾನವನು ಚಿಕ್ಕಂದಿನಿಂದ ಯಾವುದೋ ಒಂದು ವಿದ್ಯೆಯನ್ನು ಕಲಿತುಕೊಳ್ಳುತ್ತಲೇ ಇದ್ದಾನೆ. ತನಗೆ ಯುಕ್ತವಯಸ್ಸು ಬರುವವರೆಗೂ ಎಷ್ಟೋ ವಿದ್ಯೆಗಳು ಕಲಿತು **ಯಂ.ಎ., ಯಂ.ಯಸ್.ಸಿ., ಬಿ.ಎಸ್.ಸಿ.** ಮೊದಲಾದ ಡಿಗ್ರಿಗಳು ಸಂಪಾದಿಸಿಕೊಂಡು **ಪಿ.ಹೆಚ್‌ಡಿಗಳು** ತೆಗೆದುಕೊಂಡು ನಾನು ವಿದ್ಯೆಯನ್ನು ಪೂರ್ತಿ ಕಲಿತಿದ್ದೇನೆಂದು ಕೊಳ್ಳುತ್ತಿದ್ದಾನೆ. ಪಿ ಹೆಚ್‌ಡಿಗಳು ತೆಗೆದುಕೊಂಡವನಾದರೂ ಆತನು ಅಂದುಕೊಂಡಂತೆ ವಿದ್ಯಾವಂತನೇನಾ ಎಂದು ಯೋಚಿಸಿದರೆ ಆತನು ಕಲಿತಿರುವ ವರೆಗು ವಿದ್ಯಾವಂತನೆ. ಇನ್ನೂ ಆತನು ಕಲಿಯಬೇಕಾಗಿರುವುದು, ತಿಳಿಯಬೇ ಕಾಗಿರುವುದು ಇದೆ. ಆದ್ದರಿಂದ ಆತನು ಸಂಪೂರ್ಣ ವಿದ್ಯಾವಂತನು ಅಲ್ಲವೆಂದು ಹೇಳಬಹುದು. ತಿಳಿಯಬೇಕಾಗಿರುವುದು ಉಳಿದಿದೆ. ಆದ್ದರಿಂದ ಆತನು ಅವಿದ್ಯಾಪರನೆಂದೇ ಹೇಳಬಹುದು.

ಮುಖ್ಯವಾದವುಗಳಿಗೆ, ಮುಖ್ಯ ಅಲ್ಲದಿರುವವು ಸಮಾನ ಅಲ್ಲ. ಆದ್ದರಿಂದ ಮುಖ್ಯವಲ್ಲದಿರುವವು ಅನೇಕ ಕಲಿತು, ಮುಖ್ಯವಾದುದು ಒಂದು ಕಲಿಯದಿದ್ದರೂ ಆತನು ಅವಿದ್ಯಾಪರನೇ ಎಂದು ಹೇಳಬಹುದು. ಹಾಗಿರುವಾಗ ಮುಖ್ಯವಲ್ಲದಿರುವವು ಯಾವುವು? ಮುಖ್ಯವಾದವು ಯಾವುವು? ಎನ್ನುವ ವಿಷಯ ಎಲ್ಲರಿಗೂ ತಿಳಿಯದೆ ಇರಬಹುದು. ಅದನ್ನು ಕುರಿತು ತಿಳಿದು ಕೊಳ್ಳೋಣ. ಪ್ರಪಂಚದಲ್ಲಿರುವ ವಿದ್ಯೆಗಳು, ತಿಳಿಯಬೇಕಾದ ವಿದ್ಯೆಗಳು ಆರುಮಾತ್ರವೆ. ಅವು ಯಾವೆಂದರೆ 1) ಗಣಿತಶಾಸ್ತ್ರ 2) ರಸಾಯನಶಾಸ್ತ್ರ 3) ಭೌತಿಕಶಾಸ್ತ್ರ 4)ಖಗೋಳಶಾಸ್ತ್ರ 5) ಜ್ಯೋತಿಷ್ಯಶಾಸ್ತ್ರ 6) ಯೋಗಶಾಸ್ತ್ರ. ಒಟ್ಟು ಆರುಶಾಸ್ತ್ರಗಳಲ್ಲಿ ಅತಿ ಮುಖ್ಯವಾದುದು ಯೋಗಶಾಸ್ತ್ರ. ಶರೀರಗಳಲ್ಲಿ

ಮುಖ್ಯ ಪಾತ್ರವಹಿಸುವ ಜೀವಾತ್ಮ, ಆತ್ಮಗಳ ಬಗ್ಗೆ ಯೋಗಶಾಸ್ತ್ರ ತಿಳಿಸುತ್ತಿದೆ. ಜೀವಾತ್ಮ, ಆತ್ಮಗಳು ಇಲ್ಲದ್ದು ಪ್ರಪಂಚವೆಲ್ಲವೂ ಚೈತನ್ಯವಿಲ್ಲದ ಜೀವರಹಿತ ಜಡವಾಗಿರಬಲ್ಲದು. ಹಾಗೆಯೇ ಪರಮಾತ್ಮ ಇಲ್ಲದ್ದು ಜಡವಾಗಿರುವ ಪ್ರಪಂಚವೂ ಸಹ ಇಲ್ಲ. ಮುಖ್ಯವಾದ ಮೂರು ಆತ್ಮಗಳ ಬಗ್ಗೆ ತಿಳಿಸುವುದಾದ್ದರಿಂದ ಯೋಗಶಾಸ್ತ್ರ ಮುಖ್ಯವಾದುದು ಎಂದು ಹೇಳಬಹುದು.

ಉಳಿದ 5 ಶಾಸ್ತ್ರಗಳಲ್ಲಿ ಇರುವವು ಎಲ್ಲವೂ ಪ್ರಪಂಚಸಂಬಂಧ ವಿದ್ಯೆಗಳೇ ಎಂದು ತಿಳಿಯಬೇಕು. ಈದಿನ ಪ್ರಾಥಮಿಕ ಪಾಠಶಾಲೆ ಮೊದಲುಗೊಂಡು ವಿಶ್ವವಿದ್ಯಾಲಯಗಳ ವರೆಗೂ ಇರುವ ಓದುಗಳೆಲ್ಲವೂ ಐದುಶಾಸ್ತ್ರಗಳ ವಿದ್ಯಗಳೆ. ಆರನೆಶಾಸ್ತ್ರವಾದ ಯೋಗಶಾಸ್ತ್ರ ಎಂಬುವುದು ಒಂದಿದೆ ಎಂದು ಹೇಳುವವರು ಇಲ್ಲ, ಮತ್ತು ಅದು ಈಗ ವಿದ್ಯಾಬೋಧನೆಗಳಲ್ಲಿ ಇಲ್ಲದಂತೆ ಹೋಗಿದೆ. ಆದ್ದರಿಂದ ಯಾವ ವಿದ್ಯಾರ್ಥಿಗೂ ಯೋಗಶಾಸ್ತ್ರದ ಬಗ್ಗೆ ತಿಳಿದಿಲ್ಲ. ಯಾರು ಎಷ್ಟು ವಿದ್ಯಾಭ್ಯಾಸ ಮಾಡಿದರೂ ಎಲ್ಲದಕ್ಕಿಂತ ಮುಖ್ಯವಾದ ಯೋಗಶಾಸ್ತ್ರವನ್ನು ಕುರಿತು ತಿಳಿಯದಂತಿರುವುದರಿಂದ ಅಂತಹವನನ್ನು ಅವಿದ್ಯಾಪರನೆಂದೇ ಹೇಳಬಹುದು. ಎಷ್ಟೋ ಡಿಗ್ರಿಗಳು ಸಂಪಾದಿಸಿಕೊಂಡರು ಒಂದು ಯೋಗಶಾಸ್ತ್ರ ತಿಳಿಯದಷ್ಟು ಮಾತ್ರಕ್ಕೆ ಅವಿದ್ಯಾಪರನೆಂದು ಹೇಳುವುದಕ್ಕೆ ಮುಖ್ಯವಾದ ಮತ್ತೊಂದು ಕಾರಣ ಸಹ ಇದೆ, ಅದು ಏನೆಂದರೆ!

ಯಾವ ವಿದ್ಯೆ ಆದರೂ ಒಂದು ಭಾಷೆಯ ಲಿಪಿಯಿಂದ ಆರಂಭವಾಗುತ್ತದೆ. ಆ ಲಿಪಿ ಕೆಲವು ಅಕ್ಷರಗಳ ಸಮುದಾಯದಿಂದ ಕೂಡಿರುತ್ತದೆ. ಯಾವ ವಿದ್ಯೆ ಆದರೂ ಅಕ್ಷರಸಾರಾಂಶದಿಂದ ಕೂಡಿರುತ್ತದೆ. ವಿದ್ಯೆ ಇರುವವನನ್ನು ಅಕ್ಷರಜ್ಞಾನ ಇರುವವನೆನ್ನುವುದು ಸಹಜವಾಗಿ ಕೇಳುತ್ತಿದ್ದೇವೆ. ಅಕ್ಷರ ಎಂದರೆ ಅಸಲಾದ ಅರ್ಥ ತಿಳಿಯದವರಾಗಿ ಅದು ಒಂದು ಪ್ರಪಂಚ ವಿದ್ಯೆ ಅಂದು ಕೊಳ್ಳುತ್ತಿದ್ದೇವೆ. ಅಸಲು ಅರ್ಥದಿಂದ ನೋಡಿದರೆ ಕ್ಷರ ಎಂದರೆ ನಾಶ, ಅಕ್ಷರ ಎಂದರೆ ನಾಶ ಆಗದಿರುವುದಾಗಿ ಅವಿನಾಶಿಯಾಗಿರುವುದು. ಅಂತಹ ಅವಿನಾಶಿಯಾದ ಆತ್ಮ ಜ್ಞಾನದ ಬಗ್ಗೆ ತಿಳಿದವನು ಅಕ್ಷರಗಳನ್ನು ತಿಳಿದವನೆಂದು,

ವಿದ್ಯಾಪರನೆಂದು ಹೇಳಬಹುದು. ಆತ್ಮ ಜ್ಞಾನವನ್ನು ಕುರಿತು ತಿಳಿಯದವನನ್ನು ಅಕ್ಷರವನ್ನು ಕುರಿತು ತಿಳಿಯದವನೆಂದು, ಅಕ್ಷರಜ್ಞಾನ ತಿಳಿಯದವನೆಂದು, ಅವಿದ್ಯಾಪರನೆಂದು ಹೇಳಬಹುದು. ಇದರಿಂದ ಆತ್ಮಜ್ಞಾನವಿಲ್ಲದ ಎಷ್ಟು ವಿದ್ಯೆಗಳು ಓದಿದರೂ ಅವನನ್ನು ಅವಿದ್ಯಾಪರನು ಎಂದು ಹೇಳಬಹುದು.

ಈದಿನ ಅಕ್ಷರ ಸಾರಾಂಶವಿಲ್ಲದ ಎಷ್ಟೋ ವಿದ್ಯೆಗಳಿವೆ. ಅವುಗಳನ್ನು ಕಲಿಯುವುದಕ್ಕೆ ಕಲಾಶಾಲೆಗಳು, ವಿಶ್ವವಿದ್ಯಾಲಯಗಳು ಇವೆ. ಅಕ್ಷರಜ್ಞಾನವಿಲ್ಲದ ವಿದ್ಯೆಗಳು ಕಲಿಯುವುದಕ್ಕೆ ಎಷ್ಟೆಷ್ಟೋ ಸಾವಿರಗಳು, ಲಕ್ಷಗಳ ಹಣವನ್ನು ಖರ್ಚು ಮಾಡಬೇಕಾಗಿದೆ. ವಿವರ ತಿಳಿಯದ ಮಾನವನು ಎಷ್ಟೋ ವ್ಯಯಪ್ರಯಾಸಗಳಿಗೆ ಸಹಿಸಿಕೊಂಡು, ಅಕ್ಷರಜ್ಞಾನವಿಲ್ಲದ ವಿದ್ಯೆಗಳನ್ನು ಕಲಿತು, ವಿದ್ಯಾವಂತನೆಂದು ಗರ್ವಪಡುತ್ತಿದ್ದಾನೆ. ಆದರೆ ತಾನು ಎಷ್ಟು ಕಲಿತರು ಅವಿದ್ಯಾಪರನೆಂಬ ಸತ್ಯವನ್ನು ತಿಳಿಯದಂತಿದ್ದಾನೆ. ಈಗಿನ ಪ್ರಪಂಚಸಂಬಂಧ ವಿದ್ಯೆಗಳೆಲ್ಲ ಪ್ರಪಂಚದಲ್ಲಿ ಬದುಕುವುದಕ್ಕೆ ಅವಕಾಶ ಕಲ್ಪಿಸುವವೆ, ಆದರೆ ಪರಮಾತ್ಮನಲ್ಲಿ ಜೀವನ ಸಾಗಿಸುವುದಕ್ಕೆ ಅವಕಾಶ ಕಲ್ಪಿಸುವವು ಅಲ್ಲ. ಒಂದು ಲೆಕ್ಕದಲ್ಲಿ ಪ್ರಪಂಚವಿದ್ಯೆಗಳು ಕಲಿತವನು ಸಹ ಈದಿನ ಪ್ರಪಂಚದಲ್ಲಿ ತಕ್ಕ ಉದ್ಯೋಗಗಳು ಬಾರದೆ, ಅವನು ಓದಿದ ವಿದ್ಯೆಗಳಿಗೆ ಬೆಲೆಯಿಲ್ಲದೆ, ಯಾವ ವಿದ್ಯೆ ಬಾರದವನಂತೆ ಕಾಯಕಷ್ಟಮಾಡಿ ನಿರಾಶೆಯಾಗಿ ಬದುಕಬೇಕಾಗಿಬರುತ್ತಿದೆ. ಆತ್ಮ ವಿದ್ಯೆ ಕಲಿತವನು ಪ್ರಪಂಚದಲ್ಲಿ ಧೈರ್ಯವಾಗಿ ಬದುಕುತ್ತಿದ್ದಾನೆ. ಮರಣಿಸಿದ ನಂತರ ಸಹ ಚಿರಸ್ಥಾಯಿಯಾಗಿ ಇರಬಲ್ಲನು.

ಎಲ್ಲಾ ಶಾಸ್ತ್ರಗಳಿಗಿಂತ ಮೀರಿದ ಆರನೆಶಾಸ್ತ್ರವಾದ ಯೋಗಶಾಸ್ತ್ರವನ್ನು ತಿಳಿದವನಿಗೆ ಎಷ್ಟು ಕಷ್ಟಗಳು ಬಂದರೂ ಅವು ಅವನಿಗೆ ಕಷ್ಟಗಳಾಗಿ ತೋಚುವುದಿಲ್ಲ, ಅವುಗಳಬಂಧಗಳನ್ನು ಲೆಕ್ಕಮಾಡುವುದಿಲ್ಲ. ಆದ್ದರಿಂದ ಆರನೆಶಾಸ್ತ್ರವಾದ ಯೋಗವಿದ್ಯೆಯನ್ನು ಗೀತೆಯಲ್ಲಿ ***"ಪವಿತ್ರ ಮಿಹವಿದ್ಯತೇ"*** ಅಂದಿದ್ದಾರೆ, ಅಷ್ಟೇ ಅಲ್ಲದೆ ***" ನಹಿ ಜ್ಞಾನೇನ ಸದೃಶ್ಯಂ"*** ಎನ್ನುವ ಮಾತು ಸಹ ಇದೆ. ಇದಕ್ಕಿಂತ ಮಿಗಿಲಾದ ವಿದ್ಯೆಯಿಲ್ಲ ಮತ್ತು ಇದಕ್ಕೆ ಸಮಾನವಾದುದು

ಸಹ ಇಲ್ಲವೆಂದು ಅರ್ಥ. ಅದನ್ನು ಕಲಿಯುವವರು ಇಲ್ಲವಾ? ಕಲಿಸುವವರು ಇಲ್ಲವಾ? ಅನ್ನುವ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಯೋಗಶಾಸ್ತ್ರವನ್ನು ತಿಳಿದುಕೊಳ್ಳಬೇಕೆನ್ನುವವರು ಅಪರೂಪವಾಗಿದ್ದಾರೆ. ಆ ಶಾಸ್ತ್ರವನ್ನು ಕುರಿತು ತಿಳಿಸುವವರು ಮತ್ತಷ್ಟು ಅಪರೂಪವಾಗಿದ್ದಾರೆ.

ಇಂದು ಪ್ರಪಂಚ ವಿದ್ಯೆಗಳು ಓದಿ ಎಷ್ಟೋ ಕಲಿತ ಅವಿದ್ಯಾಪರರು ಕೆಲವರು ಯೋಗಶಾಸ್ತ್ರದ ಬೆಲೆಯನ್ನು ತಿಳಿಯದೆ ಗುರುಗಳನ್ನು ನೀಚವಾಗಿ ನೋಡುತ್ತಿದ್ದಾರೆ. ಗುರುಗಳ ಹತ್ತಿರ ಆತ್ಮಜ್ಞಾನವನ್ನು ತಿಳಿದುಕೊಳ್ಳುವವರನ್ನು ತಿಳುವಳಿಕೆ ಇಲ್ಲದವರಾಗಿ ಲೆಕ್ಕಿಸುತ್ತಿದ್ದಾರೆ. ಜೀವನದಲ್ಲಿ ಸ್ವಲ್ಪಕಾಲ ಇರುವ ಉದ್ಯೋಗಸ್ಥರು ಕೆಲವರು, ತಮಗೆ ಸರ್ಕಾರ ಕಲ್ಪಿಸಿದ ಅಧಿಕಾರದಿಂದ ಗರ್ವ ಪಡುತ್ತಾ, ಪೂಜ್ಯನೀಯವಾದ ಗುರು ಸಾಂಪ್ರದಾಯಗಳನ್ನೇ ಲೆಕ್ಕಿಸದೆ ಗುರುಗಳನ್ನು ಹೇಳನಮಾಡುತ್ತಿದ್ದಾರೆ. ಅಂತಹವರನ್ನು ನಾವು ಕೇಳುವುದು ಏನೆಂದರೆ! ತಿಂಗಳ ಫೀಜುಗಳೆಂದು ಹಣವನ್ನು ತೆಗೆದುಕೊಂಡು ಅಕ್ಷರಸಾರಾಂಶವಿಲ್ಲದ ವಿದ್ಯೆ ಹೇಳುವ ಗುರುಗಳಿಗಿಂತ ಉಚಿತವಾಗಿ ನಿಸ್ವಾರ್ಥವಾಗಿ ಎಲ್ಲದಕ್ಕಿಂತ ಮೀರಿದ ಯೋಗಶಾಸ್ತ್ರವನ್ನು ತಿಳಿಸುವವರು ಕಡಿಮೆಯವರಾ? ಸರ್ಕಾರಕ್ಕೆ (ಗುಲಾಮ) ಕೆಲಸಮಾಡುತ್ತಾ ಅಧಿಕಾರದಲ್ಲಿ ಇರುವವರೆಗೂ ನಮಸ್ಕಾರ ಮಾಡಿಸಿಕೊಂಡು, ಅಧಿಕಾರವಿಲ್ಲದ ತಕ್ಷಣ ಯಾರು ಬೆಲೆಕೊಡದ ಜೀವನವನ್ನು ಜೀವಿಸುವವರಿಗಿಂತ, ಎಷ್ಟೋ ಜನರಜೊತೆ ಜೀವನವೆಲ್ಲಾ ಪೂಜ್ಯರಾಗಿರುವ ಗುರುಗಳು ಕಡಿಮೆಯವರಾ? ಹಣ ಖರ್ಚುಮಾಡಿ ಚೈತನ್ಯವಿಲ್ಲದ ವಿದ್ಯೆಕಲಿಸುವವರಿಗಿಂತ, ಹಣ ಇಲ್ಲದೆ ಉಚಿತವಾಗಿ ಸಾಟಿಯಿಲ್ಲದ ವಿದ್ಯೆಯನ್ನು ಕಲಿತುಕೊಳ್ಳುವ ಗುರು ಶಿಷ್ಯರು ತಿಳುವಳಿಕೆ ಇಲ್ಲದವರಾ?

ಎಷ್ಟೋಜನ ತಾತ್ಕಾಲಿಕ ಸಂಪತ್ತು, ಅಧಿಕಾರ, ಪದವಿಯಿಂದ ಗರ್ವಪಡುತ್ತಾ ನಾಳೆ ನನ್ನ "ಜೀವನ" ಏನೆಂದು ಯೋಚಿಸದೆ, ತಿಂಗಳಕೊನೆಯಲ್ಲಿ ನನ್ನ "ಜೀತವೇನೆಂದು" ಯೋಚಿಸುತ್ತಿದ್ದಾರೆ. ಕಾಲಗರ್ಭದಲ್ಲಿ ಬೆರೆತುಹೋಗುವ ಶರೀರವನ್ನು ಕುರಿತು, ತನಗೆ ಉಂಟಾಗುವ ಅವಸ್ಥೆಗಳ ಬಗ್ಗೆ, ತನ್ನನ್ನು ಯಾರು

ರಕ್ಷಿಸಲಾರದ ಅನುಭವಗಳ ಬಗ್ಗೆ ಯೋಚಿಸದೆ ಕುರುಡನಂತೆ ಮಾನವನು ಬದುಕುತ್ತಿದ್ದಾನೆ. **ಯಂ. ಎ., ಓದಿ, ಯಸ್.ಐ. ಕೆಲಸ** ಬಂದಿದೆ ಎಂದು, ನನ್ನ ಸ್ಟೇಷನ್ ಪರಿಧಿಯಲ್ಲಿರುವವನನ್ನು ಹೊಡೆಯುವ ಅಧಿಕಾರ ಇದೆಯೆಂದು ಕೊಳ್ಳುತ್ತಿದ್ದಾನೆ. ಆದರೆ ನನ್ನ ಶರೀರ ಪರಿಧಿಯಲ್ಲಿ ಅಧಿಕಾರ ಇರುವವನೊಬ್ಬ ನಿದ್ದಾನೆಂದು, ಶರೀರ ಪರಿಧಿಯಲ್ಲಿರುವ ಶಿಕ್ಷೆಯಿಂದ ತಾನು ಯಾವ ಕಾರಣಕ್ಕೂ ತಪ್ಪಿಸಿಕೊಳ್ಳುವುದಿಲ್ಲವೆಂದು ತಿಳಿಯದೆ ಹೋಗುತ್ತಿದ್ದಾನೆ. ಪ್ರಪಂಚ ವಿದ್ಯೆಗಳು ಎಷ್ಟು ಓದಿದರೂ ಆತ್ಮಜ್ಞಾನ ಇಲ್ಲದ್ದು ಅವಿದ್ಯೆಯೇ. ಆದ್ದರಿಂದ ವಿದ್ಯೆ ಎಂದರೆ ಏನೋ ತಿಳಿಯಿರಿ, ಅಕ್ಷರ ಎಂದರೆ ಏನೋ ತಿಳಿಯಿರಿ. ಭಾಷಾಕ್ಷರಗಳಿಂದ ಕೂಡಿರುವುದೆ ಅಸಲಾದ ವಿದ್ಯೆ ಅಂದುಕೊಳ್ಳದೆ, ಅಕ್ಷರದಿಂದ ಕೂಡಿರುವುದೇ ಅಸಲಾದ ವಿದ್ಯೆ ಎಂದು ತಿಳಿದುಕೋ. ನೀನು ಎಷ್ಟು ಡಿಗ್ರಿಗಳು ತೆಗೆದುಕೊಂಡರು ಜೀವನದಲ್ಲಿ ಸಾರಾಂಶ ಇಲ್ಲವೆಂದು ತಿಳಿದುಕೋ. ತೃಪ್ತಿಯನ್ನು ಶಾಂತಿಯನ್ನು ಕಲ್ಪಿಸುವ, ಮಾನವ ಜೀವನಕ್ಕೆ ಸಾರಾಂಶವನ್ನು ತಿಳಿಸುವ ವಿದ್ಯೆಯಾದ ಬ್ರಹ್ಮವಿದ್ಯೆಯನ್ನು (ಯೋಗಶಾಸ್ತ್ರವನ್ನು) ತಿಳಿದುಕೋ, ಇಲ್ಲಿಯವರೆಗೂ ಇದ್ದ ಅವಿದ್ಯೆಯನ್ನು ಬಿಟ್ಟು ವಿದ್ಯಾಪರನಾಗು. ಕ್ಷರವನ್ನು ಬಿಟ್ಟು ಅಕ್ಷರವನ್ನು ತಿಳಿದುಕೊಳ್ಳಿ.

# ಯೋಗ ವಿದ್ಯೆ

ಜೀವಾತ್ಮ ಆತ್ಮವನ್ನು ತಿಳಿದುಕೊಳ್ಳುವುದಕ್ಕೆ, ಆತ್ಮವನ್ನು ತಿಳಿದು ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ, ಜನನ ಮರಣ ಪ್ರವಾಹದಿಂದ ದೂರವಾಗಿ ಶೂನ್ಯದಲ್ಲಿ ಎಲ್ಲಾಕಡೆ ತಾನಾಗಿರುವುದಕ್ಕೆ ಯೋಗವಿದ್ಯೆ ಕಲಿಯಬೇಕಾಗಿದೆ. ಪ್ರಪಂಚದಲ್ಲಿನ ಎಷ್ಟೋ ವಿದ್ಯೆಗಳಲ್ಲಿ ಯೋಗವಿದ್ಯೆ ದೊಡ್ಡದು, ಪವಿತ್ರವಾದುದು. ಮಾನವನ ತಿಳುವಳಿಕೆ ದೊಡ್ಡದಾಗಿದ್ದರೆ ಮಾತ್ರವೇ ಇಲ್ಲದಿದ್ದರೆ ಈ ವಿದ್ಯೆ ಅರ್ಥ ಆಗುವುದಿಲ್ಲ. ಅಸಲು ಬಹಳಜನರಿಗೆ ಈ ಯೋಗವಿದ್ಯೆ ಒಂದಿದೆ ಎಂದೂ ಸಹ ತಿಳಿಯದು. ಕೆಲವರಿಗೆ ತಿಳಿದರೂ ಅದನ್ನು ಎಲ್ಲಿಂದ ಪ್ರಾರಂಭಿಸಿ ಕಲಿಯಬೇಕೋ ತಿಳಿದಿಲ್ಲ. ಇರುವ ವಿದ್ಯೆಗಳಲ್ಲಿ ಯಾವುದು ಯೋಗವಿದ್ಯೆಯೋ

ತಿಳಿಯದು. ಅಂತಹವರು ಯೋಗ ವಿದ್ಯೆಯನ್ನು ತಿಳಿದುಕೊಳ್ಳಬೇಕೆಂದು ಕೊಳ್ಳುವುದರಲ್ಲಿ ತಪ್ಪಿಲ್ಲ. ಆದರೆ ಇತರ ವಿದ್ಯೆಗಳನ್ನು ಯೋಗವಿದ್ಯೆಯಾಗಿ ಭಾವಿಸಿ, ಅದನ್ನು ಕಲಿಯುವುದು ಆಚರಿಸುವುದರಲ್ಲಿ ಬಹಳ ತಪ್ಪು ಇದೆ. ಬೆಲೆಯುಳ್ಳ ಜೀವನಕಾಲವೇ ವ್ಯರ್ಥವಾಗಿ ಹೋಗುತ್ತಿದೆ.

ಯೋಗವಿದ್ಯೆ ತಿಳಿಯಬೇಕೆನ್ನುವವರು ಈ ವಿದ್ಯೆಯನ್ನು ಯಾರು, ಯಾವಾಗಿನಿಂದ ಪ್ರಾರಂಭಿಸಿದ್ದಾರೆ. ಇದನ್ನು ಆಚರಿಸಿ ಅನುಭವವನ್ನು ಹೊಂದಿದವರು ಇದ್ದಾರಾ? ಇದಕ್ಕೆ ಆಧಾರವಾದುದು ಯಾವ ಶಾಸ್ತ್ರವಾದರೂ ಇದೆಯಾ? ಎಂದು ತಿಳಿಯಬೇಕು. ಹಾಗೆ ತಿಳಿಯದೆ ಕೇಳಿರುವುದು, ಹೇಳಿರುವುದು ಎಲ್ಲಾ ಯೋಗವಿದ್ಯೆ ಎಂದುಕೊಳ್ಳುವುದು ತಪ್ಪು. ಈ ಯೋಗವಿದ್ಯೆಗೆ ಷಟ್‌ಶಾಸ್ತ್ರಗಳಲ್ಲಿ ಕೊನೆಯದಾದ ಯೋಗಶಾಸ್ತ್ರ ಆಧಾರ. ಯೋಗಶಾಸ್ತ್ರದಲ್ಲಿ ಯೋಗಕ್ಕೆ ಬೇಕಾದ ಶಾಸನಗಳೆಲ್ಲ ವಿವರವಾಗಿ ಇರುತ್ತವೆ. ಯೋಗಶಾಸ್ತ್ರ ವಿನಃ ಐದು ಶಾಸ್ತ್ರಗಳನ್ನು ಮಾನವನೇ ತಯಾರುಮಾಡಿದ್ದಾನೆ. ಯೋಗಶಾಸ್ತ್ರ ಮಾತ್ರ ಮಾನವರೂಪದಲ್ಲಿರುವ ಭಗವಂತನಿಂದ (ಪರಮಾತ್ಮನಿಂದ) ಬಯಲ್ಪಟ್ಟಿದೆ (ಹೊರಬಂದಿದೆ). ಉಳಿದ ಐದು ಶಾಸ್ತ್ರಗಳಿಂದ ಪ್ರಪಂಚದಲ್ಲಿ ಎಷ್ಟೋ ಫಲಿತಗಳು ಲಭಿಸಿದರೂ, ಯೋಗಶಾಸ್ತ್ರದಿಂದ ಒಂದೇ ಒಂದು ಫಲಿತವು ಲಭಿಸುತ್ತಿದೆ. ಯೋಗವಿದ್ಯೆಯಿಂದ ಫಲಿತವು ಕರ್ಮ ನಶಿಸಿ ಮೋಕ್ಷ ಲಭಿಸುವುದೇ ಹೊರತು ಮತ್ತೆ ಏನೂ ಇಲ್ಲ.

ಒಂದೇ ಒಂದು ಫಲಿತವನ್ನುಕೊಡುವ ಯೋಗವಿದ್ಯೆ ಎಲ್ಲಾ ವಿದ್ಯೆಗಳಿಗಿಂತ ಕಷ್ಟವಾದುದು. ಆದ್ದರಿಂದ ಸುಲಭವಾಗಿ ಯಾರಿಗೂ ಅರ್ಥವಾಗುವುದಿಲ್ಲ. ಎಷ್ಟೋ ಛಲ ಇದ್ದರಾಗಲಿ ಲಭಿಸದ ಯೋಗವಿದ್ಯೆಯನ್ನು ಬೋಧಿಸುವವರು, ಪ್ರಪಂಚ ವಿದ್ಯೆಗಳು ತಿಳಿಸುವ ಪ್ರಪಂಚ ಬೋಧಕರಿಗಿಂತ ಅಧಿಕರು. ಯೋಗವಿದ್ಯೆಯ ಬೋಧಕರು ಪೂರ್ವದಿಂದ ಈದಿನದವರೆಗೂ ಇದ್ದಾರೆ. ಅಂದಿಗೂ ಇಂದಿಗೂ ಯೋಗಶಾಸ್ತ್ರ ಒಂದೇ ಆದರೂ ಬೋಧಿಸುವ ಬೋಧಕರು ಅಂದಿಗೂ ಇಂದಿಗೂ ಬದಲಾವಣೆಹೊಂದಿದ್ದಾರೆ. ಅಂದಿನ

ಬೋಧಕರು ಯೋಗವಿದ್ಯೆಯನ್ನು ಯೋಗಶಾಸ್ತ್ರಾನುಸಾರ ಬೋಧಿಸುತ್ತಿದ್ದರು. ಈದಿನ ಕೆಲವರು ಗುರುಗಳೆಂದುಕೊಳ್ಳುವ ಬೋಧಕರು ಶಾಸ್ತ್ರವನ್ನು ಆಧಾರ ಮಾಡಿಕೊಳ್ಳುತ್ತಿಲ್ಲ. ಅಶಾಸ್ತ್ರೀಯ ಪದ್ಧತಿಯಲ್ಲಿ ಬೋಧನೆ ಮಾಡುತ್ತಿದ್ದಾರೆ. ಆ ದಿನ ಭಕ್ತನನ್ನು ಸಂಪೂರ್ಣಜ್ಞಾನಿಯನ್ನು ಮಾಡಿ ನಂತರ ಯೋಗಪದ್ಧತಿಯನ್ನು ಬೋಧಿಸಿ ಉಪದೇಶ ಕೊಡುತ್ತಿದ್ದರು. ಅದಕ್ಕೆ ಎಷ್ಟೋ ಕಾಲ ಹಿಡಿಯುತ್ತಿತ್ತು. ಈ ದಿನ ಹೋದ ತಕ್ಷಣ ಉಪದೇಶ ಕೊಡುವವರಿದ್ದಾರೆ. ಪೂರ್ವಕಾಲದಲ್ಲಿ ಎಷ್ಟೋ ಪವಿತ್ರವಾಗಿ ಬೋಧಿಸಲ್ಪಡುವ ವಿದ್ಯೆ ಈದಿನ ಕ್ಲಾಸುಗಳು ಕೋರ್ಸ್ ಗಳೆನ್ನುವವರೆಗೂ ಬಂದಿದೆ. ಆ ದಿನ ಶಿಷ್ಯರಿಗೆ ಗುರುವು ಒಬ್ಬನೆ. ಆತನಿಂದ ಉಪದೇಶ ಹೊಂದಿ, ಆತನನ್ನೇ ದೈವವಾಗಿ ಪೂಜಿಸುತ್ತಿದ್ದರು. ಈದಿನ ಒಬ್ಬ ದೊಡ್ಡ ಗುರು, ಆತನ ಕೆಳಗೆ ಅಸಿಸ್ಟೆಂಟು ಗುರುಗಳು ಬಹಳ ಭಾಗಗಳಾಗಿ ಏರ್ಪಟ್ಟಿದ್ದಾರೆ. ದೊಡ್ಡ ಗುರುವಿಗೆ ವ್ಯವಧಿ ಇಲ್ಲ ಎಂದು ಕೆಳಗಿನ ಗುರುಗಳೇ ಉಪದೇಶ ಕೊಡುತ್ತಿದ್ದಾರೆ. ತೆಗೆದುಕೊಳ್ಳುವವರು ತಿಳಿಯದವರೆ ಆದ್ದರಿಂದ ನಮಗೆ ಉಪದೇಶ ಲಭಿಸಿದರೇ ಸಾಕೆಂದುಕೊಳ್ಳುತ್ತಿದ್ದಾರೆ.

ತೆಗೆದುಕೊಳ್ಳುವವರು ಉಪದೇಶ ಪಡೆಯಬೇಕೆಂಬ ಕೋರಿಕೆ ಬೊಟ್ಟು, ಉಪದೇಶ ಎಂದರೆ ಏನೆಂದು, ಅದರ ಫಲಿತ ಏನೆಂದು ಸಹ ಆಲೋಚಿಸುತ್ತಿಲ್ಲ. ಅಷ್ಟೊ ಇಷ್ಟೊ ಓದಿಕೊಂಡವರೂ ಸಹ ಯೋಚಿಸದೆ ಇಷ್ಟಬಂದ ಮಾರ್ಗವನ್ನು ಅನುಸರಿಸುತ್ತಿದ್ದಾರೆ. ಪೂರ್ವಕಾಲದಲ್ಲಿ ಕೇಳಿರುವುದನ್ನು ವಿವರಿಸಿ ತಿಳಿದುಕೋ ಎಂದು, ತಿಳಿದುಕೊಂಡಿರುವುದನ್ನು ಆಚರಿಸಿ ಅನುಭವಕ್ಕೆ ತಂದುಕೋ ಎಂದು ತಿಳಿಸುತ್ತಿದ್ದರು. ನೀನು ತಿಳಿದುಕೊಂಡ ಜ್ಞಾನವನ್ನು ಇತರರಿಗೆ ತಿಳಿಸೆಂದು ಸಹ ಹೇಳುತ್ತಿದ್ದರು. ಈದಿನ ಗುರುರಹಸ್ಯವೆಂದು ಇತರರಿಗೆ ತಿಳಿಸಬಾರದೆಂದು ನಿಬಂಧನೆಗಳು ವಿಧಿಸುವ ಗುರುಗಳಿದ್ದಾರೆ. ಮತ್ತು ನಾವು ಹೇಳುವ ಬೋಧನೆಗಳು ಮಾತ್ರ ಕೇಳಬೇಕೆಂದು, ಇತರರ ಬೋಧನೆಗಳಾಗಲಿ, ಇತರ ಪುಸ್ತಕಗಳಾಗಲಿ ನೋಡಬಾರದೆಂಬುವವರೂ ಸಹ ಇದ್ದಾರೆ. ತಮ್ಮದು ದೊಡ್ಡ ವಿದ್ಯೆ ಆದಾಗ ಆ ವಿಧವಾದ ನಿಬಂಧನೆಗಳು ಏಕೋ ಅರ್ಥವಾಗಲಿಲ್ಲ.

ಸಂಶಯರಹಿತವಾದುದೆ ಜ್ಞಾನ. ಸಂಶಯಗಳು ಉಳಿಯುವುದು ಜ್ಞಾನ ಅಲ್ಲ. ಈದಿನ ಸಂಶಯಗಳು ಬಗೆಹರಿಸದ ಶಾಸ್ತ್ರರಹಿತವಾದ ಜ್ಞಾನವನ್ನು ಬಹಳಜನ ಪ್ರಜೆಗಳು ಅನುಸರಿಸುತ್ತಿದ್ದಾರೆ. ಅಂತಹವರಿಗೆ ಇದು ಸರಿಯಾದ ದಾರಿ ಅಲ್ಲವೆಂದು ಹೇಳಿದರು ಕೇಳುವುದಿಲ್ಲ. ಅಸಲು ಜ್ಞಾನವೇ ಅಲ್ಲದಿರುವುದನ್ನು ಅನುಸರಿಸುತ್ತಾ ಅದೇ ಸ್ವಚ್ಛವಾದ ಜ್ಞಾನ ಅಂದುಕೊಳ್ಳುವವರು ಇದ್ದಾರೆ. ದೈವಜ್ಞಾನ ಕೆಲವು ನಿಬಂಧನೆಗಳಿಂದ ಕೂಡಿರುತ್ತದೆಂದು ತಿಳಿಯದೆ ಅವರಿಗೆ ಇಷ್ಟಬಂದಿರುವುದನ್ನು ಜ್ಞಾನ ಅಂದುಕೊಳ್ಳುವವರು ಇದ್ದಾರೆ. ಗಾರಡಿ ವಿದ್ಯೆಯಂತಹ ಮಹಿಮೆಗಳನ್ನು ದೊಡ್ಡದಾಗಿ ತಿಳಿದವರು ಬ್ರಹ್ಮವಿದ್ಯೆಯನ್ನು ಗುರುತಿಸಲಾರದೆ ಹೋಗುತ್ತಿದ್ದಾರೆ. ಇಹದಲ್ಲಿ ಬರುವ ಪ್ರಪಂಚ ಸುಖಗಳಿಗಾಗಿ ಅಲ್ಲದೇ ಪರದಲ್ಲಿ ಹೊಂದುವ ದೈವಸನ್ನಿಧಿಗಾಗಿ ಜ್ಞಾನವನ್ನು ಅನುಸರಿಸಬೇಕೆಂಬ ವಿಷಯವನ್ನು ಮರೆತುಹೋಗಿ ಪ್ರಪಂಚ ಸುಖಗಳನ್ನು, ಪ್ರಪಂಚ ಕೋರಿಕೆಗಳು ನೆರವೇರುವುದಕ್ಕೆ ಕ್ರಿಯೆಗಳನ್ನು ಹೇಳುವ ಗುರುವನ್ನು ಆಶ್ರಯಿಸುತ್ತಿದ್ದಾರೆ.

ಜ್ಞಾನ ತಿಳಿಯದೇನೇ ಸಾಧನೆ ಮಾಡಬಾರದೆಂದು ಶಾಸ್ತ್ರ ಹೇಳುತ್ತಿದ್ದರೂ, ಪೂರ್ತಿ ಜ್ಞಾನ ತಿಳಿಯದೇನೇ ಉಪದೇಶ ಹೊಂದಿ ಸಾಧನೆ ಮಾಡುವವರು ಕೆಲವರಿದ್ದಾರೆ. ಅಂತಹವರು ನಾವು ಮಾಡುವ ಸಾಧನೆ ತೃಪ್ತಿಯಾಗಿದೆ ಎಂದು, ಸಾಧನೆಯಲ್ಲಿ ಹಾಯಾಗಿದೆ ಎಂದು, ಮತ್ತಿನಂತೆ ಇದೆಯೆಂದು ಎನ್ನುತ್ತಿದ್ದಾರೆ. ಅವರ ಅನುಭವವನ್ನು ಎಷ್ಟೋ ವಿಧಗಳಾಗಿ ಹೇಳಿದರೂ ಇದರಿಂದ ನಮಗೆ ಲಭಿಸುವ ಫಲಿತವೇನು? ಯಾವ ಫಲಿತಕ್ಕೋಸ್ಕರ ಸಾಧನೆ ಮಾಡುತ್ತಿದ್ದೇವೆ ಎನ್ನುವ ಮಾತು ಪೂರ್ತಿಯಾಗಿ ಮರೆತಿದ್ದಾರೆ. ಪ್ರತಿ ಕೆಲಸಕ್ಕೆ ಒಂದು ಫಲಿತ ಇರುತ್ತದಲ್ಲ! ನೀವು ಮಾಡುವ ಸಾಧನೆಗೆ ಯಾವ ಫಲಿತ ಇದೆಯೆಂದು ಕೆಲವರನ್ನು ಕೇಳಿದರೂ ನಮಗೆ ಆತ್ಮಶಾಂತಿಯಾಗಿ ಇದೆಯೆಂದು, ಮೊದಲಿಗಿಂತ ಮನಸ್ಸು ನಿರ್ಮಲವಾಗಿದೆಯೆಂದೇ ಹೇಳುತ್ತಿದ್ದಾರೆ. ಅಸಲಾದ ಫಲಿತವನ್ನು ಮರೆತುಹೋಗಿ ಸಾಧನೆ ಮಾಡುವುದೆ ಮುಖ್ಯವೆಂದುಕೊಳ್ಳುತ್ತಿದ್ದಾರೆ. ಯೋಗಶಾಸನಗಳು ವಿನಃ ಇರುವ ಪದ್ಧತಿಗಳು ಯೋಗ ಅಲ್ಲವೆಂದು

ತಿಳಿಯದವರು ಅಶಾಸ್ತ್ರೀಯಪದ್ಧತಿಯಲ್ಲಿ ಸಾಧನೆ ಮಾಡುತ್ತಿದ್ದಾರೆ. ಅಂತಹ ಸಾಧನೆಯಿಂದ ಕರ್ಮ ನಾಶವಾಗುವ ಶಕ್ತಿ ಲಭಿಸುವುದಿಲ್ಲ. ಕರ್ಮ ನಾಶವಾಗದ ಸಾಧನೆ ಎಷ್ಟು ಗಾಢವಾಗಿ ಮಾಡಿದರು ಪ್ರಯೋಜನ ಇಲ್ಲ.

ಮತ್ತೆ ಕೆಲವರು ಆತ್ಮವನ್ನು ಕುರಿತು ಸಾಧನೆ ಮಾಡುತ್ತಿದ್ದೇವೆ ಎನ್ನುತ್ತಿದ್ದಾರೆ. ಆದರೂ ಅವರು ನಮ್ಮ ಸಾಧನೆಯಿಂದ ಕೆಲವು ಜನ್ಮಗಳ ನಂತರ ನಮಗೆ ದೇವತಾ ಜನ್ಮಗಳು ಲಭಿಸುತ್ತವೆಂದು ಎನ್ನುತ್ತಿದ್ದಾರೆ. ಯೋಗ ಎನ್ನುವಪದ ಉಪಯೋಗಿಸುತ್ತಾ ದೇವತೆಗಳಾಗಿ ಬದಲಾಗುತ್ತೇವೆಂಬುವುದು ಆಶ್ಚರ್ಯಕರ. ಜೀವಾತ್ಮ ಆತ್ಮದಜೊತೆ ಸಂಯೋಗ ಹೊಂದಿದಾಗ ಯೋಗ ಎನ್ನುತ್ತೇವೆ. ಯೋಗದಿಂದ ಮೋಕ್ಷ ಲಭಿಸುತ್ತದೆಂದು, ಪುಣ್ಯದಿಂದ ಉತ್ತಮ ಜನ್ಮಗಳು, ದೇವತಾರಾಧನೆಯಿಂದ ದೇವತಾ ಜನ್ಮಗಳು ಲಭಿಸುತ್ತವೆಂದು ಯೋಗ ಶಾಸ್ತ್ರ ತಿಳಿಸುತ್ತಿದೆ. ಹಾಗಿರುವಾಗ ಯೋಗದಿಂದ ದೇವತಾ ಜನ್ಮಗಳು ಲಭಿಸುತ್ತವೆನ್ನುವುದು ಅಶಾಸ್ತ್ರೀಯವಲ್ಲವೆ!

ನಮ್ಮ ಸಾಧನೆಗೆ ಶಾಸ್ತ್ರ ಅಗತ್ಯ ಇಲ್ಲವೆಂದು, ನಮ್ಮ ಗುರುಗಳು ನಮ್ಮ ಮುಂದೆ ಇಟ್ಟಿರುವ ಆಹಾರವನ್ನು ತಿನ್ನುವುದು ನಮಗೆ ಮುಖ್ಯವೆಂದು ಕೆಲವರನ್ನುತ್ತಿದ್ದಾರೆ. ಹಾಗೆ ತಿನ್ನುವುದರಲ್ಲಿ ತಪ್ಪಿಲ್ಲ ಆದರೆ ತಿನ್ನುವ ತಿಂಡಿಯಿಂದ ನಮ್ಮ ಶರೀರದಲ್ಲಿರುವ ರೋಗ ಹೋಗುತ್ತದಾ, ಅಥವಾ ರೋಗ ಬರುತ್ತದಾ ಎಂದು ಯೋಚಿಸುವುದು ಮುಖ್ಯ. ಆದ್ದರಿಂದ ಯಾವುದು ಎಂತಹದೆಂದು ವಿಮರ್ಷಿಸುವ ಶಕ್ತಿ ನಿನ್ನಲ್ಲಿ ಬರಬೇಕು. ವಿಮರ್ಶೆ ಮೂಲಕ ಸತ್ಯಾಸತ್ಯಗಳು ತಿಳಿದುಕೊಳ್ಳುವ ಸಾಮರ್ಥ್ಯಕ್ಕೆ ನೀನು ಬರಬೇಕು. ಸಂಶಯಗಳನ್ನು ತಕ್ಷಣ ನಿರ್ಮೂಲ ಮಾಡುವ ಜ್ಞಾನಿಯು ಆಗಬೇಕು. ಆಗ ಯೋಗ ಸಾಧನೆ ಆಚರಿಸಿದ ಕೆಲವು ನಿಮಿಷಗಳಲ್ಲಿಯೇ ಯೋಗವನ್ನು ಸಾಧಿಸಬಹುದು. ಹಾಗೆ ಅಲ್ಲದೆ ಪ್ರಪಂಚದಲ್ಲಿ ಆಸ್ತಿಗಳು ದೊಡ್ಡದಾಗಿ ಇರುವವರು ದೊಡ್ಡ ಗುರುಗಳೆಂದು ಕೊಂಡವರ ಮಾತುಗಳನ್ನು ನಂಬಿದರೆ ಜೀವನವೆಲ್ಲಾ ವ್ಯರ್ಥವಾಗುತ್ತದೆ. ಅವರು ಹೇಳುವ ಮಾರ್ಗವನ್ನು ಯೋಚಿಸಿ ಶಾಸ್ತ್ರಪದ್ಧತಿಯಾದರೆ ಅದನ್ನು ಅನುಸರಿಸಿದರೂ ಜೀವನವು ಸಾಫಲ್ಯವಾಗುತ್ತದೆ.

ಸಾವಿರಜನ ಬೋಧಕರಲ್ಲಿ ಒಬ್ಬ ಗುರು ಇರಬಹುದು, ಇರದೆಹೋಗಬಹುದು. ಗುರು ಸಾವಿರ ವರ್ಷಗಳಿಗೊಂದು ಸಲ ಭೂಮಿಮೇಲೆ ಬರಬಹುದು, ಬಾರದೆಹೋಗಬಹುದು. ಆದ್ದರಿಂದ ಗುರು ವಿಷಯದಲ್ಲಿ ಜಾಗ್ರತೆ ಇಲ್ಲದೆ ಹೋದರೆ ನಿನ್ನ ಜನ್ಮ ವ್ಯರ್ಥವಾಗುತ್ತದೆ. ಪ್ರತಿ ವಿದ್ಯೆ ಆರು ಶಾಸ್ತ್ರಗಳ ಸಂಬಂಧವಾಗಿಯೇ ಇರುತ್ತದೆ. ಪ್ರತಿ ವಿದ್ಯೆ ಶಾಸ್ತ್ರಬದ್ಧವಾದಾಗ ಬ್ರಹ್ಮವಿದ್ಯೆ ಶಾಸ್ತ್ರವು ಆಗದಿರುತ್ತದಾ? ಶಾಸ್ತ್ರೀಯ ಪದ್ಧತಿಯಲ್ಲಿ ಯೋಗಸಾಧನೆ ಮಾಡಿದ ನರನು ಯೋಗಶಕ್ತಿ ಹೊಂದಿ ಕರ್ಮದಿಂದ ಮುಕ್ತನಾಗುತ್ತಾನೆ. ಯೋಗಶಾಸ್ತ್ರ ವಿಶಾರಥನಾದ ಶ್ರೀಕೃಷ್ಣನು ತಿಳಿಸಿದ ಯೋಗಶಾಸ್ತ್ರವಾದ ಭಗವದ್ಗೀತೆಯನ್ನು ನೋಡಿರಿ, ಅದರಲ್ಲಿನ ಶಾಸನಗಳು ಹುಡುಕಿ ತೆಗೆಯಿರಿ, ಆಚರಿಸಿರಿ, ತಪ್ಪದೆ ಯೋಗಿಯಿಂದ ಬ್ರಹ್ಮರ್ಷಿವರೆಗೂ ಮುನ್ನಡೆಯುತ್ತೀರ. ಶಾಸ್ತ್ರ ತಿಳಿದವನು ಶಾಸ್ತ್ರಿ, ಯೋಗ ತಿಳಿದವನು ಯೋಗಿ. ಆದ್ದರಿಂದ ಯೋಗಶಾಸ್ತ್ರ ತಿಳಿದು ಶಾಸ್ತ್ರೀಯಾಗಿ, ಯೋಗ ಆಚರಿಸಿ ಯೋಗಿಯಾಗಿ, ಕರ್ಮರಾಹಿತ್ಯ ಮಾಡಿ ಸಿದ್ಧಿಯನ್ನು ಹೊಂದಬೇಕೆಂದು ತಿಳಿಸುತ್ತಿದ್ದೇವೆ. ಶಾಸ್ತ್ರಿ ಅಲ್ಲದ ಯೋಗಿ, ಯೋಗಿಯಲ್ಲದ ಶಾಸ್ತ್ರಿ ಪರಮಾತ್ಮನನ್ನು ಹೊಂದಲಾರನು.

# ವಕ್ರಮಾರ್ಗ

ಭೂಮಿ ಮೇಲೆ ಒಂದು ಚಿಕ್ಕ ದೇಶವಿದ್ದರೆ ಮತ್ತೊಂದು ದೊಡ್ಡ ದೇಶವಿದೆ. ಹೀಗೆ ಎಷ್ಟೋ ಚಿಕ್ಕ ದೊಡ್ಡ ದೇಶಗಳಿಂದ ಭೂಮಿ ತುಂಬಿದೆ. ಚಿಕ್ಕ ದೇಶದಲ್ಲಾಗಲಿ, ದೊಡ್ಡ ದೇಶದಲ್ಲಾಗಲಿ ಆ ದೇಶಕ್ಕೆ ಕಾನೂನಿನ ಪ್ರಕಾರ ಒಬ್ಬ ಅಧ್ಯಕ್ಷನು ಇರುತ್ತಾನೆ. ಆ ಅಧ್ಯಕ್ಷನ ಆಜ್ಞೆಯಲ್ಲಿ ಆ ದೇಶಸ್ಥರೆಲ್ಲರೂ ಒಳಪಟ್ಟಿರಬೇಕು. ಕಾನೂನಿನ ಪ್ರಕಾರ ಆತನನ್ನು ಎಲ್ಲರೂ ಗೌರವಿಸಬೇಕಾಗಿದೆ. ಕೇವಲ ಒಂದು ದೇಶಕ್ಕೆ ನಾಲ್ಕೈದು ವರ್ಷಗಳು ಮಾತ್ರ ಅಧ್ಯಕ್ಷಪದವಿಯಲ್ಲಿ ಇರುವವನನ್ನೇ ಎಷ್ಟೋ ಗೌರವಿಸುವ ಪ್ರಜೆಗಳು, ಭೂಮಿಮೇಲೆ ಎಲ್ಲಾ ದೇಶಗಳಿಗೇ ಅಲ್ಲದೆ ವಿಶ್ವದಲ್ಲಿನ ಎಲ್ಲಾ ಗೋಳಗಳಿಗೂ ಆದಿಕರ್ತನಾಗಿ,

ಅಧ್ಯಕ್ಷನಾಗಿ ಶಾಶ್ವತವಾಗಿರುವ ದೈವವನ್ನು ಯಾರೂ ಗೌರವಿಸುತ್ತಿಲ್ಲ. ಪ್ರಪಂಚಕ್ಕೆಲ್ಲಾ ಆದಿಕರ್ತನಾದ ಪರಮಾತ್ಮ ಒಬ್ಬನಿದ್ದಾನೆಂದು ತಿಳಿದವರು ಕೋಟಿಗೊಬ್ಬನಿರುವುದು ಸಹ ಅಪರೂಪ. ಈ ಮಾತು ಕೆಲವರಿಗೆ ಆಶ್ಚರ್ಯವನ್ನು ಉಂಟುಮಾಡಬಹುದು, ಎಷ್ಟೋ ದೇವಾಲಯಗಳು ಇವೆ, ಎಷ್ಟೋ ಜನ ಭಕ್ತರು ಇದ್ದಾರೆ, ಎಷ್ಟೋ ವಿಧದ ಆರಾಧನೆಗಳು ನಡೆಯುತ್ತಿವೆ, ಎಷ್ಟೋ ಹಣವನ್ನು ದೇವರಿಗೋಸ್ಕರ ಖರ್ಚು ಮಾಡುತ್ತಿದ್ದೇವೆ ಅಂತಹದರಲ್ಲಿ ಕೋಟಿಗೊಬ್ಬರು ಸಹ ಅಪರೂಪವೆಂಬ ಮಾತು ಎಷ್ಟು ಯೋಗ್ಯವೆಂಬ ಸಂದೇಹವು ಬಹಳಜನರಿಗೆ ಉಂಟಾಗಬಹುದು.

ನಿಜ ಹೇಳಬೇಕೆಂದರೆ ಈಗಿನ ಮಾನವರಲ್ಲಿ ಭಕ್ತಿ ಇದೆ. ಆದರೆ ಅದು ಅಸಲಾದ ದೇವರೊಬ್ಬನಿದ್ದಾನೆಂದು ಅಲ್ಲ. ಸಾವಿರಾರು ದೇವತೆಗಳನ್ನು ಮಾನವನೇ ಸೃಷ್ಟಿಸಿಕೊಂಡು ಅವರಲ್ಲಿ ಕೆಲವರನ್ನು ಆರಾಧಿಸುತ್ತಿದ್ದಾನೆ. ಮಾನವರಲ್ಲಿ ಭಕ್ತಿ ದೇವರ ಮಾರ್ಗದ ಕಡೆ ಸಾಗದೆ ಅನ್ಯದೇವತೆಗಳ ಕಡೆ ಹೋಗುತ್ತಾ ಯಾವತ್ತೋ ವಕ್ರಮಾರ್ಗ ಹಿಡಿದಿದೆ. ಗುಣವಿಲ್ಲದ ದೇವರಿಗೂ ಸಹ ಆಸೆ ಎಂಬ ಗುಣವನ್ನು ಕಲ್ಪಿಸಿ ನನಗೆ ಈ ಕೆಲಸ ನೆರವೇರಿಸು ನಿನಗೆ ನಾನು ಇದು ಕೊಡುತ್ತೇನೆಂದು ದೇವರಿಗೆ ಆಸೆ ತೋರಿಸುವ ಸ್ಥಿತಿಗೆ ನಮ್ಮ ಭಕ್ತಿ ಕೆಳಕ್ಕಿಳಿದು ವಕ್ರಮಾರ್ಗ ಹಿಡಿದಿದೆ. ಸಿದ್ಧಾಂತದ ಪ್ರಕಾರ ದೇವರು ಏನು ಮಾಡುವವನು ಅಲ್ಲ, ಸಾಕ್ಷಿ ಭೂತನಾಗಿ ನೋಡುವವನು ಮಾತ್ರವೇ ಎಂದು ಶಾಸ್ತ್ರದಲ್ಲಿ ಪ್ರಕಟಿಸಿ ಹೇಳಿದ್ದಾರೆ. ದೇವರೆಂದರೆ ಯಾರೆಂದು ತಿಳಿಯದವರು ಎಷ್ಟೋಜನ ದೇವರುಗಳನ್ನು ಕಲ್ಪಿಸಿಕೊಂಡು ಅಸಲಾದ ದೇವರನ್ನು ನೆನಪಿಸಿ ಕೊಳ್ಳೂವುದೂ ಸಹ ಇಲ್ಲ. ದೇವತೆಗಳ ಭ್ರಮೆಯಲ್ಲಿರುವವರಿಗೆ ಅಗಮ್ಯಗೋಚರ ವಾದ ದೇವರೊಬ್ಬನಿದ್ದಾನೆಂದು ಸಹ ಗೊತ್ತಿಲ್ಲ. ಕಂಠಮಾಧುರ್ಯವನ್ನು ಹೊರಗೆ ತೋರಿಸುವ ಭಜನೆಗಳು, ಅಂದಚಂದಗಳು ನೋಡುಕೊಳ್ಳುವುದಕ್ಕೆ ಅನುಕೂಲ ವಾದ ಜಾತ್ರೆಗಳು ಈ ದಿನ ಇವೆ. ಆ ದಿನ ದೇವರ ಹೆಸರಿನಿಂದ ನಡೆಸುತ್ತಿದ್ದ ಜಾತ್ರೆಗಳು ಈದಿನ ಗುಂಪಿನಲ್ಲಿ ನೂಕುನುಗ್ಗಲು ಎನ್ನುವಂತೆ ಇವೆ. ಇದು ವಕ್ರಮಾರ್ಗ ಅಲ್ಲವಾ! ಪೂರ್ವದಲ್ಲಿ ದೇವರನ್ನು ತಿಳಿಸುವ ಚಿಹ್ನೆಗಳಾಗಿ

ನೆಲೆಸಿರುವ ದೇವಾಲಯಗಳು ದರ್ಶನಕ್ಕೆ ಟಿಕೇಟುಗಳು, ಪೂಜೆಗಳಿಗೆ ರೇಟುಗಳಿಟ್ಟು ಧನಾರ್ಜನೆಯಲ್ಲಿ ಪೋಟಿಬೀಳುತ್ತಿವೆ. ಇದು ವಕ್ರಮಾರ್ಗ ಅಲ್ಲವಾ! ಪರಮಾರ್ಥ ಚಿಂತನೆಹೊಂದಿ ಆ ಪರಮಾರ್ಥವನ್ನೇ ಬೋಧಿಸಿ ಅದನ್ನು ತಿಳಿಸುವುದೇ ನಮ್ಮ ಕರ್ತವ್ಯವೆನ್ನುವ ಬ್ರಹ್ಮವಿದ್ಯಾ ಗುರುಗಳು ಈ ದಿನ ಪರಮಾರ್ಥವನ್ನು ಬಿಟ್ಟು ಪ್ರಪಂಚಾರ್ಥವಾದ ವಿದ್ಯಾಬೋಧನೆಗಳನ್ನು ಮಾಡಿಸುತ್ತಾ ಚಿಕ್ಕ ಶಾಲೆಯಿಂದ ದೊಡ್ಡ ವಿಶ್ವವಿದ್ಯಾಲಯದವರೆಗೂ ನೆಲೆಗೊಳಿಸುತ್ತಿದ್ದಾರೆ. ಇದು ವಕ್ರಮಾರ್ಗ ಅಲ್ಲವಾ! ಪ್ರಪಂಚಕ್ಕೆಲ್ಲಾ ಒಬ್ಬನೇ ದೇವರೆಂದು ತಿಳಿಯದೆ ಮತಕ್ಕೊಬ್ಬ ದೇವರೆಂದು ಮತದ್ವೇಷಗಳು ಬೆಳೆಸಿಕೊಳ್ಳುವುದು ಇಂದಿನ ಪ್ರಜೆಗಳ ವಕ್ರಮಾರ್ಗ ಅಲ್ಲವಾ! ಕುಟುಂಬದಲ್ಲಿನ ವ್ಯಕ್ತಿಯನ್ನು ಮರಣಿಸುವಂತೆ ಮಾಡು ನನಗೆ ಬಂದಿರುವ ಆಸ್ತಿಯಲ್ಲಿ ನಾಕಾಣಿ ಭಾಗ ನಿನಗೆ ಮೀಸಲು ಹಾಕುತ್ತೇನೆಂದು ನೀಚವಾದ ಕೋರಿಕೆಗಳು ಸಹ ಕೋರುವ ಸ್ಥಿತಿಗೆ ನಮ್ಮ ಭಕ್ತಿ ಇದೆ ಎಂದರೆ ಅದು ಪೂರ್ತಿ ವಕ್ರಮಾರ್ಗ ಹಿಡಿದಂತಲ್ಲವೆ!

ಮಾನವರು ಈ ವಿಧವಾಗಿ ಬದಲಾಗುವುದಕ್ಕೆ ಕಾರಣ ಏನೆಂದು ಯೋಚಿಸಿದರೆ ಒಂದು ಅಸಲಾದ ದೇವರನ್ನು ಕುರಿತು ತಿಳಿಸುವ ಗುರುಗಳಾಗಲಿ ಸ್ವಾಮಿಗಳಾಗಲಿ ಈ ದಿನ ಇಲ್ಲ. ಎರಡು ನಿಜವಾದ ದೇವರೊಬ್ಬನಿದ್ದಾನೆಂದು ಯಾರಾದರೂ ಹೇಳುವವರು ಇದ್ದರೂ ಕೇಳುವವರು ಇಲ್ಲದಂತೆ ಹೋಗಿದ್ದಾರೆ. ಈ ಎರಡು ಕಾರಣಗಳಿಂದ ದೈವಮಾರ್ಗ ವಕ್ರಮಾರ್ಗವಾಗಿ ಹೋಗಿದೆ. ಈದಿನ ಗುರುಗಳು ಭಕ್ತಿಯನ್ನು ಉಂಟುಮಾಡುವ ಹಿರಿಯರು ಇದ್ದಾರಲ್ಲ! ನೀವು ಇಲ್ಲ ಅನ್ನುತ್ತಿದ್ದೀರೆಂದು ಕೆಲವರಿಗೆ ಪ್ರಶ್ನೆಬರಬಹುದು. ಅದಕ್ಕೆ ನಮ್ಮ ಸಮಾಧಾನ ದೇವರನ್ನು ತಿಳಿದ ಜ್ಞಾನಿಗಳು ಯಾರಾದರೂ ಇದ್ದರೆ ಈಗಿನ ಸಮಾಜವನ್ನು ನೋಡಿ ನಾವು ಸತ್ಯ ಹೇಳಿದರೆ ಮನುಷ್ಯರು ಕೇಳುವ ಸ್ಥಿತಿಯಲ್ಲಿ ಇಲ್ಲವೆಂದು, ಹಾಗೆ ಸತ್ಯವನ್ನು ಹೇಳಿದರೆ ಈಗಿರುವ ಇವರಿಗೆ ವಿರುದ್ಧವಾಗಿ ಕಾಣಿಸುತ್ತಿದೆಯೆಂದು, ಅದರಿಂದ ತಮಗೆ ಹಾನಿ ಉಂಟಾಗುತ್ತದೆ ಎಂದು ತಿಳಿದು ಭಯಪಟ್ಟು ಏನು ಹೇಳದೆ ಸುಮ್ಮನಿದ್ದಾರೆ. ಕೆಲವರು ಹಿರಿಯರು

ದೈವತ್ವದ ಸಾರಾಂಶ ತಿಳಿಯದವರಾದರೂ ಅವರು ಅನುಸರಿಸುತ್ತಿರುವುದು ವಕ್ರಮಾರ್ಗ ಆದರೂ, ಅದೇ ದೊಡ್ಡದೆಂದು ಅದೇ ಪ್ರಜೆಗಳಿಗೆ ಬಹಳ ಇಷ್ಟವಾಗುತ್ತದೆಂದು ತಿಳಿದು ಅದರೊಳಗೆ ಇನ್ನು ಸ್ವಲ್ಪಜನರನ್ನು ಪ್ರವೇಶ ಮಾಡಬೇಕೆಂದು ಪ್ರಯತ್ನಿಸುತ್ತಿರುತ್ತಾರೆ. ಉದಾಹರಣೆಗೆ ಒಂದು ವಿಷಯವನ್ನು ತಿಳಿದುಕೊಳ್ಳೋಣ.

ಪೂರ್ವದಲ್ಲಿ ಹಿರಿಯರು ದೈವಮಾರ್ಗದಲ್ಲಿ ಏರ್ಪಡಿಸಿದ ಪದ್ಧತಿಗಳನ್ನು ಪೂರ್ತಿಯಾಗಿ ಬಿಟ್ಟು, ತಮಗೆ ಇಷ್ಟಬಂದ ಒಂದು ದೇವತೆಯನ್ನೊ ಇಲ್ಲವೆ ದೇವರನ್ನೋ ಕಲ್ಪಿಸಿಕೊಂಡು, ತಾವು ಆರಾಧಿಸುತ್ತಾ ವಕ್ರಮಾರ್ಗದಲ್ಲಿ ಬಹಳ ಜನರು ಪ್ರಯಾಣಿಸುತ್ತಿದ್ದಾರೆ. ಅಂತಹವರು ಇನ್ನು ಏನನ್ನುತ್ತಿದ್ದಾರೆಂದರೆ! ನಾವು ಲಾಭ ಪಡೆಯುವುದಕ್ಕೆ ಈ ದೇವತೆ ಇದೆಯೆಂದು, ನಾವು ಲಾಭ ಪಡೆಯಬೇಕೆಂದರೆ ಅದಕ್ಕೆ ಒಂದು ಕ್ರಮ ಇದೆಯೆಂದು, ಈ ದೇವತೆಗೆ ಈ ಪೂಜೆ ಮಾಡಿದರೆ ಇಷ್ಟು ಲಾಭ ಬರುತ್ತದೆಂದು. ಮಾಡದವರಿಗೆ ನಷ್ಟ ಬರುತ್ತದೆಂದು ಲಾಭ ನಷ್ಟಗಳ ಲಿಸ್ಟು ಬರೆದು, ಆ ಬರಹವೆಲ್ಲವನ್ನು ಕೆಲವು ನೂರಾರು ಕಾಗದಗಳ ಮೇಲೆ ಅಚ್ಚುಹಾಕಿಸಿ ಹಂಚುವುದು ನಡೆಯುತ್ತಿದೆ. ಅದು ಅಲ್ಲಿಗೆ ನಿಲ್ಲದೆ ಆ ಕಾಗದವನ್ನು ನೋಡಿದವರು ಅಂತಹ ನಮೂನಾ ಕಾಗದಗಳನ್ನೇ ಅವರು ತಯಾರು ಮಾಡಿ ಇತರರಿಗೆ ಹಂಚಬೇಕೆಂದು, ಹಾಗೆ ಹಂಚದವರಿಗೆ ಕಷ್ಟಗಳು ನಷ್ಟಗಳು ಬರುತ್ತವೆಂದು, ಹಂಚಿದವರಿಗೆ ಸುಖ ಲಾಭ ಬರುತ್ತದೆಂದು. ಈ ವಿಧವಾಗಿ ಮಾಡಿದವರಿಗೆ ಇಷ್ಟು ಹಣ ಬಂದಿದೆ, ನಿರ್ಲಕ್ಷ್ಯದಿಂದ ಬಿಟ್ಟವರಿಗೆ ಬಹಳ ಕಷ್ಟಗಳು ನಷ್ಟಗಳು ಬಂದಿವೆ ಎಂದು ಸಹ ಅದರಲ್ಲಿ ಬರೆದಿರುವುದರಿಂದ ಆ ಕಾಗದವನ್ನು ಓದಿದ ಪ್ರತಿಯೊಬ್ಬರು ಅದೇ ವಿಧವಾಗಿ ಅಚ್ಚುಹಾಕಿಸಿ ಹಂಚುತ್ತಿದ್ದಾರೆ. ಓದಿದವರು ಲಾಭಗಳು ಬರುತ್ತವೆಂಬ ಆಸೆಯಿಂದಾದರೂ ಇಲ್ಲವೇ ಹಂಚದೆ ಹೋದರೆ ನಷ್ಟಬರುತ್ತದೆಂಬ ಭಯದಿಂದಾದರೂ ಅವರು ಹಾಗೆಯೇ ಮಾಡುತ್ತಿದ್ದಾರೆ.

ಏನೂ ತಿಳಿಯದ ಪ್ರಜೆಗಳೊಳಗೆ ಅಷ್ಟೊ ಇಷ್ಟೊ ತಿಳಿದವರು ಹೀಗೆ ಮಾಡಿ ಒಂದು ರೋಗವನ್ನು ಪ್ರವೇಶ ಇಟ್ಟಂತೆ ಮಾಡಿದರೆ, ಆ ರೋಗ ಕಲರಾ ಕ್ರಿಮಿಯಂತೆ ವ್ಯಾಪಿಸಿ ಹೋಗುತ್ತಿದೆ. ಈ ವಿಧವಾಗಿ ಬಹಳ ಪ್ರಚಾರದಲ್ಲಿರುವ ವಿಷಯಗಳೇ ಈಗಿನ ಮಾನವನಿಗೆ ಅಂಟಿಕೊಂಡಿವೆ. ಯಾರಾದರೂ ಇದು ವಕ್ರಮಾರ್ಗ, ಸರಿಯಾದ ಮಾರ್ಗ ಇದು ಅಲ್ಲವೆಂದು ಹೇಳಿದರೂ ಮಾನವನು ಕೇಳುವ ಸ್ಥಿತಿಯಲ್ಲಿ ಇಲ್ಲ. ದೇವರು ಅಣುವಣು ವಿನಲ್ಲಿಯೂ ವ್ಯಾಪಿಸಿರುವವನು. ದೇವರು ನಮ್ಮಲ್ಲಿಯೂ ಸಹ ವ್ಯಾಪಿಸಿದ್ದಾನೆ. ಆ ದೇವರು ಕರ್ಮವೆಂಬ ಮೂಲ ಸೂತ್ರದಿಂದಲೇ ಪ್ರಪಂಚವೆಲ್ಲಾ ನಡೆಸುತ್ತಿದ್ದಾನೆ. ನಾವು ಮಾಡಿಕೊಂಡ ಪಾಪಪುಣ್ಯಗಳೇ ಕರ್ಮವಾಗುತ್ತಿದೆ. ಆ ಕರ್ಮವೇ ಪ್ರತಿ ಜೀವಿಯನ್ನು ಕ್ರಮ ತಪ್ಪದೆ ನಡೆಸುತ್ತಿದೆ. ಕರ್ಮದಿಂದಲೇ ಜೀವನದಲ್ಲಿ ಸುಖದುಃಖಗಳು ಉಂಟಾಗುತ್ತಿವೆ. ಲಾಭನಷ್ಟಗಳು, ಸುಖದುಃಖಗಳು ಕರ್ಮ ವನ್ನನುಸರಿಸಿ ಇರುತ್ತದೆಂದು ಶಾಸ್ತ್ರ ತಿಳಿಸುತ್ತಿರುವಾಗ ಅಜ್ಞಾನ ಮಾನವನು ಈ ಕೆಲಸ ಮಾಡಿದರೆ ಲಾಭಬರುತ್ತದೆ, ಈ ಕೆಲಸ ಮಾಡದೆ ಹೋದರೆ ನಷ್ಟಬರುತ್ತದೆಂದು, ಆಸೆಯನ್ನೊ ಭಯವನ್ನೊ ಕಲ್ಪಿಸುತ್ತಿದ್ದಾನೆ. ನಮ್ಮ ಕರ್ಮ ರಿಕಾರ್ಡಿನಲ್ಲಿ ಕಷ್ಟಬರುವುದು ಇರುವಾಗಲೇ ಕಷ್ಟ ಬರುತ್ತದೆಂದು, ಹಾಗೆ ಲಾಭಬರುವಂತಿರುವಾಗಲೇ ಲಾಭಬರುತ್ತದೆಂದು, ಹಾಗಲ್ಲದೆ ಭೂಮಿ ಮೇಲೆ ಯಾವ ದೇವತೆಗಳು ಲಾಭನಷ್ಟಗಳು ಉಂಟುಮಾಡಲಾರರೆಂದು ಬಹಳ ಜನರಿಗೆ ತಿಳಿದಿಲ್ಲ. ನಾವು ಇಷ್ಟಾಗಿ ಹೇಳುತ್ತಿದ್ದರೂ, ನಾವು ಹೇಳುವುದಲ್ಲದೆ ಯೋಗಶಾಸ್ತ್ರ ಮತ್ತು ಪೂರ್ವದ ಮಹರ್ಷಿಗಳು ಹೇಳಿದರೂ ಅಸಲು ಮಾರ್ಗವನ್ನು ಗುರುತಿಸಲಾರದೆ ವಕ್ರಮಾರ್ಗವನ್ನೇ ಅನುಸರಿಸುತ್ತಾ ನಮ್ಮನ್ನು ಅಣಕಿಸುವವರು ಸಹ ಇದ್ದಾರೆ.

ಯಾರು ಏನು ಹೇಳಿದರು ಕರ್ಮವನ್ನು ವಿನಹ ಯಾವ ದೇವತೆಯಾ ಗಲಿ, ಯಾವ ದೇವರಾಗಲಿ, ಲಾಭವನ್ನಾಗಲಿ ನಷ್ಟವನ್ನಾಗಲಿ ಕಲ್ಪಿಸಲಾರರು. ಇಂತಹ ಸಮಯಕ್ಕೆ ಮರಣಿಸಬೇಕೆಂದು ಕರ್ಮ ಇರುವವನು ಎಷ್ಟು ದೇವತೆಗಳಿಗೆ

ಪ್ರಾರ್ಥಿಸಿದರು ಬದುಕುವುದಿಲ್ಲ. ಮರಣ ಇಲ್ಲದವನು ಮುಗಿದರು ಮುಗಿಯದಿದ್ದರು ಬದುಕುತ್ತಾನೆ. ಈಗಿನ ಕಾಲದಲ್ಲಿ ಎಷ್ಟೋ ಪವಿತ್ರವಾದ ದೇವಾಲಯಗಳೆಂದು ಹೆಸರುವಾಸಿಯಾದ ದೇವಾಲಯ ಸಮೀಪದಲ್ಲಿಯೇ ದೇವರದರ್ಶನಕ್ಕೆ ಹೋದವರು (ಅಪಘಾತಗಳಿಗೆ) ಗುರಿಯಾಗುತ್ತಿದ್ದಾರೆ. ಅವರನ್ನು ಅಲ್ಲಿನ ದೇವರು ಏಕೆ ಕಾಪಾಡಲಾರದೆ ಹೋಗಿದ್ದಾನೆ? ಆಲಯದಲ್ಲಿ ಮುಡುಪುಗಳನ್ನು ಸಮರ್ಪಿಸಿ ಎರಡನೇ ವರ್ಷವೂ ಸಹ ದೇವಾಲಯಕ್ಕೆ ಬರುತ್ತೇನೆಂದು ಮುಗಿದುಹೋದವರು ಮತ್ತೆ ಮನೆ ಸೇರುವ ಮೊದಲೆ ಅಪಘಾತಗಳ ಕಾರಣದಿಂದ ಮೃತ್ಯುಬಾಯಲ್ಲಿ ಬೀಳುವುದು ನಡೆಯುತ್ತಿದೆ. ಆಗ ಏಕೆ ಆ ದೇವರು ಅವರನ್ನು ಆ ಆಪತ್ತುಗಳಿಂದ ಕಾಪಾಡಲಾರದೆ ಹೋಗಿದ್ದಾನೆ? ಅದು ಕರ್ಮಪ್ರಕಾರ ನಡೆಯುತ್ತದೆ ಆದ್ದರಿಂದ ಹಾಗೆ ನಡೆದೆನಡೆಯುತ್ತದೆ. ಕರ್ಮರಾಹಿತ್ಯ ಮಾಡಲಾರದ ಮಾರ್ಗದಲ್ಲಿ ದೇವರನ್ನು ಆರಾಧಿಸಿದರೆ ಏನು ಪ್ರಯೋಜನೆ ಇಲ್ಲ. ದೈವಜ್ಞಾನವನ್ನು ತಿಳಿದ ಪ್ರವಕ್ತರು ಹೇಳಿದ ಪದ್ಧತಿ ಪ್ರಕಾರ, ಭಗವದ್ಗೀತೆ ಹೇಳಿದ ಪ್ರಕಾರ ದೈವಾರಾಧನೆಗಳು ಮಾಡಿದರೆ ಅವು ಸಕ್ರಮ ಮಾರ್ಗಗಳಾಗುತ್ತವೆ, ಇಲ್ಲದಿದ್ದರೆ ಅವು ವಕ್ರಮಾರ್ಗಗಳಾಗುತ್ತವೆ. ಮೊದಲು ದೈವಮಾರ್ಗದಲ್ಲಿ ವಕ್ರಮಾರ್ಗ ಎಂದರೆ ಏನು, ಸಕ್ರಮ ಮಾರ್ಗವೆಂದರೆ ಏನೆಂದು ಯೋಚಿಸಿರಿ. ಮಾನವರು ಕಲ್ಪಿಸುವ ಆಸೆಗಳಿಗೆ ದೇವರು ಒಳಗಾಗುವವನು ಅಲ್ಲವೆಂದು ತಿಳಿಯಿರಿ. ಏನೋ ಬರುತ್ತದೆಂದು ಆಸೆಪಟ್ಟು ಪೂಜಿಸುವವನು ಲಾಭಬಂದ ದಿನ ದೇವರನ್ನು ಪೂಜಿಸುತ್ತಾನೆ, ನಷ್ಟಬಂದ ದಿನ ದೂಷಿಸುತ್ತಾನೆ. ಅಂತಹ ಪದ್ಧತಿ ಇಲ್ಲದಂತೆ ಎಲ್ಲದಕ್ಕೂ ಕಾರಣವಾದ ಕರ್ಮವನ್ನು ಕುರಿತು ತಿಳಿದುಕೊಂಡು, ಆ ಕರ್ಮವನ್ನು ಇಲ್ಲದಂತೆ ಮಾಡಿಕೊಂಡು ಅಸಲಾದ ದೇವರನ್ನು ಸೇರಿಕೊಳ್ಳಿ.

ಮನುಷ್ಯ ಚರ್ಮಾಸನವನ್ನು ಉಪಯೋಗಿಸಿ, ಯೋಗದಂಡವನ್ನು ಉಪಯೋಗಿಸಿ ಸರಿಯಾದ ಯೋಗದಲ್ಲಿ ನಿಂತಿರುವ ಸಮಯದಲ್ಲಿ ಯೋಗಶಕ್ತಿ ಮನುಷ್ಯನ ಶರೀರದಲ್ಲಿ ಪ್ರವೇಶಿಸುತ್ತದೆ ಎಂದು ತಿಳಿದುಕೊಂಡಿದ್ದೇವೆ. ಇಲ್ಲಿ ಕೆಲವರಿಗೆ ಯೋಗಶಕ್ತಿ ಎಂದರೆ ಏನು? ಅದು ಹೇಗಿರುತ್ತದೆ? ಅದರ ಪ್ರಯೋಜನೆ ಮಾನವನಿಗೆ (ಜೀವಿಗೆ) ಏನಿರುತ್ತದೆ? ಅನ್ನುವ ಸಂಶಯಗಳು ಬರಬಹುದು ಅದಕ್ಕೆ ನನ್ನ ಸಮಾಧಾನ ಕೇಳು.

ಯೋಗಶಕ್ತಿ ಎಂದರೆ ಅದಕ್ಕೆ ಎಷ್ಟೋ ಹೆಸರುಗಳು ಇವೆ. ಜ್ಞಾನಶಕ್ತಿ, ಪರಮಾತ್ಮಶಕ್ತಿ, ಆತ್ಮಶಕ್ತಿ, ಜ್ಞಾನಾಗ್ನಿ ಎಂದು ಯೋಗಶಕ್ತಿಯನ್ನೆ ಅನ್ನುತ್ತಾರೆ. ಎಷ್ಟು ಹೆಸರುಗಳಿದ್ದರೂ ಶಕ್ತಿಮಾತ್ರ ಒಂದೇ. ಅದು ಹೇಗಿರುತ್ತದೆ ಎಂದರೆ ಅದಕ್ಕೆ ಆಕಾರ ಇಲ್ಲ, ಬಣ್ಣವಿಲ್ಲ, ರುಚಿ ಇಲ್ಲ, ವಾಸನೆ ಇಲ್ಲ, ಆದ್ದರಿಂದ ಸ್ಥೂಲ ದೃಷ್ಟಿಗೆ ಅದು ಕಾಣಿಸುವುದಿಲ್ಲ. ಸೂಕ್ಷ್ಮದೃಷ್ಟಿಗೆ, ಜ್ಞಾನದೃಷ್ಟಿಗೆ ಮಾತ್ರವೆ ಕಾಣಿಸುತ್ತದೆ. ಆದ್ದರಿಂದ ಅದರ ಬಗ್ಗೆ ಹೇಳುವುದಕ್ಕೆ ಸಾಧ್ಯವಾಗುತ್ತದೆ. ಪ್ರಪಂಚದಲ್ಲಿ ಜೀವಿಗಳಿಗೆ ಅದರ ಪ್ರಯೋಜನೆ ಬಾಯಿಂದ ಹೇಳಲಾರದಷ್ಟು ಇದೆ. ಜ್ಞಾನ (ಯೋಗ) ಶಕ್ತಿ ಇಲ್ಲದ ಜೀವನ ನಿರರ್ಥಕ. ಪವಿತ್ರವಾದ ಮಾನವಜನ್ಮವನ್ನು ಹೊಂದಿ, ಆತ್ಮ ವಿಷಯಗಳಲ್ಲಿ ಮುಖ್ಯವಾದ ಜ್ಞಾನಶಕ್ತಿಯನ್ನು ತಿಳಿದುಕೊಳ್ಳದಿದ್ದಲ್ಲಿ ಮಾನವಜನ್ಮಕ್ಕೆ ಅರ್ಥವಿಲ್ಲದಂತೆಹೋಗುತ್ತದೆ. ಅಂತಹ ಯೋಗಶಕ್ತಿಯನ್ನು ಕುರಿತು ತಿಳಿದುಕೊಳ್ಳೋಣ.

ಯೋಗಶಕ್ತಿಗೆ ರೂಪವಿಲ್ಲ ಆದರೂ ನಿಮಗೆ ಅರ್ಥವಾಗುವುದಕ್ಕೆ ಒಂದು ರೂಪವಾಗಿ ಭಾವಿಸಿ ಹೇಳುತ್ತಿದ್ದೇವೆ. ಯೋಗಶಕ್ತಿ ಒಂದು ವಿಧವಾದ ಹೊಗೆ ರೂಪದಲ್ಲಿ ಇದೆ ಎಂದುಕೊಳ್ಳೋಣ. ಅದು ಭೂಮಿ ಮೊದಲುಗೊಂಡು ಆಕಾಶದವರೆಗೂ ವ್ಯಾಪಿಸಿದೆ. ಅಂದರೆ ಪ್ರಕೃತಿ ಸ್ವರೂಪಗಳಾದ ಪಂಚಭೂತಗಳಲ್ಲಿ ಎಲ್ಲದರಲ್ಲಿ ತುಂಬಿಕೊಂಡು ಇದೆ. ಒಬ್ಬ ಮನುಷ್ಯನೊಳಗೂ ಸಹ ಶಕ್ತಿ ಇದ್ದರೂ ಹೊರಗೂ ಸಹ ಮನುಷ್ಯನ ಸುತ್ತಾ ಇರುತ್ತದೆ. ಸಮುದ್ರದಲ್ಲಿ ಜೀವರಾಶಿಗಳು ಎಲ್ಲಿದ್ದರು ನೀರಿನಲ್ಲಿಯೇ ಇರುವಂತೆ ಸಕಲಜೀವರಾಶಿಗಳು ಯೋಗ (ಆತ್ಮ)

ಶಕ್ತಿಯಲ್ಲಿಯೇ ಇವೆ. ನಿನಗೂ ನನಗೂ ಮಧ್ಯದಲ್ಲಿ ಕಣ್ಣಿಗೆ ಕಾಣಿಸದಂತೆ ಇರುವುದು ಎಲ್ಲಾ ಯೋಗಶಕ್ತಿಯೇ. ಶಕ್ತಿಯಲ್ಲಿ ಇಲ್ಲದ ಜೀವರಾಶಿಯಂತೂ ಪ್ರಪಂಚದಲ್ಲಿ ಇಲ್ಲ. ಅಣುಅಣುನಲ್ಲಿ ಅದೇ ವ್ಯಾಪಿಸಿದೆ ಇದನ್ನೇ ಪರಮಾತ್ಮಶಕ್ತಿ, ಪರಮಾತ್ಮ ಎಂದೂ ಸಹ ಕರೆಯುತ್ತಿದ್ದಾರೆ. ಈ ಶಕ್ತಿಯಲ್ಲಿಯೇ ನವಗ್ರಹಗಳ ಸ್ಥೂಲದೇಹಗಳಾದ ಸೂರ್ಯಗೋಳ, ಚಂದ್ರಗೋಳ, ನಕ್ಷತ್ರಗೋಳಗಳು ಬಂಧಿಸಲ್ಪಟ್ಟು ಶೂನ್ಯದಲ್ಲಿ ತೇಲುತ್ತಿರುವಂತೆ ಅನಿಸುತ್ತಿವೆ. ಈ ಯೋಗಶಕ್ತಿಯನ್ನು (ಜ್ಞಾನಶಕ್ತಿಯನ್ನು) ಸಂಪೂರ್ಣವಾಗಿ ತಿಳಿದುಕೊಂಡ ಜೀವಿಗೆ ಮತ್ತೆ ಜನ್ಮ ಇರುವುದಿಲ್ಲ.

ಯೋಗಶಕ್ತಿ ಯೋಗಿಯಲ್ಲಿ ಪ್ರವೇಶಿಸುತ್ತಿರುತ್ತದೆ ಅಂದಿದ್ದೇನಲ್ಲ! ಅದಕ್ಕೆ ಮೊದಲು ಮಾನವನಲ್ಲಿ ಶಕ್ತಿ ಸ್ವಲ್ಪವೂ ಇರುವುದಿಲ್ಲವಾ ಅನ್ನುವ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ, ಒಬ್ಬ ಮಾನವನಲ್ಲಿಯೇ ಅಲ್ಲದೆ ಸರ್ವಜೀವರಾಶಿಯಲ್ಲಿಯೂ ಶಕ್ತಿ ಸಮವಾಗಿರುತ್ತದೆ. ಆದರೆ ಯೋಗಿ ಯೋಗ ವಾಚರಿಸಿದಂತೆಲ್ಲ ಆತನಲ್ಲಿ ಹೊರಗಿರುವ ಶಕ್ತಿ ಸಹ ಪ್ರವೇಶಿಸಿ ಹೆಚ್ಚಾಗುತ್ತಿದೆ. ಆದ್ದರಿಂದಲೇ ಗೀತೆಯಲ್ಲಿ ಪರಮಾತ್ಮ **"ನನ್ನನ್ನು ಪೂಜಿಸುವ ಮನುಜರು ನಾಲ್ಕು ವಿಧಗಳಾಗಿ ಇದ್ದಾರೆ. ಅದರಲ್ಲಿ ಜ್ಞಾನಿ ಶ್ರೇಷ್ಠನು, ಅವನಲ್ಲಿ ನಾನು ನನ್ನಲ್ಲಿ ಅವನಿರುತ್ತಾನೆ"** ಎಂದು ಹೇಳಿದ್ದಾನೆ. ಶಕ್ತಿ ಯೋಗಿ ಶರೀರದಲ್ಲಿ ಪ್ರವೇಶಿಸಿ ಸಪ್ತಸ್ಥಾನದಲ್ಲಿ ನಿಲ್ಲುತ್ತದೆ. ಹೀಗೆ ಪ್ರವೇಶಿಸುವ ಶಕ್ತಿ ಒಂದು ನಿರ್ದಿಷ್ಟವಾದ ಸಂಪೂರ್ಣ ಸ್ಥಿತಿಯನ್ನು ಸೇರುತ್ತಲೇ ಆ ಯೋಗಿಗೆ ಮೋಕ್ಷ ಪ್ರಾಪ್ತಿಸುತ್ತದೆ. ಯೋಗವನ್ನು ಆಚರಿಸುವ ಯೋಗಿಗಳು ಎಲ್ಲರೂ ಸಮಾನವಲ್ಲ. ಏಕೆಂದರೆ ಯೋಗಶಕ್ತಿ ಒಬ್ಬರಲ್ಲಿ ಹೆಚ್ಚಾಗಿ ಒಬ್ಬರಲ್ಲಿ ಕಡಿಮೆ ಇರಬಹುದು. ಆದ್ದರಿಂದ ಆ ಶಕ್ತಿಯನ್ನನುಸರಿಸಿ ಯೋಗಿಗಳಲ್ಲಿ ಸಹಾ ಚಿಕ್ಕ ದೊಡ್ಡ ಭೇದಗಳು ಇವೆಯೆಂದು ಹೇಳಬಹುದು. ಯೋಗಶಕ್ತಿಯನ್ನು ಹೊಗೆ ರೂಪವಾಗಿ ಭಾವಿಸಿ ಕೊಂಡಿದ್ದೇವಲ್ಲವೆ! ಯೋಗಿ ಯೋಗ ಮಾಡುವ ಸಮಯದಲ್ಲಿ ಆತನ ಶರೀರಕ್ಕಿರುವ ಸೂಕ್ಷ್ಮರಂಧ್ರಗಳ ಮೂಲಕ ಯೋಗಶಕ್ತಿ ಆತನೊಳಗೆ ಪ್ರವೇಶಿ

ಸುತ್ತಿರುತ್ತದೆ. ಇಲ್ಲಿ ಹೊರಗಿರುವ ಶಕ್ತಿ ಒಳಗೆ ಪ್ರವೇಶಿಸಿ ಶರೀರದಲ್ಲಿ ಅದರ ಸಾಂಧ್ರತೆ ಬೆಳೆದರೂ, ಹೊರಗೆ ಖಾಲಿಬೀಳುತ್ತದಲ್ಲ ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನ, ಮನೆತುಂಬ ದಟ್ಟವಾಗಿ ತುಂಬಿಕೊಂಡಿರುವ ಹೊಗೆ ಸ್ವಲ್ಪ ಕಿಟಕಿಯಿಂದ ಹೊರಗೆ ಹೋದರು ಮನೆಯಲ್ಲಿ ಖಾಲಿ ಸ್ಥಳ ಏರ್ಪಡುವುದಿಲ್ಲ. ಆದರೆ ಹೊಗೆಯ ಸಾಂಧ್ರತೆ ಕಡಿಮೆಯಾಗುತ್ತದೆ. ಹಾಗೆಯೇ ಪರಮಾತ್ಮ ಶಕ್ತಿ ಅಪಾರವಾದುದು ಅದರಲ್ಲಿ ಅಣುಮಾತ್ರವು ಯೋಗಿಯಲ್ಲಿ ಪ್ರವೇಶಿಸಿದರು ಖಾಲಿ ಏರ್ಪಡುವುದಿಲ್ಲ. ಸಾಂಧ್ರತೆ ಸಹ ಕಡಿಮೆಯಾಗಿದೆ ಎಂದು ಹೇಳುವುದಕ್ಕೆ ಸಾಧ್ಯವಾಗದೆ ಇರುತ್ತದೆ. ಯೋಗಿ ಸಂಪೂರ್ಣ ಸ್ಥಿತಿ ಹೊಂದಿ ಮತ್ತೆ ಪ್ರಪಂಚವೆಲ್ಲಾ ತುಂಬಿರುವ ಶಕ್ತಿಯಲ್ಲಿಯೇ ಬೆರೆತು ಮೋಕ್ಷವನ್ನು ಹೊಂದಿ ಜನ್ಮ ಎತ್ತದೆ ಹೋಗುವುದರಿಂದ ಯೋಗಿಯಲ್ಲಿ ಸೇರಿದ ಶಕ್ತಿ ಮತ್ತೆ ಶೂನ್ಯವನ್ನೇ ಸೇರುತ್ತಿದೆ. ಆದ್ದರಿಂದ ಶಕ್ತಿ ಎಲ್ಲಿಯೂ ಖಾಲಿ ಏರ್ಪಡದೆ ಎಂದಿನಂತೆ ಎಲ್ಲವೇಳೆಯಲ್ಲಿ ಇರುತ್ತಿದೆ. ಇದರಿಂದ ಜೀವರೂಪವು ದೈವರೂಪ ವಾಗಿ ಬದಲಾಗುವುದಕ್ಕೆ ಶಕ್ತಿ ಆಧಾರವಾಗಿದೆ ಎಂದು ತಿಳಿಯುತ್ತಿದೆ. ಶಕ್ತಿಯೇ ದೈವವು, ದೈವವೇ ಶಕ್ತಿ. ಬಣ್ಣ, ರೂಪ, ರುಚಿ, ವಾಸನೆ ಇರುವ ಕರ್ಪೂರ ಶೂನ್ಯದಲ್ಲಿ ಬೆರೆಯುವುದಕ್ಕೆ ಅಗ್ನಿ ಅಗತ್ಯವಾದಂತೆ ಬಣ್ಣ, ಆಕಾರ, ಗುಣಗಳು ಹೊಂದಿದ ಜೀವಿಯು ಶೂನ್ಯದಲ್ಲಿ (ಪರಮಾತ್ಮನಲ್ಲಿ) ಸೇರುವುದಕ್ಕೆ ಶಕ್ತಿ ಅಗತ್ಯ. ಯೋಗಿಗಳು ಶಕ್ತಿ ಸಂಪಾದಿಸದೆ ಪರಮಾತ್ಮನಲ್ಲಿ ಸೇರಲಾರರು. ಆದ್ದರಿಂದ ಪ್ರತಿಯೋಗಿ ಕಷ್ಟಕ್ಕೆ ಸಹಿಸಿಕೊಂಡು ಸಾಧನೆ ಮಾಡಬೇಕು. ಹಾಗೆ ಇಲ್ಲದಿದ್ದರೆ ದೇವರಲ್ಲಿ ಸೇರುವುದಕ್ಕೆ ಸಾಧ್ಯವಾಗುವುದಿಲ್ಲ.

ಅನಂತಶಕ್ತಿಯಾದ ಪರಮಾತ್ಮನಿಂದ ಸಂಚಲನವಾಗಿ ಉದ್ಭವಿಸಿದ ಜೀವರಾಶಿಗಳು ಮತ್ತೆ ಆ ಶಕ್ತಿಯಲ್ಲಿಯೇ ಲೀನ ಆಗಬೇಕು. ಹಾಗೆ ಲೀನವಾಗುವು ದಕ್ಕೆ ಆ ಶಕ್ತಿಯನ್ನು ಕುರಿತು ತಿಳಿದುಕೊಳ್ಳಬೇಕು. ಶಕ್ತಿಯನ್ನು ತಿಳಿದುಕೊಂಡ ನಂತರ ತನ್ನ ನಿಜಸ್ಥಳಯಾವುದೆಂದು, ತನ್ನ ನಿಜವಾದ ಹೆಸರೇನಾಗಿರುವುದೆಂದು, ನಿಜಕ್ಕೆ ತಾನು ಯಾರು ಎನ್ನುವುದು ತಿಳಿದುಕೊಳ್ಳುತ್ತಾನೆ. ಶಕ್ತಿಯನ್ನು ತಿಳಿದುಕೊಳ್ಳ

ದವರೆಗೂ ತನ್ನ ನಿಜಸ್ಥಿತಿಯನ್ನು ತಿಳಿಯದೆ, ತನ್ನ ಹೆಸರು ಕೇಳಿದರು ಹುಟ್ಟಿದ ನಂತರ ಇಡಲಾದ ಹೆಸರನ್ನೇ ಹೇಳುತ್ತಿರುತ್ತೇವೆ. ಅದು ತನಗೆ ಪ್ರಪಂಚ ತಿಳುವಳಿಕೆ ಬಂದ ನಂತರ ಇತರರು ಹೆಸರಿನಿಂದ ಕರೆಯುತ್ತಿರುವಾಗ ಅದೇ ನನ್ನ ಹೆಸರು ಎಂದು ತಿಳಿದುಕೊಂಡು ಅದನ್ನು ಹೇಳುತ್ತಿದ್ದಾನೆ. ಆದರೆ ನಿಜಕ್ಕೆ ನಿನ್ನ ಹೆಸರು ಏನೆಂದರೆ ಹೇಳಲಾರನು. ನೀನ್ಯಾರೆಂದು ಪ್ರಶ್ನಿಸಿದರು ಇಂತಹವರ ಮಗನೆಂದು ಹೇಳುತ್ತಿದ್ದಾನೆ, ಅದು ಅವರಿಗೆ ಹುಟ್ಟಿದ್ದಾನೆ ಎಂದು ಎಲ್ಲರೂ ಅನ್ನುತ್ತಿದ್ದರೆ ತಾನು ಅನ್ನುತ್ತಿದ್ದಾನೆ. ಇತರರು ಮೊದಲು ಇವರೆ ನಿಮ್ಮ ತಾಯಿ ತಂದೆ ಎಂದು ಹೇಳಿದರೆ ಅವರನ್ನೇ ಜೀವನವೆಲ್ಲಾ ತಾಯಿ ತಂದೆಯರಾಗಿ ಹೇಳುತ್ತಿದ್ದಾನೆ, ಶಕ್ತಿಯನ್ನು ತಿಳಿದುಕೊಂಡ ನಂತರ ನಿಜವಾಗಲು ನಿನ್ನ ತಾಯಿ ತಂದೆ ಯಾರೆಂದು ಪ್ರಶ್ನಿಸಿದರೆ ಪ್ರಪಂಚದಲ್ಲಿ ಶರೀರ ಸಂಬಂಧವಾದ ತಂದೆತಾಯಿಯರ ಹೆಸರು ಹೇಳದೆ ಪರಮಾತ್ಮನೇ ತಂದೆ ಎಂದು ನಿಜವಾದ ಸಮಾಧಾನ ಹೇಳುತ್ತಾನೆ.

ಆತ್ಮ ಶಕ್ತಿಯನ್ನು ಸಂಪಾದಿಸಿಕೊಂಡವನನ್ನೇ ಹಿರಿಯರು ಯೋಗಿ ಎಂದು ಅನ್ನುತ್ತಿದ್ದಾರೆ. ಯೋಗಿ ಶರೀರದಲ್ಲಿ ಪ್ರವೇಶಿಸಿದ ಆತ್ಮಶಕ್ತಿ ಹಾಗೇ ಇರುತ್ತದಾ? ಅಂದರೆ ಇರುವುದಿಲ್ಲವೆಂದೇ ಹೇಳಬಹುದು. ಏಕೆ ಇರುವುದಿಲ್ಲ ಎಂದರೆ ಸಾಮಾನ್ಯ ಅಗ್ನಿಗೆ ಪ್ರಪಂಚದಲ್ಲಿ ಸರ್ವ ವಸ್ತುಗಳನ್ನು ಸುಡುವ ಗುಣ ಇದೆ. ಹಾಗೆ ಯೋಗಿಯಲ್ಲಿರುವ ಜ್ಞಾನಶಕ್ತಿಗೆ (ಯೋಗಶಕ್ತಿ) ಸರ್ವ ಕರ್ಮಗಳನ್ನು ಸುಡುವ ಗುಣವಿದೆ. ಆದ್ದರಿಂದ ಯೋಗಿಯೊಂದರ ಕರ್ಮಗಳನ್ನು ಸುಟ್ಟು ಬೂದಿ ಮಾಡುವುದಕ್ಕೆ ಶಕ್ತಿ ಖರ್ಚಾಗುತ್ತಿದೆ. ಯೋಗಿಶಕ್ತಿಯನ್ನು ಸಂಪಾದಿಸಿ ಕೊಂಡಂತೆಲ್ಲ ಆ ಶಕ್ತಿ ಸ್ವಲ್ಪ ಕರ್ಮವನ್ನು ಸುಡುವುದಕ್ಕೆ ಉಪಯೋಗಪಡುತ್ತಿದೆ, ಸ್ವಲ್ಪ ಉಳಿಯುತ್ತಿರುತ್ತದೆ. ಕರ್ಮಗಳು ಸಂಪೂರ್ಣವಾಗಿ ಸುಟ್ಟದಿನ ಜೀವಿಯ ಜೊತೆ ಕೂಡಲ್ಪಟ್ಟಿರುವ ಶಕ್ತಿ ಜೀವಿಯ ತಲೆಯಲ್ಲಿಯೇ ಲೀನ ಮಾಡಿಕೊಂಡು ಜನ್ಮ ಇಲ್ಲದಂತೆ ಮಾಡುತ್ತದೆ. ಜನ್ಮ ಬರಬೇಕೆಂದರೂ ಕರ್ಮ ಇರಬೇಕಲ್ಲ! ಮೋಕ್ಷ ಬರಬೇಕೆಂದರು ಜ್ಞಾನಶಕ್ತಿ ಇರಬೇಕಲ್ಲ! ಆದ್ದರಿಂದ ಕರ್ಮವಿಲ್ಲದೆ ಜನ್ಮವಿಲ್ಲ, ಜ್ಞಾನ ಇಲ್ಲದೆ ಮೋಕ್ಷ ಇಲ್ಲ.

ಜ್ಞಾನಶಕ್ತಿಗೆ ಕರ್ಮವನ್ನು ಸುಡುವ ಶಕ್ತಿ ಇದೆ. ಆದ್ದರಿಂದ ಗೀತೆಯಲ್ಲಿ ಪರಮಾತ್ಮ ಜ್ಞಾನಯೋಗದಲ್ಲಿ **"ಯಥೈದಾಂಸಿ ಸಮಿದ್ಧೋಗ್ನಿರ್ಭಸ್ಮ ಸಾತ್ಕುರು ತೇರ್ಜುನ, ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ತಥಾ"** "ಅಗ್ನಿಯಲ್ಲೆಷ್ಟು ಕಟ್ಟಿಗೆಗಳಾದರು ಭಸ್ಮವಾಗಿ ನಾಶವಾಗಿ ಹೋದಂತೆ ಜ್ಞಾನವೆಂಬ ಅಗ್ನಿಯಿಂದ ಸರ್ವಕರ್ಮಗಳು ಭಸ್ಮವಾಗುತ್ತಿರುತ್ತವೆ" ಎಂದು ಹೇಳಿದ್ದಾನೆ. ಇದರಿಂದ ಕರ್ಮ ಜ್ಞಾನಶಕ್ತಿಯಿಂದ ನಿಶ್ಶೇಷವಾಗಿ ಸುಟ್ಟುಹೋಗುವುದಕ್ಕೆ ಸಾಧ್ಯವಿದೆ ಎಂದು ತಿಳಿಯುತ್ತಿದೆ. ಮತ್ತು ಜ್ಞಾನಶಕ್ತಿಯಿಂದ ಯೋಗಿ ತನ್ನ ಕರ್ಮವನ್ನೇ ಅಲ್ಲದೆ ಇತರರ ಕರ್ಮವನ್ನೂ ಸಹ ಸುಡಬಹುದು. ಅಗ್ನಿ ಯಾವ ಕಟ್ಟಿಗೆಯನ್ನಾದರೂ ಸುಡುವಂತೆ ಜ್ಞಾನಾಗ್ನಿ ಯಾರ ಕರ್ಮವನ್ನಾದರೂ ಸುಡುತ್ತದೆ. ಅದು ಹೇಗೆಂದರೆ ಕೇಳಿರಿ.

ಶರೀರದಲ್ಲಿ ಪ್ರವೇಶಿಸಿದ ಯೋಗ ಶಕ್ತಿಯನ್ನು ಯೋಗಿ ಸಂಕಲ್ಪ ಪೂರ್ವಕವಾಗಿ ಇತರರಲ್ಲಿ ಪ್ರವೇಶಿಸುವಂತೆ ಮಾಡಬಹುದು. ಹಾಗೆ ಶಕ್ತಿಯನ್ನು ಯೋಗಿ ಶರೀರದಿಂದ ಹೊರಗೆ ಕಳುಹಿಸುವುದಕ್ಕೆ ನಾಲ್ಕು ಮಾರ್ಗಗಳು ಇವೆ. **ಒಂದು ಅಂಗೈಯಿ, ಎರಡು ಪಾದ, ಮೂರು ನೋಟ, ನಾಲ್ಕು ವಾಕ್ಕು** ಈ ನಾಲ್ಕು ಯೋಗಶಕ್ತಿಯನ್ನು ಹೊರಗೆ ಕಳುಹಿಸುವುದಕ್ಕೆ ಯೋಗಿ ಶರೀರದಲ್ಲಿ ದ್ವಾರಗಳಂತೆ ಇವೆ. ಶ್ರೀ ಪೋತುಲೂರಿ ವೀರಬ್ರಹ್ಮಯ್ಯರವರು ಅಚ್ಚಮ್ಮ ಕುಮಾರನ ಕಣ್ಣುಗಳ ಮೇಲೆ ಹಸ್ತ ಇಡುವುದರಿಂದ ಅಂಗೈ ಮೂಲಕ ಶಕ್ತಿ ಆ ಕರ್ಮ ಜೀವಿಯಲ್ಲಿ ಪ್ರವೇಶಿಸಿ ಅಂಧತ್ವಕ್ಕೆ ಕಾರಣವಾದ ಪಾಪವನ್ನು ಸುಟ್ಟು ಹಾಕಿದನು. ಆದ್ದರಿಂದ ಅಚ್ಚಮ್ಮ ಕುಮಾರನಿಗೆ ನೋಟ ಬಂದಿತು. ಹಾಗೆ ಏಸು ಪ್ರಭುವು ಕುರುಡನ ಕಣ್ಣುಗಳಿಗೆ ಮಣ್ಣು ಬಳಿದು ನೋಟ ತರಿಸಿದನು. ಅಂಗೈಯಿಂದ ತಾಕಿ ಕುಷ್ಟರೋಗಿಗಳನ್ನು ಸಹಿತವೂ ಗುಣಪಡಿಸಿದನು. ಮತ್ತು ಆತನ ಬಾಯಿಂದ ಹೇಳಿದಮಾತ್ರಕ್ಕೆ ದೆವ್ವಗಳು ಓಡಿಹೋದವು. ಶ್ರೀಕೃಷ್ಣನು ಕಣ್ಣಿನಿಂದ ನೋಡಿದಷ್ಟು ಮಾತ್ರಕ್ಕೆ ಸ್ವಲ್ಪಜನರ ಬಾಧೆಗಳು ನಿವಾರಣೆಯಾದವು. ಈ ವಿಧವಾಗಿ ಎಷ್ಟೋಜನ ಮಹಾನುಭಾವರಾದ ಯೋಗಿಗಳು ತಮ್ಮಲ್ಲಿರುವ ಯೋಗಶಕ್ತಿಯನ್ನು (ಜ್ಞಾನಶಕ್ತಿ)

ಇತರರಿಗೆ ನೋಟ, ಬಾಯಿ, ಅಂಗೈ, ಅಂಗಾಲಿನಮೂಲಕ ಸಂಕಲ್ಪದಿಂದ ಪ್ರಸಾರ ಮಾಡಿ ಅವರಲ್ಲಿರುವ ಕರ್ಮಗಳನ್ನು ಸುಟ್ಟಿದ್ದಾರೆ. ಆದ್ದರಿಂದ ಯೋಗಶಕ್ತಿ ಸಾಧ್ಯವಾದರೆ ಯಾರ ಕರ್ಮವನ್ನಾದರೂ ಸುಡುತ್ತದೆ ಎಂದು ತಿಳಿಯುತ್ತಿದೆ. ಜೀವಿಯ ಜನ್ಮಕ್ಕೆ ಕರ್ಮವೇ ಕಾರಣ. ಕರ್ಮವನ್ನು ಸುಡುವ ಬಲ ಒಂದು ಪರಮಾತ್ಮ ಶಕ್ತಿಗೆ ಇದೆ. ಪರಮಾತ್ಮನನ್ನು ನಂಬಿದವರಿಗೆ ಆ ಶಕ್ತಿ ಲಭಿಸುತ್ತದೆ. ಅದು ಲಭಿಸಿದ ಜನ್ಮಗಳು ಅಂತ್ಯವಾಗುತ್ತವೆ, ಜನ್ಮವಿಲ್ಲದ ಜೀವಾತ್ಮ ಅನಂತಶಕ್ತಿಯಾದ ಪರಮಾತ್ಮನಲ್ಲಿ ಲೀನವಾಗಿಹೋಗುತ್ತಾನೆ. ಆತ್ಮನಲ್ಲಿ ಲೀನವಾದ ಜೀವಾತ್ಮ ಜಗತ್ತಿನ ಪ್ರಳಯಗಳಿಗೆ ಪ್ರಭವಗಳಿಗೆ ಸಂಬಂಧವಿಲ್ಲದೆ ನಿತ್ಯಾನಂದದಲ್ಲಿ ತುಂಬಿ ಹೋಗುತ್ತದೆ. ಆದ್ದರಿಂದ ಶಾಶ್ವತ ಆನಂದ ಪದವಿ ಬೇಕೆಂದರೂ ನಿತ್ಯ ಯೋಗವಾಚರಿಸಿ ಯೋಗಶಕ್ತಿ ಸಂಪಾದಿಸಬೇಕೆಂದು ತಿಳಿಸುತ್ತಿದ್ದೇವೆ.

# ಯೋಗದಂಡದ ಅವಶ್ಯಕತೆ

ಸರ್ವಪ್ರಪಂಚಾತ್ಮಕ ಪರಬ್ರಹ್ಮ ಅಥವಾ ಪರಮಾತ್ಮ, ಅಥವಾ ದೇವರು ಸರ್ವಜೀವರಾಶಿಗಳ ಶರೀರಗಳಲ್ಲಿ ನಿವಾಸ ಮಾಡುತ್ತಿದ್ದಾನೆ. ಆದ್ದರಿಂದ ಜೀವರಾಶಿಗಳ ಶರೀರ ನಿರ್ಮಾಣದಲ್ಲಿನ ಪ್ರತ್ಯೇಕತೆ ಬಗ್ಗೆ ತಿಳಿದುಕೊಳ್ಳುವುದು ಬ್ರಹ್ಮವಿದ್ಯೆಯಲ್ಲಿ ಮುಖ್ಯವಾದ ವಿಷಯ. ಶರೀರಗಳು ಬೇರೆಯಾದರು ಅದರಲ್ಲಿರುವ ಪರಮಾತ್ಮನ ಅಂಶ ಒಂದೇ, ಜೀವಿಗಳು ಎಷ್ಟಾದರೂ ಅವುಗಳ ಜೊತೆ ಇರುವ ಆತ್ಮದಿಂದ ಚಲನೆಯಾಗುತ್ತಿರುವ ಜೀವರಾಶಿಗಳ ಶರೀರವನ್ನು ವಿಭಜನೆಮಾಡಿದಾಗ ಪ್ರತಿ ಶರೀರವು ಎರಡು ಭಾಗಗಳಾಗಿ ಕಾಣಿಸುತ್ತಿದೆ. ಅವುಗಳೇ ಬಲ ಎಡ ಭಾಗಗಳು. ಬಲಗಡೆ ಯಾವ ಅವಯವಗಳು ಇವೆಯೊ, ಅವುಗಳೇ ಎಡಗಡೆಯೂ ಸಹ ಇವೆ. ಇದು ಪ್ರತಿ ಜೀವರಾಶಿ ಶರೀರದಲ್ಲಿ ಗಮನಿಸಬಹುದು. ಇರುವೆ ಮೊದಲುಗೊಂಡು ಆನೆಯ ವರೆಗೂ ನಿರ್ಮಾಣ ಒಂದೇ ವಿಧವಾಗಿ ಇರುತ್ತದೆ.

ಮಾನವನ ಶರೀರವನ್ನು ಪರಿಶೀಲಿಸಿ ನೋಡಿದರೆ ಒಂದು ಭಾಗದಲ್ಲಿ ಏನು ಇವೆಯೋ ಎರಡನೆ ಭಾಗದಲ್ಲಿಯೂ ಸಹ ಅವುಗಳೇ ಇವೆ. ಒಂದು ಕಡೆ ಕಿವಿ ಇದೆ ಅದಕ್ಕೆ ಮತ್ತೊಂದು ಕಡೆ ಮತ್ತೊಂದು ಕಿವಿ ಇದೆ, ಬಲಗಡೆ ಕಣ್ಣು ಇದೆ, ಅದಕ್ಕೆ ಎಡಗಡೆ ಮತ್ತೊಂದು ಕಣ್ಣು ಇದೆ. ಬಲಗಡೆ ಮೂಗಿನ ರಂಧ್ರವಿದೆ. ಅದಕ್ಕೆ ಎಡಗಡೆ ಮತ್ತೊಂದು ಮೂಗಿನರಂಧ್ರ ಇದೆ. ಬಲಗಡೆ ಯೊಂದರ ಕಣ್ಣು, ಕಣ್ಣುಉಬ್ಬುಗಳು, ಕಿವಿಗಳು ಮೊದಲಾದ ಅವಯವಗಳೊಂದರ ಕೊನೆಗಳು, ಮೊದಲು ಯಾವ ದಿಕ್ಕಿಗೆ ಇದ್ದರು ಅದಕ್ಕೆ ವಿರುದ್ಧವಾಗಿ ಅವೇ ಅವಯವಗಳ ಕೊನೆಗಳು ಮೊದಲುಗಳು ಮತ್ತೊಂದು ದಿಕ್ಕಿಗೆ ಇರುತ್ತವೆ. ಮನುಷ್ಯನಿಗೆ ಬಾಯಲ್ಲಿ ದಂತಗಳ ಸಂಖ್ಯೆ 32 ಇರುವುದರಲ್ಲಿ 16 ಒಂದು ಕಡೆ, ಉಳಿದ 16 ಮತ್ತೊಂದು ಕಡೆ ಇರುತ್ತದೆ. ಹಾಗೆ ಎಲ್ಲಾ ಸಮಪಾಲುಗಳಾಗಿ ವಿಭಜಿಸಲ್ಪಟ್ಟಿರುತ್ತವೆ. ಮೇಲಿನ ದಂತಗಳ ಸಾಲಿನಲ್ಲಿ ಮುಂದೆ ಅಗಲವಾದ ದಂತಗಳು ಎರಡು ಇರುತ್ತವೆ. ಅವುಗಳಲ್ಲಿ ಒಂದು ಬಲಗಡೆ, ಒಂದು ಎಡಗಡೆ ಇರುತ್ತದೆ. ಅವುಗಳಿಂದ ನೋಡಿದರು ಬಲಗಡೆ ಮೂರನೆಯದು ಒಂದು ಕೋರೆಹಲ್ಲು ಇರುತ್ತದೆ. ಅದೇ ವಿಧವಾಗಿ ಎಡಗಡೆ ಸಹ ಮೂರನೆಯದು ಒಂದು ಕೋರೆಹಲ್ಲು ಇರುತ್ತದೆ. ಹಾಗೆ ಬಲಗಡೆ ಎಷ್ಟು ದವಡೆ ದಂತಗಳು ಇವೆಯೋ ಎಡಗಡೆಯೂ ಸಹ ಅಷ್ಟೇ ಇರುತ್ತವೆ. ಅದೇ ವಿಧವಾಗಿ ಬಲಗಡೆ ಒಂದು ಹಸ್ತ ಅದರ ವಿರುದ್ದ ದಿಕ್ಕಿನಲ್ಲಿ ಮತ್ತೊಂದು ಹಸ್ತ ಇರುತ್ತದೆ. ಹಾಗೆ ಶರೀರವೆಲ್ಲಾ ಎರಡು ಭಾಗಗಳಾಗಿ ಕಾಣಿಸುತ್ತದೆ. ಒಳಗಿರುವ ಅವಯವಗಳು ಸಹ ಎರಡಾಗಿ ವಿಭಜಿಸಲ್ಪಟ್ಟಿವೆ. ಶರೀರ ಎರಡು ಭಾಗಗಳಾಗಿದೆ ಅಲ್ಲವೆ! ಆ ಎರಡು ಭಾಗಗಳು ಸೇರಿದಂತೆ ಮೇಲಿಂದ ಕೆಳಗಿನವರೆಗೂ ಒಂದು ರೇಖೆ ಏರ್ಪಟ್ಟಿದೆ. ಆ ರೇಖೆ ಬಲ ಎಡ ಭಾಗಗಳನ್ನು ವಿಭಜಿಸುತ್ತಾ ಶರೀರದ ಮೇಲ್ಭಾಗದಲ್ಲಿ ಪ್ರತ್ಯಕ್ಷವಾಗಿ ಕಾಣಿಸುತ್ತದೆ. ಇದು ಶರೀರದ ಮೇಲೆ ಮೂಗಿನ ಕೆಳಗಿನ ಭಾಗದಲ್ಲಿ, ಮೇಲಿನ ತುಟಿಯ ಮೇಲೆ ಬಾಣದಕೊನೆಯಂತೆ ಕಾಣಿಸುತ್ತಿದೆ. ಸ್ವಲ್ಪಜನರಿಗೆ ಗಡ್ಡದ ಮೇಲೆ ಸಹ ಮಧ್ಯದಲ್ಲಿ ತಗ್ಗು ಕಾಣಿಸುತ್ತಾ ರೇಖೆ ಏರ್ಪಟ್ಟಂತೆ ಕಾಣಿಸುತ್ತಿದೆ. ಮತ್ತು ಕಂಠ ಮೊದಲುಗೊಂಡು ಲಿಂಗಸ್ಥಾನದ ವರೆಗೂ ಕೂದಲು

ಮಧ್ಯದಲ್ಲಿರುವ ರೇಖೆ ಹತ್ತಿರ ಕೂಡಿಕೊಂಡು ಒಂದು ಗೆರೆ ಏರ್ಪಡಿಸಿದಂತೆ ಇದೆ. ಮುಖ್ಯವಾಗಿ ಪುರುಷರಿಗೆ ಲಿಂಗದ ಕೆಳಗೆ ವೀರ್ಯ ಗ್ರಂಥಿಗಳ ಮಧ್ಯದಿಂದ ಗುದಸ್ಥಾನದ ರಂಧ್ರದವರೆಗೂ ಚಿಕ್ಕ ತಂತಿಯ ದಪ್ಪದಲ್ಲಿ ಪ್ರತ್ಯೇಕವಾಗಿ ರೇಖೆ ಕಾಣಿಸುತ್ತಿದೆ. ಈ ವಿಧವಾಗಿ ಶರೀರ ಎರಡು ಭಾಗಗಳಾಗಿ (ಬಲ ಎಡ) ಕಾಣಿಸುತ್ತಿದೆ.

ಪೂರ್ವಕಾಲದಿಂದ ಅರ್ಧನಾರೀಶ್ವರನು ಎಂಬ ಹೆಸರು ಬಳಕೆಯಲ್ಲಿ ಇದೆ. ಈ ವಾಕ್ಯವನ್ನು ವಿಶಧೀಕರಿಸಿದಾಗ ಅರ್ಧ ಶರೀರ ಹೆಣ್ಣು, ಅರ್ಧಶರೀರ ಗಂಡು ರೂಪ ಹೊಂದಿರುವುದರಿಂದ ಅರ್ಧನಾರೀಶ್ವರನು ಎಂದು ಕೆಲವರು ಅನ್ನುತ್ತಿದ್ದಾರೆ. ನಾರಿ ಅಂದರೆ ಪ್ರಕೃತಿ ಎಂದು, ಈಶ್ವರ ಎಂದರೆ ಪರಮಾತ್ಮ ಎಂದು ಅರ್ಧ ಪ್ರಕೃತಿ ಪರಮಾತ್ಮರು ಇಲ್ಲದ ಶರೀರ ಭೂಮಿಮೇಲೆ ಇಲ್ಲ. ಆದ್ದರಿಂದ ಪ್ರತಿ ಶರೀರಗಳು ಅರ್ಧನಾರೀಶ್ವರವೇ ಎಂದು ಪ್ರತಿಯೊಬ್ಬರು ತಿಳಿದುಕೊಳ್ಳಬೇಕು.

ಅರ್ಧನಾರೀಶ್ವರನು ಪ್ರಪಂಚವೆಲ್ಲವೂ ತುಂಬಿದ್ದಾನೆ, ಪ್ರತಿ ಜೀವರಾಶಿ ಶರೀರದಲ್ಲಿಯೂ ಕೂಡಿಕೊಂಡು ಇದ್ದಾನೆ. ಯಾವ ವಿಧವಾಗಿ ಇದ್ದಾನೆಂದರೆ! ಅರ್ಧ ಎಂದರೆ ಅರ್ಧ, ನಾರಿ ಎಂದರೆ ಅಬಲ ಅಥವಾ ಸ್ತ್ರೀ, ಈಶ್ವರ ಎಂದರೆ ಬಲ ಅಥವಾ ಪುರುಷನು. ಪ್ರತಿ ಶರೀರವನ್ನು ಪರಿಶೀಲಿಸಿದಾಗ ಸ್ತ್ರೀತತ್ತ್ವ ಪುರುಷತತ್ತ್ವ ಕಾಣಿಸುತ್ತಲೇ ಇದೆ. ಎಲ್ಲಿ ಪುರುಷತತ್ತ್ವ ಇದೆಯೋ, ಅಲ್ಲಿಯೇ ವಿರುದ್ಧವಾದ ಸ್ತ್ರೀತತ್ತ್ವ ಇದೆ. ಆದ್ದರಿಂದಲೇ ಶರೀರವು ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಒಂದು ಭಾಗದಲ್ಲಿ ಪುರುಷತತ್ತ್ವ ಇರುವಾಗ ಮತ್ತೊಂದು ಭಾಗದಲ್ಲಿ ಸ್ತ್ರೀತತ್ತ್ವವಿದೆ. ಆದ್ದರಿಂದಲೇ ಶರೀರ ಒಂದು ಕಡೆ ಬಲವಾಗಿರುವಾಗ, ಮತ್ತೊಂದು ಕಡೆ ಬಲದಲ್ಲಿ ವ್ಯತ್ಯಾಸ ಹೊಂದಿದೆ. ಶರೀರದಲ್ಲಿ ಒಂದು ಕಡೆ ಅವಯವಗಳು ಒಂದು ಸೈಜು ಇರುವಾಗ, ಮತ್ತೊಂದು ಕಡೆ ಅವಯವಗಳ ಸೈಜಿನಲ್ಲಿ ವ್ಯತ್ಯಾಸವಿದೆ. ಹಾಗೆ ನೋಟದಲ್ಲಿಯೂ, ಶ್ರವಣ ದಲ್ಲಿಯೂ, ಪ್ರತಿಯೊಂದರಲ್ಲಿಯೂ ವ್ಯತ್ಯಾಸ ಇದೆ. ಬಲಗೈಯಲ್ಲಿ ಕಲ್ಲು ಬೀಸಿದಂತೆ

ಎಡಗೈಯಲ್ಲಿ ಬೀಸಲಾರೆವು. ಒಂದು ಕೈಯಿಂದ ಎತ್ತಿದ ಭಾರವನ್ನು ಮತ್ತೊಂದು ಕೈಯಿಂದ ಎತ್ತಲಾರೆವು. ಈ ವಿಧವಾಗಿ ಪ್ರತಿ ಜೀವರಾಶಿ ಶರೀರ ಅರ್ಧನಾರೀಶ್ವರ ಆಕಾರದಿಂದ ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ಕಾಣಿಸುತ್ತಿರುವಾಗ ತಿಳಿಯದೆ ಬೇರೆಬೇರೆಯಾಗಿರುವ ಪಾರ್ವತಿಯನ್ನು ಶಿವನನ್ನು ಸೇರಿಸಿ ಪುರಾಣಗಳು ಸೃಷ್ಟಿಸಿ ಅರ್ಧನಾರೀಶ್ವರನು ಕೈಲಾಸದಲ್ಲಿದ್ದಾನೆ ಅಂದಿದ್ದಾರೆ ಕೆಲವರು. ಆ ಅರ್ಧನಾರೀಶ್ವರನು ಕಾಣಿಸುವುದಿಲ್ಲ, ಆದರೆ ನಾನು ಹೇಳುವ ಅರ್ಧನಾರೀಶ್ವರನು ಹೆಜ್ಜೆಹೆಜ್ಜೆಗೂ ಕಾಣಿಸುತ್ತಲೇ ಇರುತ್ತಾನೆ. ಯೋಚನೆ ಮಾಡಿದರೆ ನೀನೇ ಅರ್ಧನಾರೀಶ್ವರನ ಆಕಾರದಲ್ಲಿ ಇದ್ದೀಯಾ. ನೀನೆ ಅಲ್ಲದೆ ನಿನ್ನ ಸುತ್ತಾ ಇರುವ ಪ್ರತಿಜೀವಿ ಅರ್ಧನಾರೀಶ್ವರನ ಆಕಾರ ಹೊಂದಿದೆ. ಶರೀರ ಎರಡು ಭಾಗಗಳೆಂಬ ವಿಷಯ ಎಲ್ಲಾ ಜೀವರಾಶಿಗಳಿಗೂ ಇದೆ. ಈ ಬಲ ಎಡ ವಿಧಾನ ವೃಕ್ಷಗಳಲ್ಲಿ ಇಲ್ಲವೇ ಎಂದು ಅನುಮಾನಿಸ ಬೇಕಾಗಿರುವುದು ಇಲ್ಲ. ವೃಕ್ಷಗಳಲ್ಲಿ ಸಹ ಪ್ರತಿ ಎಲೆ ಎರಡು ಭಾಗಗಳಾಗಿ ವಿಭಜಿಸಲ್ಪಟ್ಟು ಕಾಣಿಸುತ್ತಿದೆ. ಚಿಕ್ಕ ಎಲೆಗಳಾದ ಹುಣಿಸೆ ಎಲೆ, ತುಂಬೆ ಎಲೆಗಳಲ್ಲಿಯೂ ಸಹ ಎರಡು ಭಾಗಗಳ ವಿಭಜನೆ ಕಾಣಿಸುತ್ತಿದೆ. ಅವುಗಳಲ್ಲಿ ಸಹ ಬಲ ಎಡ ವ್ಯತ್ಯಾಸಗಳು ಇವೆ.

ಇಲ್ಲಿ ಶರೀರವನ್ನು ಎರಡು ಭಾಗಗಳಾಗಿ ಏಕೆ ವಿಭಜನೆ ಮಾಡಬೇಕು? ಅರ್ಧ ಬಲವಾಗಿ ಅರ್ಧ ಅಬಲವಾಗಿ ಏಕೆ ನಿರ್ಣಯಿಸಬೇಕು? ಅನ್ನುವ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಜೀವಿಯು ಕರ್ಮದಿಂದ ಭೂಮಿಯಲ್ಲಿ ಜನ್ಮಿಸಿ ಮರಣಿಸುತ್ತಿದ್ದಾನೆ. ಕರ್ಮ ಎಂದರೆ ಪಾಪ ಮತ್ತು ಪುಣ್ಯ. ಜೀವಿಯು ಕರ್ಮ ಅನುಭವಿಸುವುದಕ್ಕೆ ಶರೀರವನ್ನು ಧರಿಸುತ್ತಿದ್ದಾನೆ. ಶರೀರವನ್ನು ಧರಿಸುವುದಕ್ಕೆ ಎರಡೇ ಕಾರಣಗಳು. ಒಂದು ಪಾಪ, ಎರಡನೆಯದು ಪುಣ್ಯ. ಆದ್ದರಿಂದ ಶರೀರವು ಸಹಾ ಎರಡಾಗಿ ವಿಭಜಿಸಲ್ಪಟ್ಟಿದೆ. ಶರೀರ ಇಲ್ಲದೆ ಕರ್ಮವಿಲ್ಲ, ಕರ್ಮ ಇಲ್ಲದೆ ಶರೀರ ಇಲ್ಲ. ಈ ಎರಡಕ್ಕೂ ಇರುವಷ್ಟು ಸನ್ನಿಹಿತ ಸಂಬಂಧ ಪ್ರಪಂಚದಲ್ಲಿ ಯಾವುದಕ್ಕೂ ಇಲ್ಲ. ಕರ್ಮ ಎರಡು ಭಾಗಗಳೇ ಆದ್ದರಿಂದ ಶರೀರವು ಸಹಾ ಎರಡು

ಭಾಗಗಳೆ. ಶರೀರ ಎರಡು ಭಾಗಗಳಾಗಿ ವಿಭಜಿಸಲ್ಪಡುವುದಕ್ಕೆ ಮತ್ತೊಂದು ಕಾರಣ ಸಹ ಇದೆ. ಅದು ಏನೆಂದರೆ!

ಕರ್ಮರೂಪವಾಗಿ ನಿಂತಿರುವ ಪ್ರಪಂಚವನ್ನು ಪಾಲಿಸುವುದಕ್ಕೆ ಪರಮಾತ್ಮ ಅಂಶ ಕೆಲವು ರೂಪಗಳ ಸಮೂಹವಾಗಿ ನಿಂತಿದೆ. ಆ ರೂಪಗಳು ಪ್ರತ್ಯೇಕವಾದ ಶಕ್ತಿಗಳು ಹೊಂದಿವೆ. ಪ್ರಪಂಚ ಕರ್ಮರೂಪವಾದ್ದರಿಂದ ಪಾಪಪುಣ್ಯಗಳ ರೂಪದಲ್ಲಿರುವ ಕರ್ಮವನ್ನು ಧರ್ಮ ತಪ್ಪದೆ ಜೀವರಾಶಿಗಳ ಮೇಲೆ ವಿಧಿಸುವುದಕ್ಕೆ ಆತ್ಮ ಅಂಶವೇ ಯಮಧರ್ಮರಾಜನಾಗಿ ರೂಪಗೊಂಡಿದೆ. ಆದ್ದರಿಂದಲೇ ಗೀತಾ ಶಾಸ್ತ್ರದಲ್ಲಿ **'ದಂಡನಾಧಿಕಾರಿಗಳಲ್ಲಿ ಯಮನು ನಾನು'** ಎಂದು ಹೇಳಿದ್ದಾನೆ. ಯಮ ಧರ್ಮರಾಜ ಕಾಲಚಕ್ರಕ್ಕೆ ಅಧಿನೇತನಾಗಿದ್ದಾನೆ. ಯಮನೇ ಕಾಲ, ಕಾಲವೇ ಯಮ. ಕಾಲದಲ್ಲಿ ಪಾಪಪುಣ್ಯಗಳು ಸೂಕ್ಷ್ಮಾತಿ ಸೂಕ್ಷ್ಮವಾಗಿ ಜೀವಿಗಳ ಮೇಲೆ ಪ್ರಸಾರಮಾಡುವುದಕ್ಕೆ ಕಾಲನ ಅಧೀನದಲ್ಲಿ ಪ್ರತ್ಯೇಕವಾದ ಶಕ್ತಿಗಳು ಏಳು ತಯಾರಾಗಿವೆ ಅವು ಯಾವುವೆಂದರೆ 1) ಸೂರ್ಯ 2) ಚಂದ್ರ 3) ಅಂಗಾರಕ 4) ಬುಧ 5) ಗುರು 6) ಶುಕ್ರ 7) ಶನಿ. ಇವರು ಸೃಷ್ಟ್ಯಾದಿಯಲ್ಲಿ ನಿರ್ಮಾ ಣವಾಗಿದ್ದಾರೆ. ಇವರು ಕರ್ಮಚಕ್ರಕ್ಕೆ ಅಧಿನೇತರು. ಗಮನಿಸಬೇಕಾದ ವಿಷಯ ಕಾಲನನ್ನು (ಯಮನನ್ನು) ಅನುಸರಿಸಿ ಕಾಲಚಕ್ರವು, ಆದಿತ್ಯಾದಿ ಸಪ್ತ ಗ್ರಹಗಳನ್ನು ಅನುಸರಿಸಿ ಕರ್ಮಚಕ್ರ ತಿರುಗುತ್ತಿದೆ. ಕಾಲಚಕ್ರ ಅಧೀನದಲ್ಲಿ ಕರ್ಮ ಇದೆ. ಕಾಲ ನಡೆದಂತೆಲ್ಲ ಕರ್ಮ ನಡೆಯುತ್ತಿರುತ್ತದೆ. ಕಾಲ, ಕರ್ಮ ದೇವರ ಅಧೀನದಲ್ಲಿರುತ್ತದೆ. ಇವುಗಳನ್ನು ಕುರಿತು ನಂತರ ತಿಳಿಸುತ್ತೇನೆ. ಈಗ ತಿಳಿಸುವುದು ಏನೆಂದರೆ!

ಸೂರ್ಯನು ಮೊದಲುಗೊಂಡು ಶನಿವರೆಗೂ ಒಟ್ಟು ಏಳು ಜನರಿದ್ದಾರೆ ಅಲ್ಲವೆ! ಈ ಏಳುಜನರಿಗು ಒಂದೊಂದು ದಿನ ಒಬ್ಬೊಬ್ಬರಿಗೆ ಪ್ರಪಂಚ ಪಾಲನೆಯಲ್ಲಿ ರಾಜಸಿಂಹಾಸನ ಅಧಿಷ್ಟಿಸುವ ಅಧಿಕಾರವಿದೆ. ಆದ್ದರಿಂದ ಮೊದಲ ದಿನ ಸೂರ್ಯನು ಪ್ರಪಂಚಸಿಂಹಾಸನವನ್ನು ಅಧಿಷ್ಟಿಸಿದನು. ಆದ್ದರಿಂದ ಆ ದಿನಕ್ಕೆ ಇಂಗ್ಲೀಷ್‌ನಲ್ಲಿ ಸನ್‌ಡೇ ಕನ್ನಡದಲ್ಲಿ ಆದಿವಾರ (ಭಾನುವಾರ) ಎಂದು

ಹೆಸರು ಇಡಲಾಗಿದೆ. ಎರಡನೇ ದಿನ ಚಂದ್ರನು ಪ್ರಪಂಚ ಸಿಂಹಾಸನ ಅಧಿಷ್ಟಿಸಿದನು. ಆದ್ದರಿಂದ ಆ ದಿನಕ್ಕೆ ಕನ್ನಡದಲ್ಲಿ ಸೋಮವಾರ ಎಂದು ಇಂಗ್ಲೀಷ್‌ನಲ್ಲಿ ಮೂನ್‌ಡೇ ಎಂದು ಹೆಸರು ಇಡಲಾಗಿ ಕೊನೆಗದು ಮನ್‌ಡೇ ಆಗಿದೆ. ಮೂರನೆದಿನ ಅಂಗಾರಕನು ಪ್ರಪಂಚ ಸಿಂಹಾಸನ ಅಧಿಷ್ಟಿಸಿದನು. ಆದ್ದರಿಂದ ಆ ದಿನಕ್ಕೆ ಮಂಗಳವಾರ ಎಂದು ಹೆಸರು ಬಂದಿದೆ. ಹಾಗೆ ಬುಧನು, ನಂತರ ಗುರು, ಆ ನಂತರ ಶುಕ್ರನು, ಆ ನಂತರ ಶನಿ ಕ್ರಮವಾಗಿ ಪ್ರಪಂಚ ಸಿಂಹಾಸನ ಅಧಿಷ್ಟಿಸಿರುವುದರಿಂದ ಆಯಾ ದಿನಗಳಿಗೆ ಅವರ ಹೆಸರುಗಳು ಇಡಲಾಗಿದೆ. ಸೃಷ್ಟ್ಯಾದಿ ಮೊದಲನೆಯದಾದ ಆದಿವಾರದಿಂದಲೇ ಪ್ರಾರಂಭವಾಗಿದೆ. ಅಂದಿನಿಂದ ಆ ಏಳುಗ್ರಹಗಳು ಕ್ರಮ ತಪ್ಪದೆ ಪ್ರಪಂಚಪಾಲನೆ ಮಾಡುತ್ತಿದ್ದಾರೆ. ಇಂದಿಗೂ ಸಹ ಆ ಏಳು ದಿನಗಳನ್ನೇ ವಾರಗಳಾಗಿ ನಾವು ಲೆಕ್ಕಿಸಿಕೊಳ್ಳುತ್ತಿದ್ದೇವೆ. ಸಪ್ತಗ್ರಹಗಳು ಕರ್ಮವನ್ನನುಸರಿಸಿ ಎರಡು ಭಾಗಗಳಾಗಿ ಇರುವುದರಿಂದ, ಸಪ್ತಗ್ರಹಗಳು ಸಹ ಕೆಲವು ಪಾಪ ಪಾಲಿಸುವವಾಗಿ, ಕೆಲವು ಪುಣ್ಯವನ್ನು ಪಾಲಿಸುವವಾಗಿ ಸೀಳಿಹೋಗಿ ಗುರುವರ್ಗ, ಶನಿವರ್ಗಗಳಾಗಿವೆ. ಎರಡುವರ್ಗಗಳಲ್ಲಿ ನಾಯಕರು ಗುರು, ಶನಿಗಳೆ. ಆದ್ದರಿಂದ ಗುರುಪಾರ್ಟಿ ಶನಿಪಾರ್ಟಿ ಎಂದು ಅವರ ಹೆಸರುಗಳೇ ಆ ವರ್ಗಗಳಿಗೆ ಹೇಳಲಾಗಿದೆ. ಎರಡು ವರ್ಗಗಳಿಗೂ ಕ್ರಮಶಿಕ್ಷಣಾ ವೀಕ್ಷಕರು ರಾಹು, ಕೇತು ಗ್ರಹಗಳು.

ಪ್ರತಿ ಕೆಲಸ ಸಕ್ರಮವಾಗಿ ನಡೆಯಬೇಕೆಂದರೆ ಆ ಕೆಲಸಕ್ಕೆ ಆ ಕೆಲಸ ಮಾಡುವವನಿಗೆ ಒಬ್ಬ ಪರ್ಯವೇಕ್ಷಕನು ಬೇಕು. ಪಾಪಪುಣ್ಯ ಪಾಲಕರಾದ ಎರಡು ವರ್ಗದವರಿಗೆ ಪರ್ಯವೇಕ್ಷಕ ಅಧಿಕಾರಿಗಳು ರಾಹು ಕೇತುಗಳು. ಮೊದಲು ಇಲ್ಲದ ರಾಹು ಕೇತುಗಳು ನಂತರ ಗ್ರಹಗಳ ಗುಂಪುಗಳಲ್ಲಿ ಸೇರಿ ಅವರಿಗೆ ವಿರುದ್ಧ ದಿಕ್ಕಿನಲ್ಲಿ ತಿರುಗುತ್ತಾ ಎಲ್ಲರನ್ನು ಬೇಟಿಯಾಗುತ್ತಿದ್ದಾರೆ. ತನಿಖೆ ಅಧಿಕಾರಿಗಳಂತೆ ಬಂದು ಸೇರಿ ಅವರೂ ಸಹ ಕೆಲಸ ಮಾಡುತ್ತಾ ಸಪ್ತಗ್ರಹಗಳಿಗೆ ಎದುರಾಗಿ ಬರುತ್ತಿದ್ದಾರೆ. ರಾಹುಕೇತು ಸಮಾನದೂರದಲ್ಲಿ ಇದ್ದು, ಸಮಾನವೇಗ ಹೊಂದಿದ್ದು ಆಗಾಗ ಏಳು ಗ್ರಹಗಳನ್ನು ಸೇರುತ್ತಾ ತಾವು ಮಾತ್ರ ಎಂದಿಗೂ

ತಿಳಿಯದಂತಿದ್ದಾರೆ. ಎಲ್ಲಾ ವಿಷಯಗಳಲ್ಲಿಯೂ ಇವರಿಗೆ ಪ್ರತ್ಯೇಕತೆ ಇದೆ. ಆದ್ದರಿಂದ ಇವರಿಗೂ ಸಹ ಪ್ರತಿದಿನ ಅಧಿಕಾರವಿದೆ. ಪ್ರತಿ ದಿನ ರಾಹುಕಾಲ ಎಂಬ ಹೆಸರಿನಿಂದ 1.1/2 ಗಂಟೆ ಕಾಲ ನಿರ್ಣಯಿಸಲಾಗಿದೆ. ಏಳು ದಿನಗಳಿಗೆ ರಾಹುಕಾಲ 1.1/2 ಗಂಟೆ ಪ್ರಕಾರ 10.1/2 ಗಂಟೆಗಳಾಗುತ್ತಿದೆ. ಹಾಗೆಯೇ ಏಳು ಗ್ರಹಗಳಿಗೂ ಪ್ರತಿದಿನ ಸಪ್ತ ಗ್ರಹಗಳಲ್ಲಿ ಒಬ್ಬೊಬ್ಬರಿಗೆ 10.1/2 ಗಂಟೆ ವಾರಕ್ಕೆ ಬರುತ್ತಿರುವಾಗ, ರಾಹು ಕೇತುಗಳಿಗೆ ಸೇರಿಸಿ ವಾರಕ್ಕೆ 10.1/2 ಗಂಟೆ ಬರುತ್ತಿದೆ. ಸಪ್ತ ಗ್ರಹಗಳು ಖಗೋಳದಲ್ಲಿ ಬಲದಿಂದ ಎಡಕ್ಕೆ ತಿರುಗುತ್ತಿರುವಾಗ ರಾಹುಕೇತುಗಳು ಮಾತ್ರ ಎಡಗಡೆಯಿಂದ ಬಲಗಡೆಗೆ ತಿರುಗುತ್ತಿದ್ದಾರೆ.

ಮುಖ್ಯವಾಗಿ ಸಪ್ತಗ್ರಹಗಳ ಸ್ಥಿತಿಗಳು ಹೇಗಿವೆ ಎಂದರೆ! ಗ್ರಹಗಳು ಒಟ್ಟು ಏಳು ಇರುವಾಗ, ಅಂದರೆ ಸೃಷ್ಟಿ ಪ್ರಾರಂಭದಲ್ಲಿ ಗ್ರಹಗಳು ಎರಡು ಭಾಗಗಳಾಗಿ ವಿಭಜಿಸಲಾಗಿದೆ ಅಲ್ಲವೆ! ಏಕೆಂದರೆ ಗ್ರಹಗಳನ್ನು ಪ್ರಪಂಚದಲ್ಲಿ ಪಾಪಪುಣ್ಯಗಳನ್ನು ಪಾಲಿಸುವುದಕ್ಕಲ್ಲವೆ! ನಿರ್ಮಿಸಿರುವುದು. ಆದ ಕಾರಣ ಪಾಪವನ್ನು ಪಾಲಿಸುವವರು ಕೆಲವರು, ಪುಣ್ಯವನ್ನು ಪಾಲಿಸುವವರು ಕೆಲವರಾಗಿ ರೂಪಗೊಂಡಿದ್ದಾರೆ. 1) ಸೂರ್ಯ 2) ಚಂದ್ರ 3) ಅಂಗಾರಕ 4) ಗುರು ಒಂದು ಸಮೂಹವಾಗಿ, 1) ಬುಧು 2) ಶುಕ್ರ 3) ಶನಿ ಒಂದು ಸಮೂಹವಾಗಿ ನಿಂತರು. ಈ ವಿಧವಾಗಿ ಸಪ್ತಗ್ರಹಗಳು ಎರಡು ಭಾಗಗಳಾದವು. ಎರಡು ಗುಂಪುಗಳಾಗಿ (ಪಾರ್ಟಿಗಳಾಗಿ) ತಯಾರಾದ ಇವರು ಒಂದು ಪಕ್ಷಕ್ಕೂ ಮತ್ತೊಂದು ಪಕ್ಷದವರು ಬದ್ಧವಿರೋಧಿಗಳಾಗಿ ನಿಂತರು. ಪಾಪ ಪುಣ್ಯಕ್ಕೆ ಎಷ್ಟು ದೂರವೋ ಹಾಗೆ ಇವರ ಅನ್ಯೋನ್ಯತೆ ಅಷ್ಟೇ ದೂರ. ಅಂದರೆ ಪಾರ್ಟಿಯನ್ನನುಸರಿಸಿ ಪರಮಶತ್ರುಗಳು ಇವರು ಪ್ರಪಂಚದಲ್ಲಿನ ಜೀವರಾಶಿಗಳ ಮೇಲೆ ತಾನೇ ಅಧಿಕಾರ ಚಲಾಯಿಸಬೇಕಾಗಿರುವುದು. ಆದ್ದರಿಂದ ಜೀವಿಗಳ ಶರೀರಗಳು ಸಹ ಇವರಿಗೋಸ್ಕರವಾಗಿ ಎರಡು ಭಾಗಗಳಾಗಿ ತಯಾರಾಗಿವೆ. ಅವುಗಳೇ ಬಲ, ಎಡ. ಮುಖ್ಯವಾಗಿ ಗಮನಿಸಿರಿ ನಮ್ಮಲ್ಲಿರುವ ಶ್ವಾಸವು ಸಹ ಸ್ವಲ್ಪಹೊತ್ತು ಎಡಗಡೆ, ಸ್ವಲ್ಪಹೊತ್ತು ಬಲಗಡೆ ಮೂಗಿನರಂಧ್ರಗಳಲ್ಲಿ ಆಡುತ್ತಿರುತ್ತದೆ.

ಹಾಗೆ ಆಡುವುದಕ್ಕೆ ಕಾರಣ ಸಪ್ತಗ್ರಹಗಳು ಎರಡು ಭಾಗಗಳಾದ್ದರಿಂದಲೇ ಎಂದು ಗುರುತಿಸಿಕೊಳ್ಳಬೇಕು.

ಎರಡು ವರ್ಗಗಳಲ್ಲಿ ಕೊನೆಯದಾಗಿರುವ ಗುರುವೂ ಶನಿ ಇಬ್ಬರೆ ತಮ್ಮತಮ್ಮ ಪಾರ್ಟಿಗಳಲ್ಲಿ ಮುಖ್ಯವಾದವರು. ಆದ್ದರಿಂದ ಗುರುಪಾರ್ಟಿ, ಶನಿಪಾರ್ಟಿ ಎಂದು ಹೇಳಲಾಗುತ್ತಿದೆ. ಗುರುಪಾರ್ಟಿಯಲ್ಲಿ ಸೂರ್ಯ,ಚಂದ್ರ, ಕುಜರು ಮೂವರು, ಶನಿಪಾರ್ಟಿಯಲ್ಲಿ ಬುಧ, ಶುಕ್ರ ಇಬ್ಬರು ಇರುವುದರಿಂದ ಗುರು ಪಾರ್ಟಿಯಲ್ಲಿ ಒಬ್ಬರು ಹೆಚ್ಚಾಗಿದ್ದಾರೆ. ಆದ್ದರಿಂದ ಅಂತಹ ಆಧಿಕ್ಯತೆ ಇಲ್ಲದಂತೆ ಎರಡು ಪಾರ್ಟಿಗಳು ಸಮಾನವಾಗಿ ಇರುವುದಕ್ಕೆ, ಪರಮಾತ್ಮ ಪ್ರೇರೇಪಿತನಾದ ಯಮನು (ಕಾಲನು) ಚಂದ್ರನ ನಿರ್ಣಿತ ಕಾಲದಲ್ಲಿ ಗುರು ಪಾರ್ಟಿಯಲ್ಲಿಯೂ, ಅದಕ್ಕೆ ಸಮಾನವಾದ ಕಾಲದಲ್ಲಿ ಶನಿಪಾರ್ಟಿಯಲ್ಲಿಯೂ, ಇರುವಂತೆ ನಿಯಮಿಸಿದನು. ಆದ್ದರಿಂದ ಚಂದ್ರನು ಕಾಲಾನುಗುಣವಾಗಿ ಸ್ವಲ್ಪ ಕಾಲ ಒಂದು ಪಕ್ಷ, ಮತ್ತೆ ಸ್ವಲ್ಪಕಾಲ ಮತ್ತೊಂದು ಪಕ್ಷದವರಲ್ಲಿ ಸೇರುತ್ತಿರುತ್ತದೆ. ಇದರಿಂದ ನಮ್ಮಲ್ಲಿ ಆಡುವ ಶ್ವಾಸವೂ ಸಹ ಸ್ವಲ್ಪಕಾಲ ಬಲ, ಸ್ವಲ್ಪಕಾಲ ಎಡವಾಗಿ ಪ್ರತಿದಿನ ಆಡುತ್ತಿದೆ. ಚಂದ್ರನು ಗುರುಪಕ್ಷದಲ್ಲಿರುವ ದಿನಗಳಲ್ಲಿ ಅಭಿವೃದ್ಧಿ ಆಗುತ್ತಾ, ಹುಣ್ಣಿಮೆಯಾಗಿ ಏರ್ಪಡುತ್ತಿದೆ. ವಿರುದ್ಧ ಪಕ್ಷವಾದ ಶನಿ ಪಕ್ಷದಲ್ಲಿ ಚಂದ್ರನು ದಿನದಿನ ಸಣ್ಣಗಾಗುತ್ತಾ ಹೋಗಿ, ಕೊನೆಗೆ ಅಮಾವಾಸ್ಯೆಯಾಗಿ ಏರ್ಪಡುತ್ತಿದೆ. ಇದು ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣಿಸುವುದು. ಇದು ಎಲ್ಲವೂ ಗಮನಿಸಿದ ಬಳಿಕ ಶರೀರ ನಿರ್ಮಾಣದಲ್ಲಿಯೇ ತಿಳಿಯುತ್ತಿದೆ. ಶರೀರ ಏಕೆ ಎರಡು ಭಾಗಗಳಾಗಿ ತಯಾರಾಗಿದೆ ಎಂದರೆ? ಪಾಪ ಪುಣ್ಯ ಎಂಬ ಎರಡಕ್ಕೂ ಶರೀರ ಅಗತ್ಯ, ಆದ್ದರಿಂದ ಶರೀರ ಎರಡು ಭಾಗಗಳಾಗಿಯೇ ತಯಾರಾಗಿದೆ. ಸಪ್ತಗ್ರಹಗಳು ಪಾಪಪುಣ್ಯಗಳನ್ನು ಅನುಸರಿಸಿ ಎರಡು ಪಕ್ಷಗಳಾಗಿಯೇ ತಯಾರಾಗಿವೆ. ಆದ ಕಾರಣ ಶರೀರವು ಸಹ ಎರಡು ಪಕ್ಷಗಳಾಗಿಯೇ ತಯಾರಾಗಿದೆ. ಇದರಿಂದಲೇ ಈ ಶರೀರಕ್ಕೆ ಅರ್ಧನಾರೀಶ್ವರ ಅನ್ನುವ ಹೆಸರು ಬಂದಿದೆ. ಒಳಗೆ ಸೂರ್ಯಚಂದ್ರನಾಡಿ ವಿಭಜನೆಯಾಗಿ, ಹೊರಗೆ ಬಲ ಎಡ

ವಿಭಜನೆಯಾಗಿ ರೂಪಹೊಂದಿದ ಶರೀರ ಅವಯವಗಳ ಬಗ್ಗೆ ತಿಳಿದುಕೊಂಡಂ ತಾದರೆ ಪರಮಾತ್ಮ ಎಂತಹವನೋ ತಿಳಿದುಕೊಳ್ಳುವುದಕ್ಕೆ ಸ್ವಲ್ಪಮಾರ್ಗ ಏರ್ಪಡುತ್ತದೆ. **ಭಗವದ್ಗೀತೆಯಲ್ಲಿ ಶರೀರ ಕ್ಷೇತ್ರ, ನಾನು ಕ್ಷೇತ್ರಜ್ಞನು ಎಂದು ಪರಮಾತ್ಮ ಹೇಳಿದ್ದಾನೆ.** ಶರೀರವೆಂಬ ಕ್ಷೇತ್ರವನ್ನು ತಿಳಿದುಕೊಳ್ಳದೆ ಕ್ಷೇತ್ರಜ್ಞನನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಿರುವುದಿಲ್ಲ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಶರೀರವನ್ನು ತಿಳಿದುಕೊಳ್ಳುವುದು ಮುಖ್ಯಾಂಶ.

ಬಲ ಎಡ ಎರಡುಭಾಗಗಳು ಸೇರಿ ಏರ್ಪಟ್ಟಿರುವ ಶರೀರದಲ್ಲಿಯೇ ತಾನೆ ಮಾನವನು ಭಕ್ತಿ, ಧ್ಯಾನ, ಯೋಗಗಳನ್ನು ಆಚರಿಸಿ ಆತ್ಮವನ್ನು ತಿಳಿದುಕೊಳ್ಳಬೇಕಾಗಿರುವುದು. ಆದ್ದರಿಂದ ಯೋಗವಾಚರಿಸುವ ಪ್ರತಿಯೊಬ್ಬರು ಗುರು, ಶನಿ ಪಕ್ಷಗಳನ್ನು ತಪ್ಪದೆ ತಿಳಿದುಕೊಂಡು ಯೋಗವಾಚರಿಸಬೇಕು. ಹಾಗೆ ಆಗದಿದ್ದಲ್ಲಿ ಅವರ ಯೋಗ ನಿಷ್ಪ್ರಯೋಜನ. ಗುರು ಪಕ್ಷದಿನಗಳಲ್ಲಿ ಬಲಗಡೆ ಶರೀರ ಬ್ರಹ್ಮಶಕ್ತಿಯನ್ನು ಗ್ರಹಿಸಿರುವುದಾಗಿರುತ್ತದೆ. ಶನಿ ಪಕ್ಷ ದಿನಗಳಲ್ಲಿ ಎಡಗಡೆ ಶರೀರ ಬ್ರಹ್ಮಶಕ್ತಿಯನ್ನು ಗ್ರಹಿಸಿರುವುದಾಗಿರುತ್ತದೆ. ಇದನ್ನು ಎಂದೋ ನಮ್ಮ ಹಿರಿಯರು ಮಹರ್ಷಿಗಳು ಗ್ರಹಿಸಿ ಅದರ ಪ್ರಕಾರ ಅವರು ಯೋಗ ವಾಚರಿಸುವುದಕ್ಕೆ ಯೋಗದಂಡವನ್ನು ಉಪಯೋಗಿಸುತ್ತಿದ್ದರು. ಕಾಲಕ್ರಮೇಣ ವಿಪರೀತಭಕ್ತರು ಉದ್ಭವಿಸಿ ಒಂದು ವಿಷಯವನ್ನು ಸಹ ತಿಳಿದು ಕೊಳ್ಳ ದೆಹೋದರೂ ಹಿರಿಯರು ತಿಳಿಸಿ ಆಚರಿಸಿದವುಗಳನ್ನೇ ವ್ಯರ್ಥ ಅಂದಿದ್ದಾರೆ. ಆದರೆ ವ್ಯರ್ಥವೆಂದ ಅವರ ಮಾತುಗಳೂ, ಅವರು ಆಚರಿಸುವ ಪದ್ಧತಿಗಳೂ ವ್ಯರ್ಥವೆಂದು ನಿಜವಾಗಲು ಅವರಿಗೆ ತಿಳಿದಿಲ್ಲ. ಪವಿತ್ರವಾದ ಮಹರ್ಷಿಗಳು ನಡೆದು ತೋರಿಸಿದ ಮಾರ್ಗಗಳನ್ನೇ ಸರಿಯಲ್ಲ ಎನ್ನುತ್ತಿದ್ದಾರೆ. ಸೂತ್ರಗಳು ತಿಳಿಯದ ಈ ಕಾಲದ ಭಕ್ತರು ಯೋಗದಂಡದಿಂದ ಕೆಲಸ ಏನಿದೆ ಎನ್ನುತ್ತಿದ್ದಾರೆ.

ಯೋಗ ಎಂದರೆ ಆತ್ಮಜೊತೆ ಸೇರುವುದು ಎಂದು ಅರ್ಥ ಅಲ್ಲವೆ! ಯೋಗದಂಡ ಎಂದರೆ ಇದು ಏನೋ ಆತ್ಮಸಂಬಂಧಕ್ಕಾಗಿ ವಿನಿಯೋಗಿಸುವುದೆ ಎಂದು ಸುಲಭವಾಗಿ ತಿಳಿಯುತ್ತಿದೆ, ಅಂತಹ ಯೋಗದಂಡವನ್ನು ಈ ಕಾಲದಲ್ಲಿ

ಬಹಳಜನರು ಅದನ್ನು ಸುಲಭವಾಗಿ ತೆಗೆದುಹಾಕುತ್ತಿದ್ದಾರೆ. ಆ ಕಾಲದಲ್ಲಿ ವಿಶ್ವಾಮಿತ್ರ ವಶಿಷ್ಠಾದಿ ಮುನಿಗಳು ನಮಗಿಂತ ತಿಳುವಳಿಕೆ ಇಲ್ಲದವರಾ! ಅಥವಾ ವಿಧಾನಗಳು ತಿಳಿಯದವರಾ! ಎಷ್ಟೋ ದೊಡ್ಡ ಯೋಗವಿದ್ಯಾ ಸಂಪನ್ನರಾಗಿ ಯೋಗದಂಡವನ್ನು ಉಪಯೋಗಿಸಿ ಯೋಗವನ್ನು ಸಾಧಿಸಿದ್ದರೆ, ಅವರಿಗಿಂತ ಕಡಿಮೆಯವರಾದ ನಾವು ಯೋಗದಂಡವು ಇಲ್ಲದೆಯೇ ಯೋಗವನ್ನು ಸಾಧಿಸುತ್ತೇವಾ! ಯೋಗದಂಡ ಅಥವಾ ಯೋಗ ಸಾಧಿಸುತ್ತೇವೆ ಅನ್ನುವುದು ಕನಸಿನಲ್ಲಿನ ಮಾತು. ಅದಕ್ಕೇ ಈದಿನ ದೊಡ್ಡಸ್ವಾಮಿಗಳು ಎಂದು ಹೆಸರುವಾಸಿಯಾದವರೂ ಸಹ ಭಗವಂತನು ಗೀತಾಶಾಸ್ತ್ರದಲ್ಲಿ ಅಕ್ಷರಪರಬ್ರಹ್ಮ ಯೋಗದಲ್ಲಿ ಹೇಳಿದಂತೆ ಅಂತ್ಯಕಾಲದಲ್ಲಿ ರಾತ್ರಿಸಮಯವೊ, ದಕ್ಷಿಣಾಯಣ ದಲ್ಲಿಯೊ, ಕೃಷ್ಣಪಕ್ಷದಲ್ಲಿಯೊ ಮರಣಿಸುತ್ತಿದ್ದಾರೆ. ಅದರಿಂದ ಅವರಿಗೆ ಮತ್ತೆ ಜನ್ಮ ಇದೆಯೆಂದು ಪ್ರತ್ಯಕ್ಷವಾಗಿ ತಿಳಿಯುತ್ತಿದೆ. ದೇಶದಲ್ಲಿ ಭಕ್ತರೆನಿಸಿಕೊಂಡವರೂ ಸಹ ಹಗಲು ಅಲ್ಲದೆ ಶುಕ್ಲಪಕ್ಷವಲ್ಲದೆ, ಉತ್ತರಾಯಣವಲ್ಲದೆ ಇರುವ ಸಮಯದಲ್ಲಿ ಮರಣಿಸುತ್ತಿದ್ದಾರೆಂದರೆ, ಅವರು ಇನ್ನು ತಿಳಿದುಕೊಳ್ಳ ಬೇಕಾಗಿರುವುದು ಬಹಳ ಇದೆ. ಆಚರಿಸಬೇಕಾಗಿರುವುದು ಬಹಳ ಇದೆಯೆಂದು ತಿಳಿಯುತ್ತಿದೆ. ಗೀತಾಶಾಸ್ತ್ರದಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 28 ಶ್ಲೋಕದಲ್ಲಿ **ಶುಕ್ಲ, ಕೃಷ್ಣ ಪಕ್ಷಗಳನ್ನು ತಿಳಿದವನು ವೇದಗಳಿಂದ, ಯಜ್ಞಗಳಿಂದ, ತಪಸ್ಸುಗಳಿಂದ, ದಾನಗಳಿಂದ ಲಭಿಸುವ ಪುಣ್ಯಫಲಗಳನ್ನು, ಅತಿಕ್ರಮಿಸುವವನು'** ಎಂದು ಭಗವಂತನು ತಿಳಿಸಿದ್ದಾನೆ. ಗೀತಾಶಾಸ್ತ್ರವನ್ನು ಬೋಧಿಸುವ ಬೋಧಕರಿಗೇ ಪಕ್ಷ ಎಂದರೆ ಏನೋ ತಿಳಿಯದೆಹೋದರೆ, ಶುಕ್ಲ ಕೃಷ್ಣ ಪಕ್ಷಗಳ ಕುರಿತು ಏನು ತಿಳಿಯುತ್ತದೆ? ಗೀತಾಶಾಸ್ತ್ರದಲ್ಲಿ ಭಗವಂತನು ವಿಷಯವನ್ನು ವಿವರವಾಗಿ ತಿಳಿಸಿದರೆ, ಈ ಕಾಲದಲ್ಲಿ ಕಥೆಗಳನ್ನು ಉಪಮಾನಗಳಾಗಿ ಹೇಳುತ್ತಾ, ಭಗವಂತನ ಭಾವನೆಗಳನ್ನು ಬಿಟ್ಟು ಬೇರೆ ಭಾವದಲ್ಲಿ ಬೀಳುತ್ತಿದ್ದಾರೆ. ದಿನದಲ್ಲಿ ಹಗಲು ರಾತ್ರಿ, ತಿಂಗಳಲ್ಲಿ ಕೃಷ್ಣ ಶುಕ್ಲಪಕ್ಷಗಳು, ವರ್ಷದಲ್ಲಿ ಉತ್ತರ ದಕ್ಷಿಣಾಯಣಗಳು ಏತಕ್ಕಿವೆ ಎಂದು ಯಾವಾಗಾದರೆ ವಿಶಧೀಕರಿಸಿ ಗುರುಗಳಿಂದ ತಿಳಿದುಕೊಳ್ಳುತ್ತಾನೋ ಅವನೇ ಧನ್ಯನು, ಅವನೇ ಸರ್ವಜ್ಞನು. ಪರಮಾತ್ಮ ಪ್ರಪಂಚವೆಲ್ಲಾ ತುಂಬಿದ್ದಾನೆಂದು

ತಿಳಿದಿದೆ ಎನ್ನುತ್ತಿದ್ದಾರೆ. ಆದರೆ ಯಾರೋ ಹೇಳುತ್ತಿದ್ದರೆ ಇವರು ಅನ್ನುತ್ತಿದ್ದಾರೆ. ನಿಜವಾಗಲು ಹೇಗೆ ತುಂಬಿದ್ದಾನೆಂಬುವುದು ವಿಶಧೀಕರಿಸಿಕೊಳ್ಳಲಿಲ್ಲ. ಶುಕ್ಲ, ಕೃಷ್ಣಪಕ್ಷಗಳು ನಮಗೆ ಕಾಣಿಸುತ್ತಿವೆಯಲ್ಲ ಎಂದು ಅಂದುಕೊಳ್ಳುತ್ತಿದ್ದಾರೆ. ಆದರೆ ಏಕೆ? ಹೇಗೆ? ನಡೆಯುತ್ತಿವೆ ಎಂದು ವಿಶಧೀಕರಿಸಿಕೊಳ್ಳಲಿಲ್ಲ. ಗುಡಿಯಲ್ಲಿ ದೇವರು ಸೂಕ್ಷ್ಮದಿಂದ ಮಾತನಾಡುವುದು ನೋಡುತ್ತಿದ್ದಾರೆ. ದೆವ್ವಗಳು ಆವರಿಸಿ ಮಾತನಾಡುವುದು ಸಹ ನೋಡುತ್ತಿದ್ದಾರೆ. ಆದರೆ ಏಕೆ ಹೀಗೆ ನಡೆಯುತ್ತಿದೆ? ಇದರ ನಿಜಸ್ಥಿತಿ ಏನು? ಅನ್ನುವ ವಿಷಯದ ಮೇಲೆ ಸ್ವಲ್ಪವೂ ಮಾನವರಿಗೆ ಆಸಕ್ತಿ ಇಲ್ಲ. ಇರುವುದೆಲ್ಲಾ ಸ್ವಾರ್ಥ. ಮೊದಲಿನಿಂದ ಈ ಭೂಮಿಯೇ ಇದೆ. ಇದರ ಮೇಲೆಯೇ ಎಷ್ಟೋ ತಾಪತ್ರಯಪಟ್ಟು ಏನು ತೆಗೆದುಕೊಂಡುಹೋದವರು ಇಲ್ಲವೆಂದು ಎಲ್ಲರಿಗೂ ತಿಳಿದಿದೆ, ಆದರೆ ತಮ್ಮ ನಿಜಸ್ಥಿತಿಗಳನ್ನು ತಿಳಿದುಕೊಳ್ಳದೆ ಒಂದುಸಲ ಬಿಟ್ಟುಹೋಗುವವುಗಳಿಗೋಸ್ಕರ ಮಾನವನು ಕಾಲವನ್ನು ವಿನಿಯೋಗಿಸಿಕೊಳ್ಳುತ್ತಿದ್ದಾನೆ.

ಸಪ್ತಗ್ರಹಗಳು ನವಗ್ರಹಗಳು ಅಲ್ಲದೆ ಮೊದಲೇ ಇದ್ದ ವಿಧಾನ ಏನೆಂದರೆ! ಸಪ್ತಗ್ರಹಗಳಿಗೂ ಸಪ್ತದಿನಗಳು ನಿರ್ದೇಶಿಸಲ್ಪಟ್ಟಿವೆ ಅಲ್ಲವೆ! ಗ್ರಹಗಳು ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿವೆ ಅಲ್ಲವೆ! ಅವುಗಳನ್ನನುಸರಿಸಿ ದಿನಗಳು ಸಹ ಎರಡು ಪಕ್ಷಗಳಾಗಿ (ಭಾಗಗಳಾಗಿ) ವಿಭಜಿಸಲ್ಪಟ್ಟಿವೆ. ಆದಿವಾರ, ಸೋಮವಾರ, ಮಂಗಳವಾರ, ಗುರುವಾರಗಳನ್ನು ಒಂದಾಗಿ, ಬುಧುವಾರ, ಶುಕ್ರವಾರ, ಶನಿವಾರಗಳನ್ನು ಒಂದಾಗಿ ನಿರ್ಣಯಿಸಿದ್ದಾರೆ. ಎರಡು ಭಾಗಗಳಾಗಿ ಸಮಾನವಾಗಿರುವುದಕ್ಕೆ ಚಂದ್ರನು 15 ದಿನಗಳು ಒಂದುಕಡೆ, ಉಳಿದ 15 ದಿನಗಳು ಮತ್ತೊಂದುಕಡೆ ಬದಲಾಗುತ್ತಿರುತ್ತದೆ. ಈ ವಿಧವಾಗಿ ಬದಲಾಗುವುದನ್ನೆ ಪಕ್ಷ ಅನ್ನುತ್ತಾರೆ. ಈ ವಿಧವಾಗಿ ಚಂದ್ರನು ಬದಲಾಗುವುದರಿಂದ ಎರಡು ಪಕ್ಷಗಳ ಗ್ರಹಗಳಿಗೂ ಸಮಾನಬಲ ಏರ್ಪಡುತ್ತಿದೆ. ಚಂದ್ರನು ಗುರುಪಕ್ಷದಲ್ಲಿ ಸೇರಿದಾಗ ಶುಕ್ಲಪಕ್ಷ ಎಂದು, ಶನಿಪಕ್ಷದಲ್ಲಿ ಸೇರಿದಾಗ ಕೃಷ್ಣಪಕ್ಷ ಎಂದು ತಿಳಿಯುತ್ತಿದೆ. ಶುಕ್ಲ ಪಕ್ಷದಲ್ಲಿ ಆದಿ, ಸೋಮ, ಮಂಗಳ, ಗುರುವಾರಗಳು ಒಂದಾಗಿ, ಕೃಷ್ಣಪಕ್ಷದಲ್ಲಿ ಬುಧ,

ಶುಕ್ರ, ಶನಿ, ಸೋಮವಾರಗಳು ಒಂದಾಗಿ ಇವೆ. ಶುಕ್ಲಪಕ್ಷ ಆದಿ, ಸೋಮ, ಮಂಗಳ, ಗುರುವಾರಗಳಲ್ಲಿ ಶರೀರದಲ್ಲಿ ಬಲಗಡೆ ಭಾಗ ಮಾತ್ರವೇ ಬ್ರಹ್ಮಶಕ್ತಿಯನ್ನು ಗ್ರಹಿಸಿಕೊಳ್ಳುವ ಬಲ ಹೊಂದಿದೆ. ಆ ದಿನಗಳಲ್ಲಿ ಶರೀರ ಎಡಭಾಗ ಬ್ರಹ್ಮಶಕ್ತಿಯನ್ನು ಸ್ವಲ್ಪವೂ ಗ್ರಹಿಸಿಕೊರ್ಳಳುವುದಿಲ್ಲ. ಕೃಷ್ಣ ಪಕ್ಷ ಬುಧ, ಶುಕ್ರ, ಶನಿ, ಸೋಮವಾರಗಳಲ್ಲಿ ಎಡಗಡೆಯ ಶರೀರ ಮಾತ್ರ ಬ್ರಹ್ಮಶಕ್ತಿಯನ್ನು ಗ್ರಹಿಸಿಕೊಳ್ಳುವ ಸಾಮರ್ಥ್ಯ ಹೊಂದಿರುತ್ತದೆ. ಈ ದಿನಗಳಲ್ಲಿ ಶರೀರ ಬಲಭಾಗ ಸ್ವಲ್ಪವೂ ಬ್ರಹ್ಮಶಕ್ತಿಯನ್ನು ಗ್ರಹಿಸಿಕೊಳ್ಳಲಿಲ್ಲ. ಆದ ಕಾರಣ ಯೋಗವಾಚರಿಸುವ ವೇಳೆಯಲ್ಲಿ ಯಾವ ದಿನ ನಾವು ಯೋಗ ಮಾಡುತ್ತಿದ್ದೇವೊ, ಆ ದಿನ ಶರೀರದಲ್ಲಿ ಯಾವ ಭಾಗಕ್ಕೆ ಸೇರಿದೆಯೋ ತಿಳಿದುಕೊಂಡು ಆ ಭಾಗದಲ್ಲಿಯೇ ನಮ್ಮಲ್ಲಿ ಆಡುತ್ತಿರುವ ಶ್ವಾಸವನ್ನು ನಡೆಸುತ್ತಿರಬೇಕು. ಶ್ವಾಸ ಯಾವ ಭಾಗದಲ್ಲಿ ಹೆಚ್ಚಾಗಿ ನಡೆದರು ಆ ಭಾಗದಲ್ಲಿ ಅಧಿಪತಿಗಳಾದ ಗ್ರಹಗಳು ಬ್ರಹ್ಮಶಕ್ತಿಯನ್ನು ಶರೀರದೊಳಗೆ ಬರುವಂತೆ ಮಾಡುತ್ತಾರೆ. ಹಾಗಲ್ಲದೆ ವಿರುದ್ಧ ದಿಕ್ಕಿನಲ್ಲಿ ಶ್ವಾಸ ಆಡುತ್ತಿದ್ದರು ಬ್ರಹ್ಮಶಕ್ತಿಯನ್ನು ಗ್ರಹಿಸುವ ಸಾಮರ್ಥ್ಯ ಆ ದಿಕ್ಕು ಕಳೆದುಕೊಳ್ಳುತ್ತದೆ. ಇದಕ್ಕೆ ಉದಾಹರಣೆಯಾಗಿ ತಿಳಿಸುವ ವಿಷಯ ಇದು.

ಒಬ್ಬ ಯೋಗಿ ಮಂಗಳವಾರ ಯೋಗವನ್ನಾಚರಿಸುತ್ತಿದ್ದಾನೆಂದುಕೊಳ್ಳೋಣ. ಮಂಗಳವಾರ ಗುರುಪಕ್ಷದಲ್ಲಿ ಸೇರಿದೆ. ಆದ ಕಾರಣ ಗುರುಪಕ್ಷ ಶರೀರದಲ್ಲಿ ಬಲಪಾರ್ಶ್ವದಲ್ಲಿ ಅಧಿಕಾರ ಹೊಂದಿದೆ. ಆದ್ದರಿಂದ ಆ ಯೋಗಿ ಶ್ವಾಸವನ್ನು ಬಲ ಮೂಗಿನ ರಂಧ್ರದಲ್ಲಿಯೇ ಆಡುವಂತೆ ಮಾಡಿಕೊಳ್ಳಬೇಕು. ಶ್ವಾಸ ಬಲ ಮೂಗಿನ ರಂಧ್ರದಲ್ಲಿ ಆಡುವವರೆಗೂ, ಯೋಗ ಮಾಡಿದಷ್ಟು ಸಮಯ ಯೋಗಶಕ್ತಿ ಬಲಗಡೆ ಶರೀರ ಸೂಕ್ಷ್ಮರಂಧ್ರಗಳ ಮೂಲಕ ಒಳಗೆ ಪ್ರವೇಶಿಸುತ್ತಿರುತ್ತದೆ. ಹಾಗಲ್ಲದೆ ಶ್ವಾಸ ಎಡಗಡೆಯ ಮೂಗಿನ ರಂಧ್ರದಲ್ಲಿ ಆಡುತ್ತಿದ್ದರು ಯೋಗಿ ಎಷ್ಟು ಸಮಯ ಯೋಗದಲ್ಲಿದ್ದರು ಬ್ರಹ್ಮಶಕ್ತಿ ಆತನಲ್ಲಿ ಪ್ರವೇಶಿಸುವುದಿಲ್ಲ. ದ್ವಾರಗಳು ಮುಚ್ಚಲ್ಪಟ್ಟಿರುತ್ತವೆ. ಆದ್ದರಿಂದ ಶಕ್ತಿ ಒಳಗೆ ಪ್ರವೇಶಿಸುವುದಿಲ್ಲ. ಶ್ವಾಸ ಎಡಗಡೆಗೆ ಬದಲಾಗಿರುವುದರಿಂದ ಎಡಗಡೆ ಶರೀರದಲ್ಲಿ

ಸೂಕ್ಷ್ಮರಂಧ್ರಗಳ ದ್ವಾರಗಳು ತೆರೆದುಕೊಂಡಿರುತ್ತವೆ. ಆ ದಿನ ಗುರುಪಕ್ಷ ದಿನವಾಗಿದೆ, ಆದ್ದರಿಂದ ಬ್ರಹ್ಮಶಕ್ತಿ ಎಡಗಡೆ ಪ್ರವೇಶಿಸುವುದಿಲ್ಲ. ಏಕೆಂದರೆ ಎಡಗಡೆ ಇರುವ ಗ್ರಹಗಳ ದಿನ ಅಲ್ಲ. ಇದರಿಂದ ಏನು ತಿಳಿಯುತ್ತಿದೆ ಎಂದರೆ! ಶ್ವಾಸ ಯಾವ ಕಡೆ ಆಡುತ್ತಿದೆಯೋ, ಆ ಕಡೆಯ ಶರೀರ ಭಾಗ ಮಾತ್ರವೆ ಶಕ್ತಿಯನ್ನು ಗ್ರಹಿಸಿಕೊಳ್ಳುತ್ತದೆ. ದಿನಗಳು ಯಾವ ಪಕ್ಷದಲ್ಲಿದ್ದರೆ ಆ ಪಕ್ಷಭಾಗದಲ್ಲೇ ಬ್ರಹ್ಮಶಕ್ತಿ ಇರುತ್ತದೆ. ಆದ್ದರಿಂದ ಬ್ರಹ್ಮಶಕ್ತಿಯನ್ನು ಸಂಪಾದಿಸಿಕೊಳ್ಳುವ ಯೋಗಿಗಳು ಪೂರ್ವದಲ್ಲಿ ಯೋಗ ಸಮಯ ಯಾವ ಪಕ್ಷದಿನವೋ ಆ ಕಡೆಯಲ್ಲಿಯೇ ಶ್ವಾಸ ನಡೆಸುತ್ತಿದ್ದರು.

ಗುರು ಶನಿ ಪಾರ್ಟಿ ದಿನಗಳು ಕಾಲಕ್ರಮವಾಗಿ ಪದ್ಧತಿಯಾಗಿ ಬದಲಾವಣೆಯಾಗುತ್ತವೆ. ಆದರೆ ನಮ್ಮಲ್ಲಿರುವ ಶ್ವಾಸ ಪದ್ಧತಿಯಾಗಿ ಬದಲಾಗುವುದಿಲ್ಲ. ಶ್ವಾಸ ಅದಕ್ಕೆ ಇಷ್ಟಬಂದಂತೆ ಯಾವ ಕಡೆ ಅಂದರೆ ಆ ಕಡೆಗೆ ಬದಲಾಗುತ್ತಿರುತ್ತದೆ. ಅಂತಹ ಒಂದು ಪದ್ಧತಿಯಿಲ್ಲದ ಶ್ವಾಸವನ್ನು ಒಂದೇ ಕಡೆ ನಿಲ್ಲಿಸಿ ಯೋಗವನ್ನು ಸಾರ್ಥಕ ಮಾಡಿಕೊಳ್ಳುವುದಕ್ಕೆ ಉಪಯೋಗಿಸುವ ದಂಡವನ್ನೆ **'ಯೋಗದಂಡ'** ಎಂದು ಅನ್ನುತ್ತಾರೆ. ಯೋಗ ದಂಡವನ್ನು ವಿನಿಯೋಗಿಸದಿದ್ದರೂ ಅದು ಹೇಗಿರುತ್ತದೋ ಕೆಲವರಿಗೆ ತಿಳಿದಿರುತ್ತದೆ.

ನಮ್ಮಲ್ಲಿರುವ ಶ್ವಾಸವನ್ನು ಒಂದೇ ಕಡೆ ಹೆಚ್ಚಾಗಿ ಆಡುವಂತೆ ಮಾಡಬೇಕೆಂದರೆ, ಅದಕ್ಕೆ ವಿರುದ್ಧ ಶರೀರ ಭಾಗದಲ್ಲಿ ಯೋಗದಂಡವನ್ನು ವಿನಿಯೋಗಿಸಬೇಕು. ಭುಜಕ್ಕೆ ಕೆಳಗೆ ಮೊಣಕೈ ಮೇಲ್ಭಾಗದಲ್ಲಿ ಯೋಗದಂಡವೊಂದರ ಕವಲನ್ನು ಆನಿಸಿ ಅದರ ಕೆಳಗಿನಕೊನೆಯನ್ನು ಭೂಮಿಮೇಲೆ ತಾಕುವಂತೆ ಇಡಬೇಕು. ಹಾಗೆ ಇಡುವುದರಿಂದ ಆ ಕೈ ನರಕ್ಕೆ ದಂಡವೊಂದರ ಒತ್ತಡ ತಗಲುವುದರಿಂದ ಶ್ವಾಸ ಅದಕ್ಕೆ ವಿರುದ್ಧ ದಿಕ್ಕಿನೊಳಗೆ ಬದಲಾಗುತ್ತದೆ. ಉದಾಹರಣೆಗೆ ಬುಧವಾರ ಯೋಗವನ್ನು ಆಚರಿಸುವ ವೇಳೆ ಎಡಗಡೆ ಶ್ವಾಸ ಆಡಬೇಕು. ಆದ್ದರಿಂದ ಬಲಗೈ ಕೆಳಗೆ ಯೋಗದಂಡವನ್ನು ಇಟ್ಟುಕೊಳ್ಳಬೇಕು.

ಬಲಗಡೆ ದಂಡವನ್ನು ಇಟ್ಟುಕೊಳ್ಳುವುದರಿಂದ ಶ್ವಾಸ ಅದಷ್ಟಕ್ಕೆ ಅದೇ ಎಡಗಡೆಗೆ ಹೋಗುತ್ತದೆ. ಬಲ ಮೂಗಿನ ರಂಧ್ರದಲ್ಲಿ ಹೆಚ್ಚಾಗಿ ಗಾಳಿ ಬರುತ್ತಿರುವುದನ್ನು ಸೂರ್ಯನಾಡಿ ಎಂದು, ಎಡಗಡೆ ಮೂಗಿನರಂಧ್ರದಲ್ಲಿ ಹೆಚ್ಚಾಗಿ ಗಾಳಿ ಬರುತ್ತಿರುವುದನ್ನು ಚಂದ್ರನಾಡಿ ಎಂದು ಹಿರಿಯರು ಹೇಳುತ್ತಿರುತ್ತಾರೆ. ಸೂರ್ಯಚಂದ್ರ ನಾಡಿಗಳು ನಮಗೆ ಸ್ವಾಧೀನದಲ್ಲಿದ್ದು ನಡೆಯುವುದಕ್ಕೆ ಯೋಗದಂಡ ತಪ್ಪದೆ ಇರಬೇಕು. ಇದನ್ನು ವಿಪುಲವಾಗಿ ತಿಳಿದ ವಶಿಷ್ಠಾದಿ ಮಹಾಮುನಿಗಳು ಸಹಿತವು ಯೋಗದಂಡವನ್ನು ಬಿಡದೆ ತಮ್ಮ ಹತ್ತಿರವೇ ಎಲ್ಲಾ ವೇಳೆಯಲ್ಲಿ ಇಟ್ಟುಕೊಳ್ಳುತ್ತಿದ್ದರು. ಮತ್ತು ಅವರು ಜಿಂಕೆ ಚರ್ಮವನ್ನು ಎಲ್ಲಿಗೆ ಹೋದರು ಬಿಡದೆ ತೆಗೆದುಕೊಂಡು ಹೋಗುತ್ತಿದ್ದರು. ಆದರೆ ಈ ಕಾಲದಲ್ಲಿ ಚರ್ಮಾಸನ ಇಲ್ಲದಿದ್ದರೆ ಏನು? ದೇವರು ಒಪ್ಪಿಕೊಳ್ಳುವುದಿಲ್ಲವಾ? ಅನ್ನುವವರು ತಯಾರಾಗಿದ್ದಾರೆ. ಆ ಕಾಲದಲ್ಲಿ ತಿಳಿದ ಹಿರಿಯರು ಕಷ್ಟಗಳನ್ನು ಸಹ ಲೆಕ್ಕಮಾಡದೆ ಅವರು ಎಲ್ಲಿಗೆ ಹೋಗಿ ಯೋಗವಾಚರಿಸಬೇಕೆಂದರೂ ಅಲ್ಲಿಗೆ ಚರ್ಮವನ್ನು, ಯೋಗದಂಡವನ್ನು ತೆಗೆದುಕೊಂಡುಹೋಗಿ ಯೋಗ ವಾಚರಿಸುತ್ತಿದ್ದರು. ಆದರೆ ಈ ಕಾಲದಲ್ಲಿ ನಾವು ಅವುಗಳನ್ನು ವಿಸರ್ಜಿಸಿರುವುದೆ ಅಲ್ಲದೆ, ಅವುಗಳನ್ನು ಉಪಯೋಗಿಸಿದವರನ್ನು ಮತ್ತು ಉಪಯೋಗಿ ಸುತ್ತಿರುವವರನ್ನು ಅವಹೇಳನ ಮಾಡುತ್ತಿದ್ದೇವೆ.

ಚಂದ್ರನು ಎರಡು ಕಡೆ ಬದಲಾಗುತ್ತಿದ್ದಾನೆ. ಆದ್ದರಿಂದ ಈ ವಿಷಯವನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು. ಯೋಗ ಆಚರಿಸುವ ಯೋಗಿ ಗಳು ಎಲ್ಲರೂ ಈ ವಿಧಾನ ಅನುಸರಿಸಿದ ವೇಳೆಯಲ್ಲಿ ಯೋಗಶಕ್ತಿ ತಪ್ಪದೆ ನಿಮ್ಮನ್ನು ಸೇರುತ್ತದೆ. ಹಾಗಲ್ಲದ ವೇಳೆಯುಲ್ಲಿ ಶಕ್ತಿಯನ್ನು ನಷ್ಟಹೋದವರಾಗುತ್ತಾರೆ. **(ಯೋಗಗಳು ಒಟ್ಟು ಮೂರು ವಿಧಗಳೆಂದು, ಅವುಗಳಲ್ಲಿ ಕೇವಲ ಒಂದು ಬ್ರಹ್ಮಯೋಗದಲ್ಲಿ ಮಾತ್ರ ಯೋಗದಂಡವನ್ನು ಉಪಯೋಗಿ ಸಬೇಕೆಂದು ಉಳಿದ ಎರಡು ಯೋಗಗಳಿಗೆ ಅದರಿಂದ ಕೆಲಸವಿಲ್ಲವೆಂದು ಗುರ್ತಿಸಿಕೊಳ್ಳಬೇಕು).**

**1) ಆದಿವಾರ ಸೂರ್ಯನದಿನ :** ಸೂರ್ಯನು ಗುರುಪಾರ್ಟಿಗೆ ಸೇರಿದವನು. ಗುರುಪಾರ್ಟಿ ಶರೀರದಲ್ಲಿ ಬಲಗಡೆ ಅಧಿಕಾರಹೊಂದಿದೆ. ಆದ್ದರಿಂದ ಆ ದಿನ ಬ್ರಹ್ಮಶಕ್ತಿ ಬಲಗಡೆಯೇ ಬರುವುದಕ್ಕೆ ಅವಕಾಶ ಹೊಂದಿರುತ್ತದೆ. ಶಕ್ತಿ ಶರೀರದೊಳಗೆ ಪ್ರವೇಶಿಸುವುಕ್ಕೆ ಬಲಗಡೆ ಸೂಕ್ಷ್ಮರಂಧ್ರಗಳ ದ್ವಾರಗಳು ತೆರೆದುಕೊಂಡಿರಬೇಕು. ಸೂಕ್ಷ್ಮರಂಧ್ರಗಳ ಕವಾಟಗಳು ತೆರೆದು ಕೊಳ್ಳುವುದಕ್ಕೆ ಶ್ವಾಸ ಬಲಗಡೆಯೇ ಆಡಬೇಕು. ಎಂದರೆ ಸೂರ್ಯನಾಡಿಯಲ್ಲಿ ಆಡಬೇಕು. ಆದ್ದರಿಂದ ಯೋಗದಂಡ ಎಡಗೈ ಕೆಳಗೆ ಇಟ್ಟುಕೊಳ್ಳಬೇಕು.

**2) ಸೋಮವಾರ ಚಂದ್ರನದಿನ :** ಶುಕ್ಲಪಕ್ಷ ಸೋಮವಾರ ಗುರುಪಾರ್ಟಿಯಲ್ಲಿರುತ್ತದೆ. ಆದ್ದರಿಂದ ಶ್ವಾಸ ಬಲ ಮೂಗಿನ ರಂಧ್ರದಲ್ಲಿ (ಸೂರ್ಯನಾಡಿಯಲ್ಲಿ) ಆಡಬೇಕು. ಕೃಷ್ಣಪಕ್ಷ ಸೋಮವಾರ ಶನಿಪಾರ್ಟಿಯಲ್ಲಿ ಸೇರಿರುತ್ತದೆ. ಆದ್ದರಿಂದ ಶ್ವಾಸ ಎಡ ಮೂಗಿನರಂಧ್ರದಲ್ಲಿ(ಚಂದ್ರನಾಡಿಯಲ್ಲಿ) ಆಡಬೇಕು. ಶುಕ್ಲಪಕ್ಷದಲ್ಲಿ ಬರುವ ಸೋಮವಾರ ಯೋಗದಂಡವನ್ನು ಎಡಗಡೆ ಇಟ್ಟುಕೊಳ್ಳಬೇಕು. ಕೃಷ್ಣಪಕ್ಷದಲ್ಲಿ ಬರುವ ಸೋಮವಾರ ಯೋಗದಂಡವನ್ನು ಬಲಗಡೆ ಇಟ್ಟುಕೊಳ್ಳಬೇಕು.

**3) ಮಂಗಳವಾರ ಅಂಗಾರಕನ ದಿನ :** ಆದ ಕಾರಣ ಗುರುಪಕ್ಷದಲ್ಲಿ ಇದೆ. ಆದ್ದರಿಂದ ಶ್ವಾಸ ಬಲಗಡೆ (ಸೂರ್ಯನಾಡಿಯಲ್ಲಿ) ಆಡಬೇಕು. ಯೋಗದಂಡವನ್ನು ಎಡಗಡೆ ಇಟ್ಟುಕೊಳ್ಳಬೇಕು

**4) ಬುಧವಾರ ಬುಧನ ದಿನ :** ಆದ ಕಾರಣ ಶನಿಪಕ್ಷದಲ್ಲಿ ಇದೆ. ಆದ್ದರಿಂದ ಶ್ವಾಸ ಎಡಗಡೆ (ಚಂದ್ರನಾಡಿಯಲ್ಲಿ) ಆಡಬೇಕು. ಯೋಗದಂಡವನ್ನು ಬಲಗೈ ಕೆಳಗೆ ಇಟ್ಟುಕೊಳ್ಳಬೇಕು.

**5) ಗುರುವಾರ ಗುರು ದಿನ :** ಆದ ಕಾರಣ ಗುರುಪಕ್ಷದಲ್ಲಿ ಸೇರಿ ಇದೆ. ಶ್ವಾಸ ಬಲಗಡೆ (ಸೂರ್ಯನಾಡಿಯಲ್ಲಿ) ಆಡಬೇಕು. ಯೋಗದಂಡವನ್ನು ಎಡಗೈ ಕೆಳಗೆ ಇಟ್ಟುಕೊಳ್ಳಬೇಕು.

**6) ಶುಕ್ರವಾರ ಶುಕ್ರನ ದಿನ :** ಆದ ಕಾರಣ ಶನಿ ಪಾರ್ಟಿಯಲ್ಲಿ ಸೇರಿದೆ. ಶ್ವಾಸ ಎಡಗಡೆ (ಚಂದ್ರನಾಡಿಯಲ್ಲಿ) ಆಡಬೇಕು. ಯೋಗದಂಡ ಬಲಗಡೆ ಇಟ್ಟುಕೊಳ್ಳಬೇಕು.

**7) ಶನಿವಾರ ಶನಿ ದಿನ :** ಆದ ಕಾರಣ ಶನಿಪಾರ್ಟಿಯಲ್ಲಿ ಸೇರಿದೆ. ಶ್ವಾಸ ಎಡಗಡೆ (ಚಂದ್ರನಾಡಿಯಲ್ಲಿ) ಆಡಬೇಕು. ಯೋಗದಂಡವನ್ನು ಬಲಗಡೆ ಇಟ್ಟುಕೊಳ್ಳಬೇಕು.

**ವಿಜ್ಞಪ್ತಿ :** ಯೋಗಸಾಧನೆ ಮಾಡುವವರಿಗೆ ಒಂದು ಮುಖ್ಯ ಗಮನಿಕೆ. ಶ್ವಾಸ ಬಲ ಎಡ ಎರಡು ಕಡೆ ಆಡುತ್ತಿದೆ ಅಂದಿದ್ದೇವಲ್ಲವೆ! ಗುರುಪಕ್ಷ ದಿನಗಳಲ್ಲಿ ಯೋಗ ಮಾಡುವವೇಳೆ ಬಲಗಡೆ, ಶನಿಪಕ್ಷ ದಿನಗಳಲ್ಲಿ ಯೋಗ ಮಾಡುವ ವೇಳೆ ಎಡಗಡೆ ಶ್ವಾಸ ಆಡಿಸಿಕೊಳ್ಳಬೇಕು. ಅದಕ್ಕೋಸ್ಕರ ಯೋಗದಂಡವನ್ನು ವಿರುದ್ಧ ದಿಕ್ಕಿನಲ್ಲಿ ಉಪಯೋಗಿಸಬೇಕೆಂದು ತಿಳಿಸಿದ್ದೇವೆ. ಆದರೆ ಆ ವಿಧವಾಗಿ ಯೋಗಸಾಧನೆ ಮಾಡುವವರಲ್ಲಿ ಅಪರೂಪವಾಗಿ ಕೆಲವರಿಗೆ ಮಾತ್ರವೇ ಶ್ವಾಸ ನಾವು ಹೇಳಿದ ವಿಧದಲ್ಲಿ ಬದಲಾಗುವುದಿಲ್ಲ. ಹಾಗೆ ಬದಲಾಗದ ಪಕ್ಷದಲ್ಲಿ ನಮಗೆ ಶ್ವಾಸ ಯೋಗದಂಡವನ್ನು ವಿನಿಯೋಗಿಸಿದರು ಬದಲಾಗಲಿಲ್ಲವೆ? ಎಂದು ಯಾರೂ ಸಹ ಚಿಂತಿಸಬೇಕಾದ ಕೆಲಸವಿಲ್ಲ. ನಾವು ಯಾವ ವಿಧವಾಗಿ ಹೇಳಿದ್ದೇವೊ ಆ ವಿಧವಾಗಿಯೇ ಯೋಗದಂಡವನ್ನು ವಿನಿಯೋಗಿಸಿ ಸಾಧನೆ ಮಾಡಬೇಕು.

ಈ ವಿಷಯವನ್ನು ಕುರಿತು ಇನ್ನು ವಿವರವಾಗಿ ತಿಳಿಸುವುದು ಏನೆಂದರೆ! ಶರೀರದಲ್ಲಿ ಬಲ ಭಾಗದಲ್ಲಿ ದೊಡ್ಡದಾಗಿ ಸೂರ್ಯನಾಡಿ ಇದೆ. ಹಾಗೆ ಎಡಭಾಗದಲ್ಲಿ ದೊಡ್ಡದಾಗಿ ಚಂದ್ರನಾಡಿ ಇದೆ. ನಮ್ಮ ಶರೀರದಲ್ಲಿ ಅಂತಃಕರಣಗಳಲ್ಲಿ ಎರಡನೆಯದು ಮತ್ತು ಮುಖ್ಯವಾದುದಾದ ಮನಸ್ಸು ಎಚ್ಚರಿಕೆಯಲ್ಲಿ ಈ ಸೂರ್ಯಚಂದ್ರನಾಡಿಗಳ ಮೇಲೆ ಇರುತ್ತದೆ. ಒಂದು ದಿನದಂದು ಸೂರ್ಯನಾಡಿ ಮೇಲೆ ಸ್ವಲ್ಪಕಾಲ, ಚಂದ್ರನಾಡಿ ಮೇಲೇ ಸ್ವಲ್ಪಕಾಲ ಮನಸ್ಸು ನಿವಾಸ ಮಾಡುತ್ತಿರುತ್ತದೆ. ಮನಸ್ಸು ಬಲಗಡೆ ಸೂರ್ಯನಾಡಿ ಮೇಲೆ

ಇರುವಾಗ ಶ್ವಾಸ ಬಲ ಮೂಗಿನರಂಧ್ರದಲ್ಲಿಯೂ, ಎಡಗಡೆ ಚಂದ್ರನಾಡಿ ಮೇಲಿರುವಾಗ ಶ್ವಾಸ ಎಡಗಡೆಯ ಮೂಗಿನರಂಧ್ರದಲ್ಲಿಯು ಹೆಚ್ಚಾಗಿ ಬರುತ್ತಿರುತ್ತದೆ. ಆ ದಿನ ಒಳಗಿರುವ ಮನಸ್ಸು ಯಾವ ಕಡೆಗೆಹೋದರು ಆ ಕಡೆಯಲ್ಲಿ ಶ್ವಾಸ ಆಡುತ್ತಿರುತ್ತದೆ. ಮನಸ್ಸನ್ನು ಒಂದೇ ನಾಡಿ ಮೇಲೆ ಇಡುವ ನಿಮಿತ್ತ ಯೋಗದಂಡವನ್ನು ಉಪಯೋಗಿ ಸಬೇಕೆಂದು ತಿಳಿಸುತ್ತಿದ್ದೇವೆ. ಯೋಗದಂಡವನ್ನು ವಿನಿಯೋಗಿಸುವ ದಿಕ್ಕಿನಲ್ಲಿ ಮನಸ್ಸು ಇರದೆ ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಇರುತ್ತದೆ. ಆದ್ದರಿಂದ ಶ್ವಾಸ ಸಹ ಯೋಗದಂಡವನ್ನು ವಿನಿಯೋಗಿಸಿದ ಕಡೆ ಅಲ್ಲದೇ ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಆಡುತ್ತಿರುತ್ತದೆ. ಆದರೆ ಕೆಲವರಿಗೆ ಸಾಧನೆ ಮಾಡುವವೇಳೆ ಯೋಗದಂಡವನ್ನು ವಿನಿಯೋಗಿಸಿದರು ಶ್ವಾಸ ಬದಲಾಗದೆ ಯೋಗದಂಡವನ್ನು ವಿನಿಯೋಗಿಸಿದ ಕಡೆಯೇ ಇರುತ್ತದೆ. ಆದರೆ ಒಳಗೆ ಮನಸ್ಸು ಹಾಗೆ ಇರದೆ ವಿರುದ್ಧ ದಿಕ್ಕಿಗೆ ಬದಲಾಗುತ್ತಿರುತ್ತದೆ. ಯೋಗಕ್ಕೆ ಮನಸ್ಸು ಮುಖ್ಯವಾಗಲಿ ಶ್ವಾಸ ಮುಖ್ಯವಲ್ಲ. ಆದ್ದರಿಂದ ಬದಲಾಗದ ಶ್ವಾಸಕ್ಕೋಸ್ಕರ ಯಾರೂ ಸಹ ಚಿಂತೆಮಾಡಬಾರದು.

ಯೋಗದಂಡವನ್ನು ವಿನಿಯೋಗಿಸಿದ ತಕ್ಷಣ ಮೇಲೆ ಶ್ವಾಸ ಬದಲಾಗದಿದ್ದರೂ ಒಳಗೆ ಮನಸ್ಸು ಬದಲಾಗಿರುತ್ತದೆ. ಆದ್ದರಿಂದ ಯೋಗಶಕ್ತಿ ಸಹ ಮನಸ್ಸು ಇರುವಕಡೆ ಶರೀರದಲ್ಲಿ ಪ್ರವೇಶಿಸುತ್ತಲೇ ಇರುತ್ತದೆ. ಯೋಗದಂಡ ವಿನಿಯೋಗಿಸಿದರೂ ಶ್ವಾಸ ಬದಲಾಗದವರು ಸಹ ಯೋಗಶಕ್ತಿಯನ್ನು ನಷ್ಟಹೋಗದಂತೆ ಅದನ್ನು ಪಡೆಯುತ್ತಿರುತ್ತಾರೆಂದೇ ತಿಳಿಸುತ್ತಿದ್ದೇವೆ. ಮುಖ್ಯವಾಗಿ ಒಳಗಿನ ಮನಸ್ಸು ಬಲಎಡಗಳಾಗಿ ಬದಲಾಗುವ ಸಲುವಾಗಿ ಯೋಗದಂಡವನ್ನು ವಿನಿಯೋಗಿಸುತ್ತಿದ್ದೇವೆಂದು ಪ್ರತಿಯೊಬ್ಬರು ತಿಳಿದುಕೊಳ್ಳಬೇಕು. ಆದ್ದರಿಂದ ನಾವು ತಿಳಿಸಿದಂತೆ ಯೋಗದಂಡವನ್ನು ವಿನಿಯೋಗಿಸಿ ಯೋಗ ಮಾಡಬೇಕು. ಪೂರ್ವದಲ್ಲಿನ ಮನಸ್ಸು ಗುರು ಶನಿಪಕ್ಷಗಳಲ್ಲಿ ಸೂರ್ಯಚಂದ್ರನಾಡಿಗಳ ಮೇಲೆ ಬದಲಾಯಿಸಿಕೊಳ್ಳುವುದಕ್ಕಾಗಿ ಶಂಕರನು ಯೋಗದಂಡವನ್ನು ವಿನಿಯೋಗಿ ಸಿದ್ದಾನೆಂದು, ವಿಷ್ಣು ತನ್ನ ತಲೆಕೆಳಗೆ ಬಲ ಎಡಕೈಗಳನ್ನು ಇಟ್ಟುಕೊಂಡು

ಪವಳಿಸಿ ಯೋಗ ಮಾಡಿದ್ದಾರೆಂಬುವುದು ಸಹ ಮರೆಯಬಾರದು. ವಿಷ್ಣು, ಶಂಕರನು ಆಚರಿಸಿರುವಾಗ, ನಾವು ಆಚರಿಸದೆಹೋದರೆ ದೊಡ್ಡ ಲೋಪ. ಆದ್ದರಿಂದ ಎಲ್ಲರೂ ಗ್ರಂಥದಲ್ಲಿ ಹೇಳಿದಂತೆ ಬ್ರಹ್ಮಯೋಗವನ್ನು ಮಾಡುವ ಸಮಯದಲ್ಲಿ ಯೋಗದಂಡವನ್ನು ಉಪಯೋಗಿಸಿಕೊಳ್ಳಬೇಕು.

## ಚರ್ಮಾಸನಗಳ ಅವಶ್ಯಕತೆ

ಪೂರ್ವದಲ್ಲಿ ಮಹರ್ಷಿಗಳು ಸಹಿತವು ಯೋಗದಂಡ, ಜಿಂಕೆ ಚರ್ಮವನ್ನು ಕೈಯಲ್ಲಿ ಧರಿಸಿ ತಿರುಗಿದ್ದಾರೆಂದು ಎಲ್ಲರಿಗೂ ತಿಳಿದಿದೆ. ಯೋಗದಂಡ ಇಲ್ಲದೆ ಯೋಗವಾಚರಿಸುವುದು ಕಷ್ಟವೆಂದು ತಿಳಿದುಕೊಂಡಿದ್ದೇವೆ. ಇನ್ನು ಮಹರ್ಷಿಗಳು ಚರ್ಮಗಳು ಏಕೆ ಉಪಯೋಗಿಸುತ್ತಿದ್ದರು ಅನ್ನುವ ವಿಷಯವನ್ನು ತಿಳಿದುಕೊಳ್ಳೋಣ. ಯೋಗ ಆಚರಿಸುವವೇಳೆ ಬ್ರಹ್ಮಶಕ್ತಿ ಅಥವಾ ಯೋಗಶಕ್ತಿ ಶರೀರದಲ್ಲಿ ಪ್ರವೇಶಿಸುತ್ತಿರುತ್ತದೆ. ಈ ವಿಧವಾಗಿ ಪ್ರವೇಶಿಸುವ ಶಕ್ತಿ ಶರೀರದಲ್ಲಿ ಬ್ರಹ್ಮನಾಡಿಯನ್ನು ಸೇರಿ ಸಪ್ತಸ್ಥಾನವಾದ ಸಹಸ್ರಾರಚಕ್ರದಲ್ಲಿ ಗುಂಪಾಗಿ ಕೂಡಿಕೊಂಡಿರುತ್ತದೆ. ಸಹಸ್ರಾರದಲ್ಲಿ ಗುಂಪಾಗಿ ಸೇರಿದ ಶಕ್ತಿಯನ್ನೇ ವಿಷ್ಣು, ಈಶ್ವರ ಫೋಟೋಗಳಲ್ಲಿ ಅವರ ತಲೆ ಹಿಂದಿನಭಾಗದಲ್ಲಿ ಬೆಳಕಿನ ರೂಪದಲ್ಲಿ ಚಿತ್ರೀಕರಿಸುವುದು ನಡೆಯುತ್ತದೆ. ತಲೆ ಹಿಂದಿನ ಭಾಗದಲ್ಲಿ ಬೆಳಕನ್ನು ಚಿತ್ರೀಕರಿಸುವುದು ಅದು ಅವರೊಂದರ ಜ್ಞಾನಶಕ್ತಿ ಎಂದು ತಿಳಿಯಬಹುದು. ಈ ಪ್ರಕಾಶಶಕ್ತಿಯನ್ನು ದೇವತೆಗಳು ಪದ್ಧತಿ ಪ್ರಕಾರ ಯೋಗವನ್ನು ಆಚರಿಸಿ ಸಂಪಾದಿಸಿಕೊಂಡಿದ್ದಾರೆ. ಪದ್ಧತಿ ಎಂದರೆ ಯೋಗದಂಡವನ್ನು ಉಪಯೋಗಿಸಿ, ಚರ್ಮ ಉಪಯೋಗಿಸಿ ಮಾಡುವುದು. ಚರ್ಮಉಪಯೋಗಿಸುವ ರಹಸ್ಯ ವೇನೆಂದರೆ? ವಿವರಿಸುತ್ತೇನೆ ಕೇಳು.

ಯೋಗಿ ಬ್ರಹ್ಮಯೋಗ ಆಚರಿಸುವ ವೇಳೆ ಜ್ಞಾನಶಕ್ತಿ ಆತನಲ್ಲಿ ಪ್ರವೇಶಿ ಸುತ್ತಿರುತ್ತದೆ. ಶರೀರದಲ್ಲಿ ಪ್ರವೇಶಿಸಿದ ಶಕ್ತಿ ಬ್ರಹ್ಮನಾಡಿಯನ್ನು ಸೇರಿ, ಊರ್ಧ್ವವಾಗಿ

ಪ್ರಯಾಣಿಸಿ, ತಲೆಯಲ್ಲಿರುವ ಏಳನೆ ಚಕ್ರದಲ್ಲಿ ಸೇರುತ್ತಿರುತ್ತದೆ. ಹಾಗೆ ಸೇರುವವೇಳೆ ಕೆಳಗೆ ಭೂಮ್ಯಾಕರ್ಷಣಶಕ್ತಿಯಿಂದ ಸ್ವಲ್ಪ ಯೋಗಶಕ್ತಿ ಬ್ರಹ್ಮನಾಡಿ ಮೂಲಕ ಕೆಳಗೆ ಆಕರ್ಷಿಸಲ್ಪಟ್ಟು ಗುದಸ್ಥಾನದಲ್ಲಿರುವ ಆಧಾರ ಕಮಲವೆಂಬ ನಾಡಿಕೇಂದ್ರದಿಂದ ಭೂಮಿಯನ್ನು ಸೇರುತ್ತಿರುತ್ತದೆ. ಆದರೆ ಯೋಗಿ ಯೋಗ ಮಾಡುವಾಗ ಶಕ್ತಿ ಎಲ್ಲವನ್ನು ಭೂಮಿ ಆಕರ್ಷಿಸಿಕೊಳ್ಳುವುದಿಲ್ಲ. ಕೇವಲ ಅರ್ಧಮಾತ್ರ ನಷ್ಟಹೋಗುವುದು ನಡೆಯುತ್ತಿದೆ. ಅರ್ಧಭಾಗ ಮಾತ್ರ ಭೂಮಿಯಲ್ಲಿ ಪ್ರವೇಶಿಸಿದ ಆ ಶಕ್ತಿ ಮತ್ತೆ ಶೂನ್ಯದಲ್ಲಿ ಮಿಳಿತವಾಗುತ್ತಿರುತ್ತದೆ. ಭೂಮಿಗೆ ಇಂತಹ ಶಕ್ತಿ ಇದೆಯೆಂದು ನಮ್ಮ ಹಿರಿಯರು ಎಂದೋ ತಿಳಿದುಕೊಂಡು, ಅವರು ಬ್ರಹ್ಮಯೋಗ ಮಾಡುವ ಸಮಯದಲ್ಲಿ ಚರ್ಮಾಸನಗಳನ್ನು ಉಪಯೋಗಿಸುತ್ತಿದ್ದರು. ಚರ್ಮವನ್ನು ಭೂಮಿಮೇಲೆ ಹಾಸಿ ಅದರಮೇಲೆ ಯೋಗಿ ಕುಳಿತುಕೊಂಡರೆ, ಯೋಗಿ ಶರೀರದಲ್ಲಿ ಪ್ರವೇಶಿಸುವ ಶಕ್ತಿಯನ್ನು ಭೂಮಿ ಸೆಳೆದುಕೊಳ್ಳುವುದಿಲ್ಲ. ಗೋಡೆಯನ್ನು ದಾಟಿ ಸೂರ್ಯಕಿರಣಗಳು ಹೇಗೆ ಹೋಗುವುದಿಲ್ಲವೊ ಹಾಗೆ ಚರ್ಮವನ್ನು ದಾಟಿ ಶಕ್ತಿ ಹೋಗುವುದಿಲ್ಲ. ಶಕ್ತಿಗೆ ಚರ್ಮ ನಿರೋಧ. ದೇಹದಲ್ಲಿ ಚರ್ಮ ಹೊರತು ಯಾವ ವಸ್ತುಗಳು ಶಕ್ತಿಯನ್ನು ನಿರೋಧಿಸುವುದಿಲ್ಲ. ಚಾಪೆ ಮೇಲೆ ಕುಳಿತುಕೊಂಡರು, ಮಂಚದ ಮೇಲೆ ಕುಳಿತುಕೊಂಡರು, ಎಲ್ಲಿ ಕುಳಿತುಕೊಂಡರು ಶಕ್ತಿ ತಪ್ಪದೆ ನಷ್ಟವಾಗುತ್ತದೆ. ಚರ್ಮದ ಮೇಲೆ ಕುಳಿತುಕೊಂಡ ಯೋಗಿಯೊಂದರ ಶಕ್ತಿ ಸ್ವಲ್ಪವೂ ನಷ್ಟ ವಾಗುವುದಿಲ್ಲ.

ಭೂಮಿ ಪಂಚಭೂತಗಳಲ್ಲಿ ಒಂದಾದ್ದರಿಂದ ಇದಕ್ಕೆ ವಿಚಿತ್ರವಾದ ಆಕರ್ಷಣಾಶಕ್ತಿ ಇದೆ. ಮೇಲಕ್ಕೆಗರಿದ ವಸ್ತುವನ್ನು ಮಾತ್ರ ಭೂಮಿ ತನ್ನ ಕಡೆ ಆಕರ್ಷಣೆಯಿಂದ ಸೆಳೆದುಕೊಂಡಂತೆ ಯೋಗಿ ಯೋಗ ಮಾಡುವ ವೇಳೆ ಅಂದರೆ ಯೋಗಶಕ್ತಿ ಶರೀರದಲ್ಲಿ ಪ್ರವೇಶಿಸುವ ವೇಳೆ ಮಾತ್ರವೇ ಶಕ್ತಿಯನ್ನು ತನ್ನಕಡೆ ಸೆಳೆದುಕೊಳ್ಳುತ್ತದೆ. ಭೂಮಿ ತನ್ನ ಮೇಲಿರುವ ವಸ್ತುವನ್ನು ಕದಲಿಸದಂತೆ ಸಹಸ್ರಾರಚಕ್ರದಲ್ಲಿ ಸೇರಿದ ಶಕ್ತಿಯನ್ನು ಸ್ವಲ್ಪವೂ ಆಕರ್ಷಿಸಿಕೊಳ್ಳುವುದಿಲ್ಲ. ಇದರಿಂದ

ಯೋಗಿ ಯೋಗ ಮಾಡುವವೇಳೆ ಮಾತ್ರವೆ ಶಕ್ತಿ ನಷ್ಟಹೋಗುವುದಕ್ಕೆ ಸಾಧ್ಯವಿದೆ. ಉಳಿದ ಸಮಯದಲ್ಲಿ ನಷ್ಟಹೋಗುವುದಕ್ಕೆ ಸಾಧ್ಯವಿಲ್ಲವೆಂದು ತಿಳಿಯುತ್ತಿದೆ.

ಯೋಗಿ ಯೋಗಮಾಡುವ ಸಮಯದಲ್ಲಿ ಅರ್ಧಭಾಗ ಶಕ್ತಿಯೇ ಏಕೆ ನಷ್ಟಹೋಗುತ್ತದೆ. ನಷ್ಟಹೋಗುವ ಶಕ್ತಿ ಅರ್ಧಕ್ಕಿಂತ ಹೆಚ್ಚೋ! ಅಥವಾ ಕಡಿಮೆಯೋ! ಹೇಗೆ ಹೇಳಲಾಗುತ್ತದೆ? ಅನ್ನುವ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ, ಶಕ್ತಿ ಶರೀರದಲ್ಲಿ ಪ್ರವೇಶಿಸಿ ಬ್ರಹ್ಮನಾಡಿಯನ್ನು ಸೇರುತ್ತಿರುತ್ತದೆಯಲ್ಲ! ಬ್ರಹ್ಮನಾಡಿಯಲ್ಲಿ ನಾಭಿ ಸ್ಥಾನವನ್ನು ಮೊದಲುಗೊಂಡು ಕೆಳಗಡೆ ಪ್ರವೇಶಿಸುವ ಶಕ್ತಿ ಎಲ್ಲವನ್ನು ಭೂಮಿ ಸೆಳೆದುಕೊಳ್ಳುತ್ತದೆ, ನಾಭಿ ಸ್ಥಾನ ಮೊದಲುಗೊಂಡು ಮೇಲೆ ಪ್ರವೇಶಿಸುವ ಶಕ್ತಿಯನ್ನು ಭೂಮಿ ಸೆಳೆದುಕೊಳ್ಳುವುದಿಲ್ಲ. ನಾಭಿಗಿಂತ ಮೇಲೆ ಪ್ರವೇಶಿಸುವ ಶಕ್ತಿಯನ್ನು ಸೆಳೆದುಕೊಳ್ಳುವುದಕ್ಕೆ ಭೂಮಿಗೆ ಆಕರ್ಷಣ ಬಲ ಕಡಿಮೆ ಬರುತ್ತದೆ. ಆದ್ದರಿಂದ ಆರು ಚಕ್ರಗಳಲ್ಲಿ ಮೂರು ಚಕ್ರಗಳವರೆಗೆ ಭೂಮ್ಯಾಕರ್ಷಣಶಕ್ತಿ ಪ್ರಸಾರವಾಗುತ್ತದೆ. ಆದ ಕಾರಣ ಯೋಗಿ ಅರ್ಧಭಾಗ ಶಕ್ತಿಯನ್ನು ಮಾತ್ರ ನಷ್ಟಹೋಗುವುದಕ್ಕೆ ಸಾಧ್ಯವಿದೆ. ಆಸನದಲ್ಲಿ ಚರ್ಮವನ್ನು ಉಪಯೋಗಿಸಿದಂತಾದರೆ ಯೋಗಶಕ್ತಿ ಚರ್ಮವನ್ನು ದಾಟಿಹೋಗುವುದಿಲ್ಲ. ಭೂಮ್ಯಾಕರ್ಷಣೆ ಚರ್ಮವನ್ನು ದಾಟಿ ಸೆಳೆಯುವುದಿಲ್ಲ. ವಿದ್ಯುಶ್ಚಕ್ತಿಯನ್ನು ರಬ್ಬರ್ ಹೇಗೆ ನಿರೋಧಿಸುತ್ತಿದೆಯೋ ಹಾಗೆ ಭೂಮ್ಯಾಕರ್ಷಣೆ ಶಕ್ತಿಯನ್ನು ನಿರೋಧಿಸುತ್ತಿದೆ.

ಪೂರ್ವಕಾಲದಲ್ಲಿ ಯೋಗಿಗಳೆಲ್ಲರೂ ಚರ್ಮವನ್ನುಪಯೋಗಿಸಿ ಶಕ್ತಿಯನ್ನು ಸ್ವಲ್ಪವೂ ನಷ್ಟಹೋಗದೆ ದೊಡ್ಡ ಶಕ್ತಿಪರರಾಗಿದ್ದಾರೆ. ಈ ಕಾಲದಲ್ಲಿ ಚರ್ಮಯೊಂದರ ಪ್ರತ್ಯೇಕತೆ ತಿಳಿಯದವರು ಚರ್ಮಗಳಿಂದ ಅವಶ್ಯಕತೆ ಏನಿದೆ? ಎಂದು ವಾದಿಸುತ್ತಿದ್ದಾರೆ. ಅವಶ್ಯಕತೆ ಇಲ್ಲದೆ ಗೀತೆಯಲ್ಲಿ ಆತ್ಮ ಸಂಯಮ ಯೋಗದಲ್ಲಿ ಯೋಗಿ ಜಿಂಕೆ ಚರ್ಮದ ಮೇಲೆ ಕುಳಿತುಕೊಳ್ಳಬೇಕೆಂದು ಭಗವಂತನು ಏಕೆ ಹೇಳಿದ್ದಾನೆ? ಈ ಕಾಲದಲ್ಲಿ ಯೋಗದಂಡಗಳು, ಜಿಂಕೆ ಚರ್ಮಗಳು ನಾಗರಿಕತೆ ಇಲ್ಲದ ಪುರಾತನಕಾಲದ ಪದ್ಧತಿಗಳೆಂದು ಎನ್ನುವವರೂ

ಸಹ ಇದ್ದಾರೆ. ಪುತಾತನಕಾಲ ಪದ್ಧತಿಗಳಿಂದ ಪುರಾತನ ಕಾಲದವರು ಹೇಳಿದ ಮಾತುಗಳಿಗೆ ಪ್ರಕೃತಿಯೇ ತಲೆಕೆಳಗಾಗುವಷ್ಟು ಕೆಲಸ ನಡೆಯುತ್ತಿತ್ತು. ಆದರೆ ಹೊಸ ಕಾಲದಲ್ಲಿ ಹೊಸ ಪದ್ಧತಿಗಳ ಮೂಲಕ ಇವರು ಸಾಧಿಸಿರುವುದೇನೋ ತಿಳಿಯದಂತೆ ಇದೆ. ಶಿವನು ಚರ್ಮವನ್ನು ಯಾವಾಗಲು ತನ್ನ ಸೊಂಟಕ್ಕೆ ಸುತ್ತಿಕೊಳ್ಳುತ್ತಿದ್ದನು. ವಶಿಷ್ಠನು, ವಿಶ್ವಾಮಿತ್ರನು ಮೊದಲಾದ ಮಹಾಮುನಿಗಳು ಚರ್ಮವನ್ನು, ಯೋಗದಂಡವನ್ನು ಪಕ್ಕದಲ್ಲಿಯೇ ಇಟ್ಟುಕೊಂಡು ಎಷ್ಟೋ ಭದ್ರವಾಗಿ ನೋಡಿ ಕೊಳ್ಳುತ್ತಿದ್ದರು. ಆದರೆ ಈ ಕಾಲದಲ್ಲಿ ಅಷ್ಟು ಪವಿತ್ರವಾದ ವಸ್ತುಗಳು ಸ್ವಲ್ಪವೂ ಮಾನವರಲ್ಲಿ ಬೆಲೆ ಇಲ್ಲದಂತೆ ಹೋಗಿವೆ ಎಂದರೆ ಮಾನವನು ಕೆಳಮಟ್ಟಕ್ಕೆ ಹೋಗುತ್ತಿದ್ದಾನೆ ಎಂಬ ಮಾತು.

ಯೋಗ ಶಕ್ತಿಯನ್ನು ನಿರೋಧಿಸುವುದಕ್ಕೆ ಒಂದು ಜಿಂಕೆ ಚರ್ಮವೇನಾ ಕೆಲಸಕ್ಕೆ ಬರುವುದು ಅನ್ನುವ ಪ್ರಶ್ನೆ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ? ಯೋಗಿ ಶರೀರಕ್ಕೆ ಇತರ ಯಾವ ಜೀವರಾಶಿ ಶರೀರ ಚರ್ಮವಾದರು ಶಕ್ತಿಯನ್ನು ನಿರೋಧಿಸುವ ಬಲ ಹೊಂದಿರುತ್ತದೆ. ಆ ಚರ್ಮ ಸಜೀವವಾಗಿ ಯಾದರು ಇರಬಹುದು ಅಥವಾ ನಿರ್ಜೀವವಾಗಿಯಾದರು ಇರಬಹುದು. ಆದ್ದರಿಂದಲೇ ಪೂರ್ವದಲ್ಲಿ ಶಿವನು ಒಂದೊಂದುಸಲ ಆನೆ ಚರ್ಮವನ್ನು ಧರಿಸುತ್ತಿದ್ದನು, ಮತ್ತು ಹುಲಿ ಚರ್ಮವನ್ನೂ ಸಹ ಧರಿಸುತ್ತಿದ್ದನು, ಇನ್ನೂ ಜಿಂಕೆ ಚರ್ಮವನ್ನು ಸಹ ಧರಿಸುತ್ತಿದ್ದನು. ಇದರಿಂದ ಯಾವ ಜೀವರಾಶಿ ಚರ್ಮವಾದರು ಒಂದೇ ಎನ್ನುವಮಾತು ತಿಳಿಯುತ್ತಿದೆ. ಕ್ರೈಸ್ತ ಮತಕರ್ತನಾದ ಏಸುಪ್ರಭುವಿನ ಗುರುಗಳಾದ ಯೋಹಾನ್ ಒಂಟೆ ಚರ್ಮವನ್ನು ಧರಿಸುತ್ತಿದ್ದನು. ಶ್ರೀ ಮಹಾವಿಷ್ಣು ಬದುಕಿದ ಹಾವಿನ ಮೇಲೆ ಎಡಗೈ ಮೇಲೆ ಮತ್ತು ಬಲಗೈಮೇಲೆ ಪವಳಿಸುತ್ತಾ ಸೂರ್ಯಚಂದ್ರನಾಡಿಗಳನ್ನು ಬದಲಾಯಿಸುತ್ತಾ ಯೋಗ ಮಾಡಿದಂತೆ ತಿಳಿಯುತ್ತಿದೆ. ಹಾವಿನ ಮೇಲೆ ಪವಳಿಸಿದ್ದಾನಾದ್ದರಿಂದ ಹಾವಿನ ಚರ್ಮ ಶಕ್ತಿಯನ್ನು ನಿರೋಧಿಸುತ್ತದೆ. ಹೀಗೆ ಪರಿಶೀಲಿಸಿದರು ಸಜೀವಿಗಳಾದರು ಸರಿ ಇಲ್ಲವೇ ನಿರ್ಜೀವಿಗಳಾದರೂ ಸರಿ ಚರ್ಮ ತಪ್ಪದೆ ಇರಬೇಕೆಂದು

ತಿಳಿಯುತ್ತಿದೆ. ಆದರೆ ಈ ಕಾಲದಲ್ಲಿ ನಾವು ಅಹಂಕಾರ ಯುಕ್ತರಾಗಿ ಎಲ್ಲವೂ ತಿಳಿದಿದೆಯೆನ್ನುತ್ತಾ, ಯಾರಾದರು ಹೇಳಿದರು ಅದನ್ನು ಹೇಳನಮಾಡುತ್ತಾ ಅಧೋಗತಿಪಾಲಾಗುತ್ತಿದ್ದೇವೆ. ವಿಷ್ಣು, ಈಶ್ವರ, ಮಹರ್ಷಿಗಳಿಗಿಂತ ನಾವು ದೊಡ್ಡವರಾ! ದೃಷ್ಟಿಯಿಲ್ಲದ ಕುರುಡನು ಹೋಗಿ ಗುಣಿಯಲ್ಲಿ ಬಿದ್ದಂತೆ ಜ್ಞಾನದೃಷ್ಟಿ ಇಲ್ಲದ ಮಾನವರು ಮಾಯೆ ಎಂಬ ಗುಣಿಯಲ್ಲಿ ಬಿದ್ದು, ಅದರಲ್ಲಿ ಮುಳುಗಿ ತೇಲಿ ಪ್ರತಿ ದಿನ ಪ್ರತಿಯೊಬ್ಬನು ಮಾಡುವ ಕೆಲಸಗಳನ್ನೇ ಮಾಡುತ್ತಾ, ಸ್ವಲ್ಪವೂ ಪರಮಾತ್ಮ ಮಾರ್ಗವನ್ನು ಗುರುತಿಸದೆ ಇದ್ದಾರೆ. ತಿಳಿಯದಿರುವುದನ್ನು ತಿಳಿಸಿದವನು, ಕಾಣಿಸದಿರುವುದನ್ನು ತೋರಿಸಿದವನು, ಅಜ್ಞಾನದಲ್ಲಿ ಜ್ಞಾನವನ್ನು ಕೊಟ್ಟವನು, ಕತ್ತಲಲ್ಲಿ ದೀಪವಾಗಿ ಬಂದವನು "ಗುರು" ಎಂದು ನಂಬಿ ಗುರು ಸೇವೆಯಲ್ಲಿ ಜೀವನವನ್ನು ಸಾರ್ಥಕತೆ ಮಾಡಿಕೊಂಡು, ಜ್ಞಾನದೃಷ್ಟಿಯನ್ನು ಸಂಪಾದಿಸಿಕೊಂಡು ಸರ್ವಜ್ಞನು ಆಗಬೇಕೆಂದು ಕೋರುತ್ತಿದ್ದೇನೆ.

# ಆಶ್ರಮಗಳು

ಈಗ ಆಶ್ರಮಗಳ ಬಗ್ಗೆ ತಿಳಿಸುತ್ತಿದ್ದೇನೆ. ಇದರಲ್ಲಿ ತಿಳಿಸುವ ವಿಷಯಗಳು ಎಲ್ಲರಿಗೂ ಅಲ್ಲದೆ ಸ್ವಲ್ಪಜನ ಆಶ್ರಮವಾಸಿಗಳಿಗೆ ವಿರುದ್ಧವಾಗಿ ಕಾಣಿಸಬಹುದು. ಅವರಿಗೆ ನನ್ನಮೇಲೆ ಸಹ ಆಗ್ರಹ ಬರಬಹುದು. ಇದರಲ್ಲಿ ನನ್ನ ತಪ್ಪು ಏನಿದೆ? ಇದರ ವಿಷಯವಾಗಿ ನಾನು ಮಾತ್ರ ಜವಾಬ್ದಾರಿಯಲ್ಲ. ನನಗೆ ಏನು ತಿಳಿದಿಲ್ಲ. ಈ ಗ್ರಂಥವೆಲ್ಲವೂ ಆತ್ಮ ಪ್ರೇರೇಪಿತದಿಂದ ಬರೆಯುತ್ತಿದ್ದೇವೆ. ಆದರೆ ಬರೆಯುವುದು ನಾನು ಎಷ್ಟುಮಾತ್ರ ಅಲ್ಲ. ಆದ್ದರಿಂದ ನನ್ನನ್ನು ದೂಷಿಸಿದರು, ಹೊಗಳಿದರು ಮತ್ತು ಇದರಿಂದ ಬರುವ ಕೀರ್ತಿ ಅಪಕೀರ್ತಿಗಳೆಲ್ಲವೂ ನನ್ನ ತಂದೆಯಾದ ಪರಮಾತ್ಮನಿಗೆ ಮತ್ತು ನನ್ನ ಸೋದರನಾದ ಆತ್ಮನಿಗೆ ಸೇರುತ್ತದೆ.

ಈ ಕಾಲದಲ್ಲಿ ಭೂಮಿಮೇಲೆ ಸ್ವಲ್ಪಜನ ಭಕ್ತಾಗ್ರಗಣ್ಯರು ಆಶ್ರಮಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಅದರಲ್ಲಿ ಕೆಲವು ಆಶ್ರಮಗಳು ಹೊರಗಿನ ಪ್ರಪಂಚದಲ್ಲಿ

ಹೆಸರು ಪ್ರಖ್ಯಾತಿಗಳು ಇಲ್ಲದಿದ್ದರು ಎಷ್ಟೋ ಪವಿತ್ರತೆ ಹೊಂದಿವೆ. ಮತ್ತೆ ಕೆಲವು ಪ್ರಪಂಚದಲ್ಲಿ ಹೆಸರು ಪ್ರಖ್ಯಾತಿಗಳು ಸಂಪಾದಿಸಿಕೊಂಡರೂ ಪವಿತ್ರತೆ ಸ್ವಲ್ಪವೂ ಇಲ್ಲದಂತೆ ಇವೆ. ಇನ್ನು ಕೆಲವು ಆಶ್ರಮಗಳು ವಿಗ್ರಹ ಪ್ರತಿಷ್ಠೆಗಳಿಂದ ತುಂಬಿಕೊಂಡು ಇದು ದೇವಾಲಯವಾ ಅಥವಾ ಆಶ್ರಮವಾ ಅನ್ನುವ ಅನುಮಾನವನ್ನು ಉಂಟುಮಾಡುತ್ತಿವೆ. ಇನ್ನು ಕೆಲವು ಆಶ್ರಮಗಳು ಇದು ಗುಡಿಯಾ, ಶಾಲೆಯಾ ಅಥವಾ ಆಶ್ರಮವಾ ಎನ್ನುವ ಅನುಮಾನವೂ ಸಹ ಉಂಟುಮಾಡುತ್ತಿವೆ. ಇವು ಎಲ್ಲವನ್ನು ಗ್ರಹಿಸುತ್ತಾಹೋದರೆ ಇನ್ನು ಸ್ವಲ್ಪ ಕಾಲಕ್ಕೆ ಆಶ್ರಮಗಳ ಸ್ಥಿತಿ ಹೇಗೆ ಬದಲಾಗುತ್ತದೊ ಅರ್ಥವಾಗುತ್ತಿಲ್ಲ.

ಪೂರ್ವಕಾಲದಲ್ಲಿ ಭಕ್ತರು ಸ್ವಲ್ಪಕಾಲ ಭೂಮಿ ಮೇಲೆ ಆಶ್ರಮಗಳು ಸೃಷ್ಟಿಸಿಕೊಂಡಿದ್ದರು. ಅವರು ಪರಮ ಪವಿತ್ರರಾಗಿ ಇದ್ದು, ತಾವು ವಾಸಿಸುವ ಸ್ಥಳವೂ ಸಹ ಪವಿತ್ರಸ್ಥಳ ಅನ್ನುವ ಹೆಸರು ಬರುವಂತೆ ಮಾಡಿದರು, ಅಂತಹ ಆಶ್ರಮಗಳನ್ನು ವಿಶಧೀಕರಿಸಿ ನೋಡಿದರು ಅಂದು ಅವರು ಯೋಗಸಾಧನೆಗಾಗಿ ವಿನಿಯೋಗಿಸಲ್ಪಟ್ಟ ವಸ್ತುಗಳಾದ ಚರ್ಮಾಸನಗಳನ್ನು, ಯೋಗ ದಂಡಗಳನ್ನು ಎಷ್ಟೋ ಭದ್ರವಾಗಿ ಇಟ್ಟುಕೊಳ್ಳುತ್ತಿದ್ದರು. ಈ ಕಾಲದಲ್ಲಿ ನೋಡಿದರೆ ಆಶ್ರಮಗಳಲ್ಲಿ ಅವು ಎಲ್ಲೂ ಕಾಣಿಸುವುದಿಲ್ಲ. ಒಂದುವೇಳೆ ಕಾಣಿಸಿದರೂ ನೋಡುವುದಕ್ಕೋಸ್ಕರ ಅವುಗಳನ್ನು ಆಶ್ರಮಗಳಲ್ಲಿ ಇಟ್ಟುಕೊಂಡಿರುತ್ತಾರೆ ಯಾವಕಾರಣಕ್ಕು ಉಪಯೋಗಿಸುವುದಿಲ್ಲ. ಪೂರ್ವಕಾಲದ ಆಶ್ರಮಗಳಲ್ಲಿ ದೇವತಾ ಪ್ರತಿಷ್ಠೆಗಳಾಗಲಿ, ದೇವತಾ ಫೋಟೋಗಳಾಗಲಿ ಲ್ಲೂ ಕಾಣಿಸುತ್ತಿರಲಿಲ್ಲ. ಈ ಕಾಲದಲ್ಲಿ ದೇವತಾ ಪ್ರತಿಮೆಗಳನ್ನು ಆಶ್ರಮಗಳಲ್ಲಿ ಪ್ರತಿಷ್ಠಾಪಿಸಿದ್ದಾರೆ ಮತ್ತು ದೇವತಾ ಫೋಟೋಗಳು ಅನೇಕ ಆಶ್ರಮಗಳಲ್ಲಿ ಇಟ್ಟಿದ್ದಾರೆ. ಪೂರ್ವಕಾಲದಲ್ಲಿ ಬ್ರಹ್ಮವಿದ್ಯೆಯನ್ನು ಕಲಿತು, ಅದರ ಮೂಲಕ ಸಾಧನೆಮಾಡಿ, ಬ್ರಹ್ಮನನ್ನು ತಿಳಿದುಕೊಂಡವರು ಇದ್ದರೆ, ಈ ಕಾಲದಲ್ಲಿ ಪ್ರಾಪಂಚಿಕ ವಿದ್ಯೆ ಆದ ಸಂಸ್ಕೃತವನ್ನು ಚೆನ್ನಾಗಿ ಕಲಿತು, ಪದಗಳಿಗೆ ಅರ್ಥಗಳು ಹೇಳುವುದು ತಿಳಿದುಕೊಂಡಿದ್ದಾರೆ. ಬ್ರಹ್ಮವಿದ್ಯೆಯನ್ನು ತಿಳಿಯದಿದ್ದರೂ ಸಂಸ್ಕೃತ ತಿಳಿದುಕೊಂಡರೆ ಸಾಕು ಆಶ್ರಮಗಳಲ್ಲಿ ಸ್ವಾಮಿಗಳಾಗಿ ಹೋಗುತ್ತಿದ್ದಾರೆ.

ಆಶ್ರಮಗಳು ಯಾವ ವಿಧವಾಗಿ ಇರಬೇಕೆಂದರೆ ಆಶ್ರಮಗಳಲ್ಲಿ ಬ್ರಹ್ಮವಿದ್ಯೆಯನ್ನು ಅಭ್ಯಸಿಸುವವರಾಗಲಿ, ಅಭ್ಯಸಿಸಿದ ಯೋಗಿಗಳಾಗಲಿ ಇರಬೇಕು. ಯೋಗದಂಡ, ಚರ್ಮಾಸನ ಯೋಗಕ್ಕೆ ಅವಶ್ಯವಿರುವ ವಸ್ತುಗಳಾದ್ದರಿಂದ ಅವು ತಪ್ಪದೆ ಇರಬೇಕು. ದೇವತೆಗಳನ್ನು ಪೂಜಿಸುವವರಾಗಲಿ, ದೇವತೆಗಳನ್ನು ಕುರಿತು ಬೋಧಿಸುವವರಾಗಲಿ ಇರಬಾರದು. ಪರಮಾತ್ಮನನ್ನು ತಿಳಿಯುತ್ತಿರುವ ವರಾಗಲಿ, ಪರಮಾತ್ಮ ವಿದ್ಯೆಯನ್ನು ತಿಳಿದುಕೊಂಡು ಬೋಧಿಸುತ್ತಿರುವವರಾಗಲಿ ಆಶ್ರಮಗಳಲ್ಲಿ ಇರಬೇಕು. ದೇವತಾ ಪ್ರತಿಮೆಗಳನ್ನಾಗಲಿ, ದೇವತಾಫೋಟೋ ಗಳನ್ನಾಗಲಿ ಆಶ್ರಮಗಳಲ್ಲಿ ಇಡಬಾರದು. ನಿರಾಕಾರನೇ ಸಾಕಾರನಾಗಿರುವ ಶ್ರೀಗುರುದೇವನ ಚಿತ್ರಗಳನ್ನು ಇಡಬಹುದು. ಗುರುವಿನ ಆಕಾರ ಚಿತ್ರಗಳು ಹೊರತು ಇತರ ಯಾವ ದೇವತಾ ಚಿತ್ರಗಳು ಆಶ್ರಮಗಳಲ್ಲಿ ಇರುವುದಕ್ಕೆ ಅನರ್ಹಗಳು. ಗೀತಾಶಾಸ್ತ್ರದ ವಿಜ್ಞಾನ ಯೋಗದಲ್ಲಿ **'ಪ್ರಕೃತಿ ಸಂಬಂಧಗಳಾಗುವ ಪಾಪಗಳಿಂದ ಕೋರಿಕೆಗಳಿರುವವರಾಗಿ ಅಜ್ಞಾನಿಗಳಾಗುತ್ತಾ ಅನ್ಯದೇವತಾರಾಧನೆ ಮಾಡುತ್ತಿದ್ದಾರೆ. ಅದರಿಂದ ಕಾಮ್ಯಾರ್ಥಸಿದ್ಧಿ ಲಭಿಸುತ್ತದಾಗಲಿ ಮೋಕ್ಷಸಿದ್ಧಿ ಮಾತ್ರ ಲಭಿಸುವುದಿಲ್ಲ. ಅಲ್ಪಬುದ್ಧಿಗಳಾದವರು ಪಡೆಯುವ ಫಲಿತವು ಸಹ ಅಷ್ಟಷ್ಟೇ ಇರುತ್ತದೆ. ದೇವತಾ ಭಕ್ತರೆಲ್ಲರೂ ದೇವತೆಗಳನ್ನು ಸೇರುತ್ತಾರೆ. ನನ್ನ ಭಕ್ತರು ನನ್ನನ್ನು ಸೇರುತ್ತಾರೆ."** ಎಂದು ಪರಮಾತ್ಮ ತಿಳಿಸಿದ್ದಾನೆ. ಆದ್ದರಿಂದ ದೇವತೆಗಳನ್ನು ಪೂಜಿಸಿದರೆ ಮೋಕ್ಷ ಎಂದಿಗೂ ಲಭಿಸುವುದಿಲ್ಲ. ಪರಮಾತ್ಮನನ್ನು ಆರಾಧಿಸಿದವರಿಗೇ ಮೋಕ್ಷ ಪ್ರಾಪ್ತಿಯಾಗುತ್ತದೆ. ಆಶ್ರಮದಲ್ಲಿ ಮೋಕ್ಷಕಾಮಿಗಳು ಇರಬೇಕು ಆದರೆ ಕಾರ್ಯಕಾಮಿಗಳು ಇರಬಾರದು. ಆಶ್ರಮಗಳು ನಿಶ್ಚಲಪರಬ್ರಹ್ಮ ನಿಲಯಗಳಿರುವಂತೆ ಇರಬೇಕು. ಆದರೆ ದೇವಾಲಯ ಗಳು ಇರುವಂತೆ ಇರಬಾರದು. ಆಶ್ರಮಗಳಲ್ಲಿರುವವರು ಇತರರಿಗೆ ದೇವದೇವ ನಾದ ಪರಮಾತ್ಮನನ್ನು ಕುರಿತು ಹೇಳಬೇಕು. ವಿಷ್ಣು, ಈಶ್ವರರೂ ಸಹ ಸೂರ್ಯ ಚಂದ್ರನಾಡಿಗಳನ್ನು ಅನುಸರಿಸುತ್ತಾ ಅಸಲಾದ ಪರಮಾತ್ಮನನ್ನು ಕುರಿತು ಎಲ್ಲವೇಳೆಯಲ್ಲಿ ಯೋಗ ಮಾಡುತ್ತಿರುವಾಗ, ನಾವು ಆಶ್ರಮಗಳಲ್ಲಿ ದೇವತಾ ಪೂಜೆಗಳು ಮಾಡುತ್ತಿದ್ದರೆ ಏನು ಚೆನ್ನಾಗಿರುತ್ತದೆ. ಮೋಕ್ಷ ಕೊಡುವುದಕ್ಕೆ

ಪರಮಾತ್ಮನೇ ದಿಕ್ಕೆಂದು ನಾವು ಎಲ್ಲವೇಳೆಯಲ್ಲಿ ಕಷ್ಟಪಟ್ಟು ಯೋಗ ಮಾಡುತ್ತಿರುವಾಗ, ನಮ್ಮನ್ನು ಮೋಕ್ಷ ಕೇಳುವವರು ಬುದ್ಧಿಹೀನರೆಂದು ಶಂಕರನು ಹೇಳಿದ್ದಾನೆ. ಪೂರ್ವಕಾಲದಲ್ಲಿ ಮೋಕ್ಷವನ್ನು ಕೋರುವವರು ಅಂದು ಸರಿಯಾದ ಆಚರಣೆ ಹೊಂದಿದ್ದು ಕೊನೆಗೆ ಮೋಕ್ಷವನ್ನು ಹೊಂದಿದ್ದಾರೆ, ಅದು ಸರಿಯಾದ ಪದ್ಧತಿ. ಹಾಗಲ್ಲದೆ ಈ ಕಾಲದಲ್ಲಿ ಆಶ್ರಮಗಳನ್ನು ಸೃಷ್ಟಿಸಿಕೊಂಡು, ದೇವತಾ ಪ್ರತಿಮೆಗಳನ್ನು ಅದರಲ್ಲಿ ಪ್ರತಿಷ್ಠಾಪಿಸಿಕೊಂಡು, ಅನುದಿನವು ಪೂಜೆಗಳು ಮಾಡುತ್ತಾ, ಮೋಕ್ಷ ಬೇಕೆಂದರೆ ಭಿಕ್ಷೆ ಬೇಡುವವರ ಹತ್ತಿರ ಹೋಗಿ ಭಿಕ್ಷೆ ಬೇಡಿದಂತೆ ಇರುತ್ತದೆ. ದೇವತೆಗಳೇ ಮೋಕ್ಷಕ್ಕೋಸ್ಕರ ಪರದಾಡುತ್ತಿರುವಾಗ ನಿನಗೆಲ್ಲಿಂದ ಕೊಡುತ್ತಾರೆ. ಅಜ್ಞಾನ ಪ್ರಜೆಗಳು ದೇವತೆಗಳನ್ನು ಪೂಜಿಸ ಬಹುದಾಗಲಿ, ಆಶ್ರಮವಾಸಿಗಳು ಸಹ ದೇವತೆಗಳನ್ನೇ ಪೂಜಿಸುತ್ತಿದ್ದರೆ ಅಜ್ಞಾನಿಗಳಿಗೂ ಆಶ್ರಮವಾಸಿಗಳಿಗೂ ಏನು ವ್ಯತ್ಯಾಸ ಇರುತ್ತದೆ? ಆದ್ದರಿಂದ ಆಶ್ರಮವಾಸಿಗಳು ದೇವತೆಗಳನ್ನು ಪೂಜಿಸದೆ ದೇವತೆಗಳಲ್ಲಿ ಸಹ ಚೈತನ್ಯವಾದ ಆತ್ಮವನ್ನು ಅದಕ್ಕೆ ಆಧಾರವಾದ ಪರಮಾತ್ಮನನ್ನೇ ನಂಬಬೇಕು. ದೇವತೆಗಳ ಭಕ್ತಿಯಲ್ಲಿ ಅಲ್ಲದೆ, ಆಧ್ಯಾತ್ಮಿಕ ವಿದ್ಯೆಯಲ್ಲಿ ಪ್ರಾವೀಣ್ಯತೆ ಹೊಂದಿರಬೇಕು.

**ಜೀವಿಯು ಮಾಯೆ ಅನ್ನುವ ಸಮುದ್ರದಲ್ಲಿ, ವಿಷಯಗಳು ಅನ್ನುವ ಮೊಸಳೆಗಳಿಂದ, ಹೆಂಡತಿಮಕ್ಕಳೆಂಬ ಕೋರೆ ಮೀನುಗಳಿಂದ, ಆಸ್ತಿ ಪಾಸ್ತಿಗಳು ಅನ್ನುವ ಅಲೆಗಳಿಂದ ದುಃಖಪಡುತ್ತಾ, ಸಮುದ್ರವನ್ನು ಈಜಲಾರದೆ ಮುಳುಗಿಹೋಗುವ ಸಮಯದಲ್ಲಿ, ನನ್ನನ್ನು ಯಾರೂ ಈ ಮಾಯ ಸಮುದ್ರದಿಂದ ರಕ್ಷಿಸುವವರು ಇಲ್ಲವೇ ಎಂದು ದುಃಖಿಸುವ ಸಮಯದಲ್ಲಿ ಹಡಗಿನಂತೆ ಕಾಣಿಸಿ, ಅವನನ್ನು ಮಾಯ ಸಮುದ್ರದಿಂದ ಕಾಪಾಡಿ ಆಶ್ರಯಕೊಡುವುದು ಆಶ್ರಮ.**

**ಅಜ್ಞಾನವೆನ್ನುವ ಕತ್ತಲಲ್ಲಿ ದಾರಿ ತಿಳಿಯದೆ ಅವಸ್ಥೆಗಳು ಬೀಳುತ್ತಾ, ಕಾಲವೆಂಬ ಸರ್ಪಕ್ಕೆ ಸಿಲುಕಿ ನಿಮಿಷ ನಿಮಿಷದಲ್ಲಿ ಅದರ ಬಾಧೆಯನ್ನು ಸಹಿಸಲಾರದೆ ಒದ್ದಾಡುವವನಿಗೆ ಆಶ್ರಯಕೊಡುವುದು ಆಶ್ರಮ, ಅಜ್ಞಾನಾಂಧಕಾರವನ್ನು ಇಲ್ಲದಂತೆ ಮಾಡಿ ಕಾಲಸರ್ಪದಿಂದ ಬಿಡಿಸುವವರು ಆಶ್ರಮವಾಸಿಗಳು.**

ಶರೀರ ರೋಗಗಳನ್ನು ಗುಣಪಡಿಸುವುದಕ್ಕೆ ವೈದ್ಯಶಾಲೆಗಳು, ಆ ವೈದ್ಯಶಾಲೆಗಳಲ್ಲಿ ಡಾಕ್ಟರ್‌ಗಳು ಇದ್ದಂತೆ, ಪಾಪಪುಣ್ಯಗಳೆಂಬ ಭವರೋಗಗಳನ್ನು ಗುಣಪಡಿಸುವ ಸಲುವಾಗಿ ಆಶ್ರಮಗಳು, ಆ ಆಶ್ರಮಗಳಲ್ಲಿ ಆಶ್ರಮವಾಸಿಗಳು ಇರುತ್ತಾರೆ. ಪ್ರಾಪಂಚಿಕ ವಿದ್ಯೆ ಕಲಿಸುವುದಕ್ಕಾಗಿ ಪಾಠಶಾಲೆಗಳು, ಅದರಲ್ಲಿ ಉಪಾಧ್ಯಾಯರು ಇರುವಂತೆ, ಪರಮಾತ್ಮ (ಬ್ರಹ್ಮ) ವಿದ್ಯೆಯನ್ನು ಕಲಿಸುವ ಸಲುವಾಗಿ ನೆಲೆಗೊಂಡಿರುವವಾಗಿ ಆಶ್ರಮಗಳು ಇರಬೇಕು. ಮತ್ತು ಆಶ್ರಮವಾಸಿಗಳು ಬ್ರಹ್ಮವಿದ್ಯೆಯನ್ನು ಸರಿಯಾಗಿ ಕಲಿಸುವವರಾಗಿರಬೇಕು.

ಬ್ರಹ್ಮವಿದ್ಯೆಗೆ ಪ್ರಾಣವಾಯುವು ಆಶ್ರಮಗಳು, ಆಶ್ರಮವಾಸಿಗಳೇ ಆದ್ದರಿಂದ ಇಷ್ಟಾಗಿ ತಿಳಿಸಬೇಕಾಗಿದೆ. ಇದರ ಬಗ್ಗೆ ಯಾರು ತಪ್ಪಾಗಿ ಭಾವಿಸಬಾರದೆಂದು ಕೋರುತ್ತಿದ್ದೇನೆ.

# ಗುರುಬೋಧನೆಯ ಅವಶ್ಯಕತೆ

ಗುರು ಅನ್ನುವ ಪದವೇ ಅಪಾರವಾದುದು, ಮತ್ತು ಅನಂತಶಕ್ತಿ ಮಯವಾದುದು. ಗುರುಪದವು ಪ್ರಪಂಚದಲ್ಲಿ ಯಾವ ಮಾನವನ ಮೇಲೆ ವಾಲಿದೆಯೊ ಆತನೇ ಸಾಕಾರ ಗುರು. ಗುರುವು ತನ್ನ ರೂಪವನ್ನೇ ಬೋಧಿಸುತ್ತಾನೆ. ತನ್ನನ್ನೇ ಅನುಸರಿಸೆನ್ನುತ್ತಾನೆ, ತನ್ನೊಳಗೆ ಸೇರಿಸಿಕೊಳ್ಳುತ್ತಾನೆ. ಗುರುವನ್ನು ಕುರಿತು ತಿಳಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಆತನು ಊಹೆಗೆ ಸಿಗದವನು. ಅಂತಹ ಗುರುವೊಂದರ ಸಾಕಾರದಿಂದ ಎಂದಾದರೆ ಜೀವಿಯು ಶಕ್ತಿಯನ್ನು ಪಡೆಯುತ್ತಿದ್ದಾನೋ ಆ ಸಮಯದಿಂದಲೇ ನಿರಾಕಾರದಿಂದ ಶಕ್ತಿ ತನ್ನೊಳಗೆ ಪ್ರವಹಿಸುವುದಕ್ಕೆ ಪ್ರಾರಂಭಿಸುತ್ತದೆ. ಹಾಗೆ ಸಾಕಾರದಿಂದ ಬೋಧನೆ (ಉಪದೇಶ) ಇಲ್ಲವೇ ಬಾಪ್ತಿಸ್ಮ ಇಲ್ಲದೆ ನಿರಾಕಾರದಿಂದ ಶಕ್ತಿ ಜೀವಿಯೊಳಗೆ ಬರುವುದಿಲ್ಲ. ಏಕೆಂದರೆ ಸಾಕಾರವೇ ನಿರಾಕಾರ, ನಿರಾಕಾರವೇ ಸಾಕಾರ. ಜೀವಿಯು ಸಾಕಾರದಲ್ಲಿ ಇದ್ದಾನೆ ಆದ್ದರಿಂದ ನಿರಾಕಾರನಾದ ಸಾಕಾರ ಗುರುವನ್ನು

ಆಶ್ರಯಿ ಸಬೇಕಾಗಿದೆ. ಗುರುವನ್ನು ಆಶ್ರಯಿಸಿ ನಾಲ್ಕು ವಿಧಗಳ ಸೇವೆಗಳು ಮಾಡುತ್ತಾ ಗುರುಗಳ ಹತ್ತಿರ ವಿನಯ ಇರುವವನಾಗಿ ನಡೆದುಕೊಳ್ಳುತ್ತಿದ್ದರೆ ಯಾವಾಗಲೋ ಒಂದುಸಲ ಗುರುವಿಗೆ ಶಿಷ್ಯನ ಮೇಲೆ ಶ್ರದ್ಧೆಹೊಂದಿ ತನ್ನ ಜ್ಞಾನದೃಷ್ಟಿಯನ್ನು ಪ್ರಸಾರಮಾಡುತ್ತಾನೆ. ಅದರಿಂದ ಶಿಷ್ಯನ ಹೃದಯದಲ್ಲಿ ಜ್ಞಾನಬೀಜ ಏರ್ಪಟ್ಟು ಅದು ಬೆಳೆದು ಮೋಕ್ಷ ಅನ್ನುವ ಫಲವನ್ನು ಕೊಡುತ್ತದೆ.

ಸಂಪೂರ್ಣವಾದ ವಿಶ್ವಾಸವಿಟ್ಟು ಶಿಷ್ಯನು ಗುರುವನ್ನು ಸೇವಿಸುತ್ತಿದ್ದರೂ, ಸರ್ವವು ತಿಳಿದ ಗುರು ಶಿಷ್ಯನ ನಂಬಿಕೆಯನ್ನು ಗುರುತಿಸಿ, ಇವನಿಗೆ ಉಪದೇಶ ಕೊಟ್ಟರೂ ಅದನ್ನು ಸರಿಯಾದ ಪದ್ಧತಿಯಲ್ಲಿ ಸಾಧಿಸುತ್ತಾನಾ ಇಲ್ಲವಾ? ಎಂದು ತಿಳಿದುಕೊಂಡು ಅವನು ಅರ್ಹತೆ ಹೊಂದಿದವನಾದರೆ ತಕ್ಷಣ ಉಪದೇಶ ಕೊಡುತ್ತಾನೆ ಆ ಉಪದೇಶ ಸಮಯದಲ್ಲಿ ಕಣ್ಣೋಟಕ್ಕೆ ಕಾಣಿಸದಂತೆ ಏನು ನಡೆಯುತ್ತಿದೆ ಎಂದರೆ! ಗುರುವು ಸಂಪೂರ್ಣ ಶಕ್ತಿ ಕೇಂದ್ರ. ಉಪದೇಶ ಸಮಯದಲ್ಲಿ ಗುರುವಿನಿಂದ ಜ್ಞಾನಶಕ್ತಿ ಹೊರಟು ಶಿಷ್ಯನಲ್ಲಿ ಪ್ರವೇಶಿಸುತ್ತದೆ. ಅಲ್ಲಿವರೆಗೂ ಆತನಲ್ಲಿ ಪ್ರವೇಶಿಸದ ಹೊರಗಿನ ಶಕ್ತಿ ಗುರೋಪದೇಶದಿಂದ ತಕ್ಷಣ ಒಳಗೆ ಪ್ರವೇಶಿಸುತ್ತದೆ. ಆಗ ಪ್ರಾರಂಭಗೊಂಡು ಶಿಷ್ಯನು ಯೋಗ ಆಚರಿಸುವ ವೇಳೆಗಳ ಆತನಲ್ಲಿ ಶಕ್ತಿ ಪ್ರವೇಶಿಸುತ್ತಲೇ ಇರುತ್ತದೆ. ಶಿಷ್ಯನು ಯೋಗ ಆಚರಿಸಿದಂತೆಲ್ಲ ಆತನಲ್ಲಿ ಯೋಗಶಕ್ತಿ ವೃದ್ಧಿಯಾಗುತ್ತದೆ. ಹಾಗಲ್ಲದೆ ಗುರುವನ್ನು ಆಶ್ರಯಿಸದೆ, ಶಾಸ್ತ್ರಗಳಿಂದ ವಿಷಯಗಳು ತಿಳಿದುಕೊಂಡು, ಎಲ್ಲಾ ತಿಳಿದಿವೆ ಇನ್ನು ಗುರುವೇತಕ್ಕೆ ಎನ್ನುತ್ತಾ, ತಿಳಿಯದವರಿಗೆ ನಾನು ತಿಳಿಸುತ್ತೇನೆ ಎನ್ನುತ್ತಾ ಯಾವಾಗಾದರೆ ಗುರೂಪದೇಶ ಇಲ್ಲದಂತೆ ಯೋಗ ಮಾಡುತ್ತಾನೋ, ಅವನಲ್ಲಿ ಯೋಗಶಕ್ತಿ ಅಣುಮಾತ್ರ ಸಹ ಪ್ರವೇಶಿಸುವುದಿಲ್ಲ. ಯೋಗಶಕ್ತಿಯನ್ನು ಮೊದಲು ತನ್ನಲ್ಲಿ ಪ್ರವೇಶಿಸುವುದಕ್ಕೆ ಮೊದಲು ತಪ್ಪದೆ ಗುರು ಅಗತ್ಯ. ಅಗ್ನಿಯಿಲ್ಲದ ಒಲೆಯಲ್ಲಿ ಎಷ್ಟು ಊದಿದರು ಕಟ್ಟಿಗೆಗಳು ಚಿಕ್ಕವಾಗಲಿ ಅಥವಾ ದೊಡ್ಡವಾಗಲಿ ಹೊತ್ತಿಕೊಂಡು ಉರಿಯುವುದಿಲ್ಲ. ಮೊದಲು ಇತರರ ಹತ್ತಿರದಿಂದ ಅಗ್ನಿಯನ್ನು ಸಂಪಾದಿಸಿ ತನ್ನ ಒಲೆಯಲ್ಲಿ ಹಾಕಿಕೊಂಡು, ಆ ಅಗ್ನಿಯನ್ನೇ ಊದುತ್ತಿದ್ದರೆ ಅದು ದೊಡ್ಡದಾಗಿ ಪ್ರಜ್ವಲಿಸಿ ಎಷ್ಟು ದೊಡ್ಡ ಮೊದ್ದುಗಳನ್ನಾದರು ಸುಡುವುದಕ್ಕೆ

ಸಾಮರ್ಥ್ಯ ಹೊಂದುತ್ತದೆ. ಆದ್ದರಿಂದ ಜ್ಞಾನಾಗ್ನಿಯನ್ನು ನೀನು ಗುರು ಹತ್ತಿರದಿಂದಲೇ ಪಡೆಯಬೇಕು. ಅನಂತರ ನೀನು ಸಾಧನೆ ಮಾಡುತ್ತಿದ್ದರು ಜ್ಞಾನಾಗ್ನಿ ನಿನ್ನಲ್ಲಿ ಹೆಚ್ಚಾಗಿ ಪ್ರವೇಶಿಸಿ ಎಷ್ಟು ದೊಡ್ಡ ಕರ್ಮಗಳನ್ನಾದರು ಸುಡುವುದಕ್ಕೆ ಸಾಧ್ಯವಾಗುತ್ತದೆ. ಸ್ವಲ್ಪಜನ ಗುರೋಪದೇಶ ಸಂಪಾದಿಸಿಕೊಂಡು ಇನ್ನು ಸಾಕು ನಾವು ಧನ್ಯರು ಎಂದು ಸಾಧನೆ ಮಾತ್ರ ಮಾಡದಂತಿದ್ದಾರೆ. ಅವರ ವಿಷಯ ಹೇಗೆಂದರೆ ಪಕ್ಕದವರ ಹತ್ತಿರದಿಂದ ಅಗ್ನಿತಂದುಕೊಂಡು ನಮ್ಮ ಒಲೆಯಲ್ಲಿ ಹಾಕಿಕೊಂಡ ನಂತರ ಅದನ್ನು ಊದದಿದ್ದರೆ ಸ್ವಲ್ಪ ಸಮಯಕ್ಕೆ ಇರುವ ಅಗ್ನಿಯೂ ಸಹ ನಂದಿ ಹೋಗುತ್ತದೆ. ಹಾಗೆಯೇ ಗುರುಬೋಧನೆ ಸಂಪಾದಿಸಿ ಸಾಧನೆ ಮಾಡದಂತೆ ಇದ್ದರೆ ಗುರು ಕೊಟ್ಟಿರುವ ಜ್ಞಾನವೆನ್ನುವ ಅಗ್ನಿ ಸ್ವಲ್ಪ ಕಾಲಕ್ಕೆ ಅವರಲ್ಲಿ ಸ್ವಲ್ಪವೂ ಇಲ್ಲದಂತೆ ಹೋಗುತ್ತದೆ. ಮೊದಲು ಗುರುಬೋಧನೆ ತಪ್ಪದೆ ಅಗತ್ಯ, ಆ ನಂತರ ಯೋಗಸಾಧನೆ ಸಹ ಅಗತ್ಯ.

ಕೆರೆಯಲ್ಲಿನ ನೀರು ಹೊಲದೊಳಗೆ ಹೋಗಬೇಕೆಂದರೆ ತೂಬಿನ ಮೂಲಕವೆ ಹೋಗಬೇಕು. ಆದರೆ ಬೇರೆ ಮಾರ್ಗ ಇರುವುವಿಲ್ಲ. ಹಾಗೆಯೇ ಜ್ಞಾನ ಕೇಂದ್ರವಾದ ಗುರುವಿನಲ್ಲಿನ ಜ್ಞಾನಶಕ್ತಿ ಶಿಷ್ಯನೊಳಗೆ ಹೋಗಬೇಕೆಂದರೆ ಗುರುಬೋಧನೆಯಿಂದಲೇ ಹೋಗಬೇಕಾಗಲಿ ಬೇರೆ ಮಾರ್ಗವಿಲ್ಲ. ಕೆರೆಯಲ್ಲಿನ ನೀರು ಹೊಲದೊಳಗೆ ಬಂದರೇನೆ ಪೈರು ಬೆಳೆಯುತ್ತದೆ. ಹಾಗೆ ಗುರುವಿನಲ್ಲಿನ ಜ್ಞಾನಶಕ್ತಿ ನಿನ್ನೊಳಗೆ ಬಂದರೇನೆ ಸಾಧನೆ ಫಲಿಸುತ್ತದೆ. ಹಾಗಲ್ಲದೆ ನೀರಿಲ್ಲದ ಹೊಲದಲ್ಲಿ ಕಷ್ಟಪಟ್ಟರು ಫಲವಿಲ್ಲದಂತೆ, ಗುರುಬೋಧನೆ ಇಲ್ಲದ ಶರೀರದಲ್ಲಿ ಯೋಗಶಕ್ತಿ ಅಭಿವೃದ್ಧಿ ಆಗುವುದಿಲ್ಲ. ಆದ್ದರಿಂದಲೇ ಪ್ರಪಂಚದಲ್ಲಿ ಪ್ರತಿ ಜೀವಿಗೆ ಗುರುಬೋಧನೆಯ ಅವಶ್ಯಕತೆ ಎಷ್ಟೋ ಇದೆ. ವಾಸ್ತವ ತಿಳಿದುಕೊಂಡು ತನ್ನಲ್ಲಿರುವ ಅಹಂಕಾರ ಬಿಟ್ಟು, ಗುರುವನ್ನು ಆಶ್ರಯಿಸಿ, ಜ್ಞಾನಶಕ್ತಿ ಹೊಂದಿ, ಸರಿಯಾದ ಸಾಧನೆ ಮಾಡಿ, ನೀವೂ ಸಹ ದಡಸೇರಬೇಕೆಂದು ಕೋರುತ್ತಿದ್ದೇನೆ.

# ಈಗಿನ ಕಾಲದಲ್ಲಿ ಗುರುಗಳ ಅವಸ್ಥೆ

**(ಬೋಧಕನನ್ನು ಗುರುವೆಂದು ಹೇಳಿದರೂ ಪರವಾಗಿಲ್ಲ. ಗುರುವನ್ನು ಬೋಧಕನೆಂದು ಹೇಳಬಾರದು.)**

ಗುರುವು ಎನ್ನುವವನು ಅಪರೂಪವಾಗಿ ಕೆಲವು ಸಾವಿರ ವರ್ಷಗಳಿಗೊಂದು ಸಲ ಭೂಮಿ ಮೇಲೆ ಬರುತ್ತಾನೆ. ಆದ್ದರಿಂದ ಎಲ್ಲಾವೇಳೆಯಲ್ಲಿ ಭೂಮಿಮೇಲೆ ಗುರು ಇರುವುದಿಲ್ಲ. ಎಲ್ಲಾವೇಳೆಯಲ್ಲಿ ಬೋಧಕರು ಭೂಮಿಮೇಲೆ ಇರುತ್ತಾರೆ. ಬೋಧಿಸುವವರೆಲ್ಲರೂ ಗುರುಗಳು ಅಲ್ಲ, ಬೋಧಕರೆ ಆಗುತ್ತಾರೆ. ಭೂಮಿಮೇಲೆ ಗುರು ಇರುವಾಗ ಗುರು ಬೋಧಕರಲ್ಲಿ ಬೆರೆತುಹೋಗಿ ಈತನು ಗುರು ಎಂದು ಗುರುತಿಸುವುದಕ್ಕೆ ಸಾಧ್ಯವಿಲ್ಲದಂತೆ ಇರುತ್ತಾನೆ. ಮನುಷ್ಯ ತನಗೆ ಬೋಧಿಸುವವರಲ್ಲಿ ಯಾರು ಗುರು ಎಂದು ಗುರುತಿಸಲಾರದ ಪರಿಸ್ಥಿತಿಯಲ್ಲಿ ಇದ್ದಾನೆ. ಅಂತಹದರಲ್ಲಿ ಬೋಧಕರೆನ್ನುವ ಎಲ್ಲರನ್ನು ಗುರುವಾಗಿ ಲೆಕ್ಕಿಸಿಕೊಳ್ಳುವುದರಲ್ಲಿ ತಪ್ಪಿಲ್ಲ. ಆದರೆ ಗುರುವನ್ನು ಬೋಧಕನಾಗಿ ಲೆಕ್ಕಿಸಿಕೊಳ್ಳಬಾರದು. ಆದ್ದರಿಂದ ಕೆಳಗೆ ವ್ಯಾಸದಲ್ಲಿ ಬೋಧಕರು ಎಂದು ಬರೆಯಬೇಕಾದ ಜಾಗದಲ್ಲಿ ಗುರುಗಳು ಎಂದು ಬರೆದಿದ್ದೇವೆ.

ಪ್ರಪಂಚದಲ್ಲಿ ಎಷ್ಟೋ ವಿದ್ಯೆಗಳಿವೆ. ಅವುಗಳನ್ನು ತಿಳಿಸುವವರನ್ನು ಗುರುಗಳೆನ್ನುತ್ತೇವೆ. ಎಲ್ಲಾ ವಿದ್ಯೆಗಳಿಗಿಂತ ದೊಡ್ಡ ವಿದ್ಯೆ ಬ್ರಹ್ಮವಿದ್ಯೆ. ಏನಾದರು ಕೆಲಸದ ಸಂಧರ್ಭದಲ್ಲಿ **'ಇದೇನು ಬ್ರಹ್ಮವಿದ್ಯೆ'** ಎನ್ನುವ ನಾಣ್ನುಡಿ ಮೂಲಕವೇ ಅದರ ದೊಡ್ಡತನ ಅರ್ಥವಾಗುತ್ತಿದೆ. ಎಲ್ಲಾ ವಿದ್ಯೆಗಳಿಗಿರುವಂತೆ ಬ್ರಹ್ಮವಿದ್ಯೆಯನ್ನು ಕಲಿಸುವ ಗುರುಗಳು ಭೂಮಿ ಮೇಲಿದ್ದಾರೆ. ಎಲ್ಲಾ ವಿದ್ಯೆಗಳು ಭೂಮಿ ಮೇಲೆ ಜೀವ ಇರುವವರೆಗೂ ಮಾತ್ರ ಒಳ್ಳೆಯದು ಮಾಡುವವಾದರೆ ಬ್ರಹ್ಮವಿದ್ಯೆ ಮಾತ್ರ ಹಾಗಲ್ಲದೆ ಮರಣಿಸಿದ ನಂತರ ಸಹ ನಮಗೆ ಒಳ್ಳೆಯದೇ ಮಾಡುತ್ತಾ ಕೊನೆಗೆ ಈ ಜನನ ಮರಣ ಕೂಪದಿಂದ ಹೊರಗೆ ಹಾಕುತ್ತದೆ. ಆದ್ದರಿಂದಲೇ ಪೂರ್ವದಲ್ಲಿ ಬ್ರಹ್ಮವಿದ್ಯಾ ಗುರುಗಳನ್ನು ರಾಜರು ರಾರಾಜರು ಸಹಿತವು ಗೌರವಿಸುತ್ತಿದ್ದರು, ಪೂಜಿಸುತ್ತಿದ್ದರು. ಆ ದಿನ ಅಂದರೆ ಪೂರ್ವದಲ್ಲಿ ಬ್ರಹ್ಮವಿದ್ಯೆ ಬಹಳ ಪವಿತ್ರ

ವಾದುದ್ದಾಗಿ ಭಾವಿಸುತ್ತಿದ್ದರು. ಆದ್ದರಿಂದಲೇ ಆ ವಿದ್ಯೆಯನ್ನು ತಿಳಿಸುವ ಗುರುಗಳಿಗೆ ರಾಜರು ಸಹಿತವು ಬ್ರಹ್ಮರಥ ಹಿಡಿಯುತ್ತಿದ್ದರು. ಯಾವಾಗಲಾದರು ರಾಜಸಭಾಮಂದಿರದೊಳಗೆ ಗುರುಗಳು ಪ್ರವೇಶಿಸಿದರು ಸದಸ್ಯರೆಲ್ಲರ ಮುಂದೆ ರಾಜ್ಯಕ್ಕೆ ಅಧಿಪತಿಯಾದ ರಾಜ ಎದ್ದು ನಮಸ್ಕರಿಸಿ ಅವರಿಗೆ ಉನ್ನತಾಸನವನ್ನು ತೋರಿಸಿ ಕುಳಿತುಕೊಳ್ಳುವಂತೆ ಹೇಳುತ್ತಿದ್ದರು. ಮನೆಯಲ್ಲಿ ಗುರುಗಳ ಪಾದಗಳನ್ನು ತೊಳೆದು ಆ ನೀರನ್ನು ಪವಿತ್ರವಾಗಿ ಭಾವಿಸಿ ಅವರ ತಲೆಗಳ ಮೇಲೆ ಚೆಲ್ಲುಕೊಳ್ಳುತ್ತಿದ್ದರು. ಇನ್ನು ಸಾಮಾನ್ಯ ಸಾಧಾರಣ ಮನುಷ್ಯರಾದರೆ ಮತ್ತಷ್ಟು ಗೌರವಾಗಿ ಬ್ರಹ್ಮವಿದ್ಯೆಯನ್ನು ಆದರಿಸುತ್ತಾ ಗುರುಗಳನ್ನು ಗೌರವಿಸುತ್ತಿದ್ದರು.

ಹೀಗೆ ಕಾಲ ಕಳೆಯುತ್ತಿರುವಾಗ ಈದಿನ ಬ್ರಹ್ಮವಿದ್ಯೆ ಎಂದರೆ ಏನೋ ತಿಳಿಯದ ಸ್ಥಿತಿ ಮಾನವ ಸಮಾಜದಲ್ಲಿ ಏರ್ಪಟ್ಟಿದೆ. ಹುಟ್ಟಿದಾಗಿನಿಂದ ಪ್ರಪಂಚ ವಿದ್ಯೆಗಳು ಕಲಿಯುವುದರಲ್ಲಿಯೇ 25 ವರ್ಷಗಳು ವಯಸ್ಸು ಮುಗಿದುಹೋ ಗುತ್ತಿದೆ. ಓದಿನ ನಂತರ ಉದ್ಯೋಗವೊ ವ್ಯಾಪಾರವೊ ಅಥವಾ ಯಾವುದೊ ಒಂದು ಕೆಲಸದ ಮೇಲೆ ತಮ್ಮ ಜೀವನವನ್ನು ಸಾಗಿಸುವುದಕ್ಕೆ ಬುದ್ಧಿಯೆಲ್ಲವನ್ನು ಉಪಯೋಗಿಸುತ್ತಾ ಆಯಾ ಕೆಲಸಗಳಲ್ಲಿಯೇ ಹಣ ಸಂಪಾದನೆ ಉಪಾಯಗ ಳನ್ನು ಹುಡುಕುತ್ತಿದ್ದಾರೆ. ಸ್ವಲ್ಪ ಕಾಲಕ್ಕೆ ಹುಟ್ಟಿದ ಸಂತತಿಯನ್ನು ತಮ್ಮಂತೆ ತಿದ್ದುವುದರಲ್ಲಿ ಲಗ್ನವಾಗಿ ಜೀವನದಲ್ಲಿ ಕೊನೆ ಹಂತವಾದ ವೃದ್ಧಾಪ್ಯವನ್ನು ಸೇರಿಕೊಳ್ಳುತ್ತಿದ್ದಾರೆ. ಆ ವೃದ್ಧಾಪ್ಯದಲ್ಲಿ ಮೊದಲಿನಿಂದ ಯಾವ ಚಿಂತೆ ಇರುತ್ತದೊ ಅದೇ ನಮಗೆ ಬರುತ್ತಿರುತ್ತದಾಗಲಿ ಬೇರೆ ಬರುವುದಿಲ್ಲ. ಆದ್ದರಿಂದ ಪ್ರಪಂಚ ಯೋಚನೆಯಲ್ಲಿಯೇ ಜೀವನ ಮುಗಿದುಹೋಗುತ್ತಿದೆ. ಹೀಗೆ ನಡೆದುಹೋಗುವ ಈ ನವೀನ ಪ್ರಪಂಚದಲ್ಲಿ ಬ್ರಹ್ಮವಿದ್ಯೆ ಎಂದರೆ ಏನೊ, ಆತ್ಮಚಿಂತೆ ಎಂದರೆ ಏನೊ, ಬ್ರಹ್ಮವಿದ್ಯಾ ಗುರುಗಳೆಂದರೆ ಏನೊ ಸಹ ತಿಳಿಯದಸ್ಥಿತಿಯಲ್ಲಿ ಮಾನವನು ನಿಂತುಹೋಗಿದ್ದಾನೆ.

ಇಂತಹ ಮಾನವರ ಮಧ್ಯ ಬ್ರಹ್ಮವಿದ್ಯಾ ಗುರುಗಳ ಸ್ಥಿತಿ ಎಷ್ಟು ಅಯೋಮಯವಾಗಿರುತ್ತದೋ ಕೆಲವು ವಿವರಗಳ ಮೂಲಕ ತಿಳಿದುಕೊಳ್ಳೋಣ.

ಒಬ್ಬ ಗುರು ತಾನು ಗುರು ಎಂಬ ಯಾವಆಡಂಬರ ಇಲ್ಲದಂತೆ ಒಂದು ಚಿಕ್ಕ ಆಫೀಸ್‌ಗೆ ಏನೊ ಕೆಲಸ ಇದೆಯೆಂದು ಹೋಗಿದ್ದಾನೆಂದುಕೊಳ್ಳಿ. ಅಲ್ಲಿರುವ ಸಣ್ಣ ಗುಮಸ್ತಾ ಸಹ ಮಾತನಾಡುವುದಿಲ್ಲ. ಜೀವನ ಸಾರಾಂಶವನ್ನೆ ತಿಳಿಸುವವರು ಗುರುಗಳೆಂದು ಅರ್ಥ ತಿಳಿಯದ ಅಲ್ಲಿನವರು ಕನಿಷ್ಟ ಕುಳಿತುಕೊಳ್ಳಿ ಎಂದು ಸಹ ಹೇಳುವುದಿಲ್ಲ. ಸಾಮಾನ್ಯ ಮಾನವನಿಗಿಂತ ಕಡಿಮೆಮಾಡಿ ಮಾತನಾಡಿ ಕಳುಹಿಸುತ್ತಾರೆ. ಪೂರ್ವಕಾಲದಲ್ಲಿ ದೇಶಾಧಿನೇತರೆ ಗೌರವಿಸುವ ಗುರುಗಳನ್ನು, ಈ ದಿನ ಗುರುಸಾಂಪ್ರದಾಯ, ಅದರ ಅರ್ಥ ತಿಳಿಯದೇ ಹೋಗಿರುವುದರಿಂದ ಸಣ್ಣ ಪ್ರಭುತ್ವ ಕಾರ್ಯಾಲಯಗಳಲ್ಲಿ ಸಹ ಗುರುಗಳಿಗೆ ಬೆಲೆಯಿಲ್ಲ.

ಬ್ರಹ್ಮವಿದ್ಯೆಯನ್ನು ಮಾನವರ ಮಧ್ಯೆಪ್ರಚಾರ ಮಾಡಬೇಕೆಂದು ಗುರು ಒಂದು ಹಳ್ಳಿಗೆ ಹೋಗಿದ್ದಾನೆಂದುಕೊಳ್ಳಿ. ನಾನು ಆತ್ಮಜ್ಞಾನವನ್ನು ಹೇಳುತ್ತಿದ್ದೇನೆ ಕೇಳಿರೆಂದು ಕೆಲವರನ್ನು ಕೋರಿಕೊಂಡರೂ ಮುದುಕರೇನೋ ನಮಗೆ ವಯಸ್ಸು ಮುಗಿದುಹೋಗಿದೆ, ಜ್ಞಾನ ಕೇಳಿ ಏನು ಮಾಡುತ್ತೇವೆ? ಸಾಯುವವರೆಗೂ ಚೆನ್ನಾಗಿ ನಡೆದರೆ ಸಾಕು ಏನು ಬೇಡ ಎನ್ನುತ್ತಾರೆ. ಯುವಕರಿಗೆ ತಿಳಿಸಬೇಕೆಂದರೆ ನಮಗೆ ಸಮಯವಿಲ್ಲ ಕೆಲಸ ಕಾರ್ಯ ಇಲ್ಲದವರಿಗೆ ಹೇಳಿರೆಂದು ಎನ್ನುತ್ತಾರೆ. ಪೂರ್ವಕಾಲದಲ್ಲಿ ರಾಜ್ಯಗಳನ್ನು ಆಳುವ ರಾಜರು ಸಹ ಕೆಲಸ ಕಲ್ಪಿಸಿಕೊಂಡು ಗುರುಗಳ ಹತ್ತಿರಕ್ಕೆ ಹೋಗಿ ಜ್ಞಾನ ಕೇಳುತ್ತಿದ್ದರು, ಆದರೆ ಈ ಕಾಲದಲ್ಲಿ ಸ್ವಲ್ಪಮಟ್ಟಿನ ಸಂಸಾರಕ್ಕೇ ಸಮಯವಿಲ್ಲ ಎನ್ನುವವರು ಇದ್ದಾರೆ.

ಕೇಳುವುದಕ್ಕೆ ಸಮಯ ಇಲ್ಲದಿದ್ದರೆ ಸಮಯ ಇದ್ದಾಗ ಓದಿಕೊಳ್ಳುವುದಕ್ಕೆ ಪುಸ್ತಕಗಳಾದರು ಕೊಂಡು ಓದಿರೆಂದು ಒಬ್ಬ ಗುರು ಹೇಳಿದ್ದಾನೆಂದುಕೊಳ್ಳಿ. ಆ ಪುಸ್ತಕಗಳು ಉಚಿತವಾಗಿ ಕೇಳುತ್ತಾರೆ ಕೆಲವರು. ಪುಸ್ತಕಗಳು ಉಚಿತವಾಗಿ ಹೇಗೆ ಕೊಡುತ್ತೇವೆ. ನಾವು ಕಾಗದಗಳನ್ನು ಕೊಂಡುತಂದು ಪ್ರಿಂಟಿಂಗ್ ಖರ್ಚು ಇಟ್ಟುಕೊಂಡು ಪುಸ್ತಕಗಳನ್ನು ನಿಮಗೋಸ್ಕರ ಶ್ರಮಿಸಿ ತಯಾರು ಮಾಡಿದ್ದೇವೆ. ಅದರ ಖರ್ಚಾದರು ಕೊಡಬೇಕಲ್ಲವೆ! ಎಂದು ಗುರುಗಳು ಕೇಳಿದ್ದಾರೆಂದುಕೊಳ್ಳಿ. ಆ... ನಿಮಗೇನು ಎಷ್ಟೋಜನ ಭಕ್ತರು ಹೆಚ್ಚಾಗಿ ಹಣವನ್ನು ಕೊಡುತ್ತಿರುತ್ತಾರೆ

ಎಂದು ಎನ್ನುವವರು ಇದ್ದಾರೆ. ಪೂರ್ವಕಾಲದಲ್ಲಿ ಬ್ರಹ್ಮವಿದ್ಯಾ ಗುರುಗಳ ಖರ್ಚೆಲ್ಲವೂ ಅವರ ರಾಜರೇ ಭರಿಸುತ್ತಿದ್ದರು. ಏನು ಬೇಕೆಂದು ಕೇಳಿದರು ಸಮಕೂಡಿಸುತ್ತಿದ್ದರು. ಆದರೆ ಪ್ರಸ್ತುತ ಗುರುಗಳು ಹಣ ಇರುವವರ ಹತ್ತಿರಕ್ಕೆ ಹೋಗಿ ಬಡ್ಡಿಗೆ ಹಣ ಕೇಳಿದರು ಕೊಡದ ಕಾಲವಿದು. ನಾನೇನಾದರು ಉಚಿತ ವಾಗಿ ಕೊಟ್ಟಿದ್ದೇನಾ ಎಂದು ಯೋಚಿಸದೆಯೇ ಮಾತನಾಡುವವರು ಪುಸ್ತಕಗಳು ಕೊಂಡು ಓದುತ್ತಾರಾ!

ಇನ್ನು ಹೋದರೆ ಭಕ್ತರೆನ್ನೋಣವಾ ಒಬ್ಬ ಗುರುವಿಗೆ ಕೆಲವರು ಭಕ್ತರೆಂದು ಶಿಷ್ಯರು ಇದ್ದಾರೆಂದುಕೊಳ್ಳೋಣ. ಅದರಲ್ಲಿ ಕೆಲವರು ಗುರುಗಳಿಂದ ಲಾಭ ಪಡೆಯಬೇಕೆಂದು ನೋಡುತ್ತಿರುತ್ತಾರೆ. ಒಂದು ಕಾಲದಲ್ಲಿ ಮಡಿಕೆ ಇಟ್ಟು ಚೆಂಬುಗಳು ಎತ್ತುಕೊಂಡುಹೋಗುವವರು ಇದ್ದರೆ ಈಗ ಮಡಿಕೆ ತೋರಿಸಿ ಚೆಂಬುಗಳು ಎತ್ತುಕೊಂಡು ಹೋಗುವವರಿದ್ದಾರೆ. ಏನಾದರು ಜ್ಞಾನಪರವಾಗಿ ತಪ್ಪು ಮಾಡಿದರೆ ಇದು ತಪ್ಪೆಂದು ಗುರುಗಳು ದಂಡಿಸಿದರೆ ನಾವು ಬಾರದಂತೆ ಹೋದರೆ ನಿನಗೇ ನಷ್ಟವೆನ್ನುವಂತೆ ಅಲ್ಲಿಗೆ ಬಾರದಂತೆ ಹೋಗುತ್ತಾರೆ. ಏನಯ್ಯಾ ಗುರುಗಳ ಹತ್ತಿರಕ್ಕೆ ಹೋಗಲಿಲ್ಲವಾ ಎಂದು ಯಾರಾದರು ಕೇಳಿದರೆ ಗುರುವಿನಲ್ಲಿ ಇಂತಹ ಕೆಟ್ಟಭ್ಯಾಸವಿದೆ, ನಾನು ಇಷ್ಟು ಒಳ್ಳೆಯವನು ಅಲ್ಲಿಗೆ ಹೋಗುವುದು ಒಳ್ಳೆಯದು ಅಲ್ಲ ತಾನೆ ಎಂದು ಗುರುವನ್ನೆ ಕೆಟ್ಟವನನ್ನಾಗಿ ಮಾಡಿ ತಾನು ಉತ್ತಮನೆಂದು ಹೇಳಿಕೊಳ್ಳುತ್ತಾರೆ.

ಇನ್ನು ಹೋದರೆ ಅಷ್ಟೋ ಇಷ್ಟೋ ಆಧ್ಯಾತ್ಮಿಕ ಚಿಂತನೆ ಇರುವವರು ಒಬ್ಬ ಗುರು ಬರೆದ ಪುಸ್ತಕಗಳು ಓದಿಕೊಳ್ಳುತ್ತಿದ್ದಾರೆ. ಅದರಲ್ಲಿನ ವಿಷಯಗಳು ಅವರಿಗೆ ಅನುಕೂಲವಾಗಿಯೇ ಇರಬೇಕೆಂದುಕೊಳ್ಳುತ್ತಾರೆ. ಆದರೆ ಬರೆದ ವಿಷಯಗಳು ಸತ್ಯಗಳಾ ಅಸತ್ಯಗಳಾ ಎಂದು ಯೋಚಿಸುವುದಿಲ್ಲ. ಅವರಿಗೆ ಮೊದಲು ಯಾವ ವಿಧವಾಗಿ ತಿಳಿದಿದ್ದರೆ, ಓದುವ ಪುಸ್ತಕಗಳಲ್ಲಿಯೂ ಆ ವಿಧವಾಗಿ ಇದ್ದರೇನೆ ಸರಿಯಾದವೆಂದು, ಹಾಗೆ ಇಲ್ಲದಿದ್ದರೆ ಸರಿಯಾದ ವಿಷಯಗಳಲ್ಲ ಎನ್ನುವವರಿದ್ದಾರೆ. ಅಂತಹದರಲ್ಲಿ ಗುರು ಬರೆದ ಎಷ್ಟು ಸತ್ಯವಾದ

ವಿಷಯಗಳೂ ಸಹ ಬೆಲೆ ಇಲ್ಲದಂತೆ ಹೋಗುತ್ತಿವೆ. ಹಾಗೆ ಒಬ್ಬ ಗುರುವು ವೇದಿಕೆಯನ್ನೇರಿ ಉಪನ್ಯಾಸ ಹೇಳುತ್ತಿದ್ದಾನೆಂದುಕೊಳ್ಳೋಣ. ಗುರುಗಳು ಕೇವಲ ಬ್ರಹ್ಮವಿದ್ಯೆಯನ್ನು ಕುರಿತು ಆತ್ಮಜ್ಞಾನವನ್ನು ಕುರಿತು ಹೇಳಿದರೆ ಯಾರು ಸಮ್ಮತಿಸುವುದಿಲ್ಲ. ಉಪನ್ಯಾಸ ಮಧ್ಯದಲ್ಲಿ ಆಗಾಗ, ಹರಿಕಥೆ ಮಧ್ಯದಲ್ಲಿ ಚಿಕ್ಕಕಥೆಗಳಿರುವಂತೆ, ಕೇಳುವವರನ್ನು ನಗಿಸುವುದಕ್ಕೆ ಕೆಲವು ಚಿಕ್ಕಕಥೆಗಳಿರಬೇಕು. ಅವು ಅನವಶ್ಯಕತೆ, ಜ್ಞಾನವನ್ನೆ ಹೇಳಬೇಕೆಂದು ಗುರುಗಳು ಅಂದುಕೊಂಡರೆ ಹೇಳುವ ಗುರುವಿಗೆ ಜ್ಞಾನವೇ ಬರುವುದಿಲ್ಲ ಎನ್ನುತ್ತಾರೆ.

ಪೂರ್ವದಲ್ಲಿ ಜ್ಞಾನವನ್ನು ವಿವರವಾಗಿ ತಿಳಿಸುವವನು ಗುರುವೆಂದು ತಿಳಿಯುತ್ತಿದ್ದರು. ಈದಿನ ಧರಿಸುವ ವಸ್ತ್ರಗಳನ್ನನುಸರಿಸಿ, ಬೆಳೆಸುವ ಗಡ್ಡಗಳನ್ನನುಸರಿಸಿ ಗುರುಗಳೆಂಬ ಭಾವನೆ ತೋರಿಸುತ್ತಿದ್ದಾರಾಗಲಿ ಹೇಳುವ ಜ್ಞಾನದಿಂದ ಅಲ್ಲ. ಇಂತಹ ಕಾಲದಲ್ಲಿ ಅಸಲಾದ ಗುರುಗಳಿಗೆ ಸಮಾಜದಲ್ಲಿ ಬೆಲೆಯೇ ಇಲ್ಲದಂತೆ ಹೋಗಿದೆ. ಪೂರ್ವದಲ್ಲಿ ಗುರುಗಳನ್ನು ರಾಜರು ಮತ್ತು ಇತರರು ಪೋಷಿಸುತ್ತಿದ್ದರು. ಆದ್ದರಿಂದ ಆ ದಿನ ಗುರುಗಳ ಮೆದುಳೆಲ್ಲವೂ ಜ್ಞಾನದ ಮೇಲೆ ಉಪಯೋಗಪಟ್ಟು, ಎಷ್ಟೋ ಸತ್ಯವಾದ ವಿಷಯಗಳು ಕಂಡುಕೊಂಡು ಪ್ರಜೆಗಳಿಗೆ ತಿಳಿಸುತ್ತಿದ್ದರು. ಆದರೆ ಈದಿನ ಗುರುಗಳ ಪರಿಸ್ಥಿತಿ ಬದಲಾಗಿ ಹೋಗಿದೆ. ಕೇವಲ ಜ್ಞಾನದ ಮೇಲೆಯೇ ಅವರ ಮನೋಬುದ್ಧಿಗಳನ್ನು ಕೇಂದ್ರಿಕರಿಸುವುದಕ್ಕೆ ಸಾಧ್ಯವಿಲ್ಲ. ಅಷ್ಟೋ ಇಷ್ಟೋ ಪ್ರಪಂಚ ವಿಷಯದ ಮೇಲೆ ಕೇಂದ್ರಿಕರಿಸಿ ಅವರ ಹೊಟ್ಟೆಗೆ ಅವರು ಸಂಪಾದಿಸಿಕೊಳ್ಳಬೇಕಾಗಿ ಬರುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ತಮ್ಮಲ್ಲಿ ಜ್ಞಾನವಿದ್ದರು ಅದು ಕೆಲಸಕ್ಕೆ ಬರುವುದಿಲ್ಲವೆಂದು ತಿಳಿದ ಗುರುಗಳು ವಿಧಿಯಿಲ್ಲದೆ ಕೆಲವರು ಜ್ಯೋತಿಷ್ಯ ಹೇಳಿಕೊಂಡು ಕಾಲ ಕಳೆಯುತ್ತಿದ್ದಾರೆ, ಕೆಲವರೇನೋ ವೈದ್ಯ ಮಾಡುತ್ತಿದ್ದಾರೆ, ಕೆಲವರು ಅಂತ್ರಗಳು, ಮಂತ್ರಗಳೆಂದು ಕಾಲ ಕಳೆಯುತ್ತಿದ್ದಾರೆ. ಮತ್ತೆ ಕೆಲವರು ಸುತ್ತಲೂ ಇರುವ ಪ್ರಜೆಗಳಿಗೆ ಅನುಗುಣವಾಗಿ ಅವರ ದೃಷ್ಟಿಗೆ ಯಾವುದು ಭಕ್ತಿಯಾಗಿ ಕಾಣಿಸುತ್ತದೋ ಅದೇ ಮಾಡುತ್ತಿದ್ದಾರೆ. ಯಾವೋ ಕೆಲವು ಕೆಲಸಗಳು

ಮಾಡದೆಹೋದರೆ ಸ್ವಾಮಿ ಎನ್ನುವುದಿಲ್ಲವೆಂದು, ತಮಗೆ ಇಷ್ಟವಿದ್ದರೂ ಇಲ್ಲದಿದ್ದರೂ ನಾಗರಕಟ್ಟೆಗಳೆಂದು, ನವಗ್ರಹ ಪ್ರತಿಷ್ಠೆಗಳೆಂದು ಪ್ರಜೆಗಳಿಂದಲೇ ಮಾಡಿಸುವವರಿದ್ದಾರೆ. ಅಭೂತಕಲ್ಪನೆಗಳೆಂದು ತಿಳಿದರೂ ಪ್ರಜೆಗಳಿಗೆ ಇಷ್ಟವಾದ ಪುರಾಣಗಳನ್ನೇ ಓದಿ ಹೇಳಿ ಸಮಯವನ್ನು ಕಳೆಯುವವರು ಕೆಲವರಿದ್ದಾರೆ.

ಹೀಗೆ ಬಹಳ ಮಂದಿ ಗುರುಗಳು ನವಸಮಾಜದಲ್ಲಿ ಅನೇಕ ವಿಧಗಳಾಗಿ ಬದಲಾಗಿದ್ದಾರೆ. ಹಾಗೆ ಬದಲಾಗದೆಹೋದರೆ ಗತ್ಯಂತರ ಇಲ್ಲದಂತೆ ಇದೆ. ಹಾಗೆ ಬದಲಾಗುವುದಿಲ್ಲ ನಾನು ಕಲಿಸುವುದು ಆತ್ಮಜ್ಞಾನ ಪಾಠಗಳೇ ಎನ್ನುವ ಗುರುಗಳು ಸಹ ಎಲ್ಲೋ ಒಂದು ಕಡೆ ಇರುತ್ತಾರೆ. ಅಂತಹ ಗುರುಗಳು ಹೆಜ್ಜೆಹೆಜ್ಜೆಗು ಅನೇಕ ಸಮಸ್ಯೆಗಳನ್ನು, ಅನೇಕ ಪ್ರತಿಘಟನೆಗಳನ್ನು, ಅನೇಕ ವಿಮರ್ಶೆಗಳನ್ನು ಎದುರಿಸಬೇಕಾಗುತ್ತದೆ. ಅಂತಹ ಗುರು ಪ್ರಜೆಗಳ ದೃಷ್ಠಿಯಲ್ಲಿ ಜ್ಞಾನವೇ ತಿಳಿಯದ ಅಜ್ಞಾನಿಗಿಂತ ಹೀನನಾಗಿ ಕಾಣಿಸುತ್ತಿರುತ್ತಾನೆ. ಅಂತಹ ಗುರುವನ್ನು ನಾವೊಬ್ಬರನ್ನು ನೋಡಿದ್ದೇವೆ. ಆತನು ಯಾರನ್ನು ಯಾವ ವಿಧವಾಗಿ ಆಶಿಸದಂತೆ ತಾನೇ ಸ್ವತಃ ಕಷ್ಟಪಟ್ಟು ಜ್ಞಾನವನ್ನೇ ಪ್ರಚಾರ ಮಾಡಬೇಕೆಂಬ ಉದ್ದೇಶದಿಂದ ಇರುತ್ತಿದ್ದನು. ಜ್ಞಾನ ಹೇಳುವಾಗ ಗುರುವಾಗಿ ಶಾಶ್ವತ ಶಾಸ್ತ್ರ ಧರ್ಮಗಳನ್ನೇ ಬೋಧಿಸುತ್ತಿದ್ದನು. ಹೆಚ್ಚಾಗಿ ಬಡ್ಡಿಗಳಿಗೆ ಸಾಲಮಾಡಿ, ಜ್ಞಾನ ಪ್ರಚುರಣೆ, ಪ್ರಚಾರಕ್ಕೆ ವಿನಿಯೋಗಿಸಿ ಕಷ್ಟಪಟ್ಟು ಬಾಕಿ ತೀರಿಸಿಕೊಳ್ಳುತ್ತಿದ್ದನು. ತಾನು ಗುರುವೆಂಬ ಭಾವನೆ ಸಹ ಇಲ್ಲದಂತೆ ಕೆಲವು ಕೆಲಸಗಳಲ್ಲಿ ಕೂಲಿಯವನಿಗಿಂತ ಹೆಚ್ಚಾಗಿ ಕೆಲಸ ಮಾಡುತ್ತಿದ್ದನು. ತನ್ನನ್ನು ನೋಡದ ಹೊಸ ಪ್ರಾಂತಗಳಲ್ಲಿ ತಾನು ಗುರುವೆಂದು ಹೇಳದೆ ತಾನು ಒಬ್ಬ ಭಕ್ತನೆಂದು ಹೇಳಿಕೊಳ್ಳುತ್ತಾ ಜ್ಞಾನವನ್ನು ಕುರಿತು ಪ್ರಚಾರ ಮಾಡುತ್ತಿದ್ದನು. ಅಂತಹ ಸಮಯದಲ್ಲಿ ತನ್ನನ್ನು ನೋಡದವರೆಷ್ಟೋ ಜನ ತನ್ನ ಜ್ಞಾನವನ್ನು ಮೆಚ್ಚುಕೊಳ್ಳುವ ಸಮಯದಲ್ಲಿ ಸಹ, ತಾನು ಗುರುವೆಂದು ಹೇಳದೆ ಸಾಮಾನ್ಯ ಮನುಷ್ಯನಂತೆ ಇದ್ದು ನಿರಹಂಕಾರಿಯಾದ ಗುರು ಹತ್ತಿರ ಎಷ್ಟೋ ಜನ ಭಕ್ತರು ಸೇರುವುದು, ಸ್ವಲ್ಪಕಾಲ ಆತನು ತಿಳಿಸುವ ಜ್ಞಾನವನ್ನು ಕೇಳುವುದು, ಕೊನೆಗೆ ದೂರವಾಗಿ ಹೋಗಿ ಆತನ

ಒಳ್ಳೆಯತನವನ್ನು ಕೆಟ್ಟದಾಗಿ, ಆತನ ಜ್ಞಾನವನ್ನು ಅಜ್ಞಾನವಾಗಿ ಪ್ರಚಾರ ಮಾಡುವವರನ್ನು ನೋಡಿದ್ದೇವೆ. ಹಾಗೆ ಹೋದವರು ಕಳ್ಳರ ಜೊತೆ ಮೋಸ ಮಾಡುವವರ ಜೊತೆ, ಜೂಜಾಟವಾಡುವವರ ಜೊತೆ, ಬೆರೆತು ತಿರುಗುತ್ತಿದ್ದಾರೆ. ಎಷ್ಟೋ ಜ್ಞಾನ ಹೇಳಿದ ಗುರುವನ್ನು ದೂರ ಮಾಡಿಕೊಳ್ಳುವವರಿಗೆ, ಉಳಿದ ಕೆಟ್ಟಮಾರ್ಗದಲ್ಲಿ ಹೋಗುವವರು ಚೆನ್ನಾಗಿ ಕಾಣಿಸಿದ್ದಾರೆಂದರೆ, ಆ ವಿಷಯವನ್ನು ಕುರಿತು ಆ ಗುರುಗಳ ಅಂತರಂಗದಲ್ಲಿ ಬುದ್ಧಿ ಪ್ರಶ್ನೆಗಳು, ಅವುಗಳಿಗೆ ಉತ್ತರಗಳ ರೂಪದಲ್ಲಿ ಯೋಚಿಸುತ್ತಿದೆ. ಆ ಪ್ರಶ್ನೆ ಉತ್ತರಗಳು ಈ ವಿಧವಾಗಿ ಇವೆ.

**ಪ್ರಶ್ನೆ ॥ ಎಷ್ಟೋ ಜನ ಗುರುಗಳು ಪ್ರಜೆಗಳಿಗೆ ಅನುಕೂಲವಾಗಿ ಅವರಿಗೆ ಇಷ್ಟವಾದ ಜ್ಞಾನ ತಿಳಿಸುತ್ತಿದ್ದಾರೆ. ಆದರೆ ನೀವು ಹಾಗಲ್ಲದೆ ನಿಮ್ಮ ಧೋರಣೆಯಲ್ಲಿ ಹೇಳುತ್ತಾ ಹೋಗುತ್ತಿದ್ದೀರಾ. ಅದಕ್ಕೆ ಎಲ್ಲರಿಗೂ ಇಷ್ಟವಾಗುತ್ತಿಲ್ಲ. ಇದಕ್ಕೇನೆನ್ನುತ್ತೀರಾ?**

ಜ ॥ ಪ್ರಜೆಗಳು ಅಜ್ಞಾನಾಂಧಕಾರದಿಂದ ಸಂಸಾರ ಸಮುದ್ರದಲ್ಲಿ ಇರುವವರು ಶಕ್ತಿ ಇರುವವರೆಗೂ ಈಜುತ್ತಾರೆ. ಶಕ್ತಿ ಇಲ್ಲದಿರುವಾಗ ಮುಳುಗಿಹೋಗುತ್ತಿದ್ದಾರೆ. ಸಂಸಾರ ಸಮುದ್ರದಲ್ಲಿ ಈಜುವವರನ್ನು ಹೀಗೆ ಈಜಿ ಹಾಗೆ ಈಜಬೇಡಿರೆಂದು ಅವರು ಈಜುವುದಕ್ಕೆ ಸುಲಭವಾದ ಉಪಾಯಗಳು ಹೇಳುವುದಕ್ಕಿಂತ, ಈಜದಂತೆ ಸಮುದ್ರದ ನೀರಿನ ತೇವ ಸಹ ಆಗದಂತೆ ಇರುವ ಉಪಾಯ ಹೇಳುವುದೇ ಒಳ್ಳೆಯದೆಂದು ನನ್ನ ಉದ್ದೇಶ. ಪ್ರಜೆಗಳನ್ನು ನೋಡಿ ಅವರಿಗೆ ಅನುಕೂಲವಾಗಿ ಗುರು ಬದಲಾಗಬಾರದು. ಗುರುವನ್ನು ನೋಡಿ ಗುರು ಪದ್ಧತಿ ಪ್ರಕಾರ ಒಬ್ಬನು ಬದಲಾದರು ಪರವಾಗಿಲ್ಲ. ನಾವು ಹೇಳುವ ಬೋಧನೆಗಳು ಎಲ್ಲರಿಗೂ ಇಷ್ಟವಾಗಬೇಕೆಂದು ಇಲ್ಲ ಸಾವಿರಮನೆಗೊಬ್ಬರಿಗೆ ಇಷ್ಟವಾದರೂ ಪರವಾಗಿಲ್ಲ. ಇಷ್ಟವಾಗುವುದು ಇಷ್ಟವಾಗದಿರುವುದೆಂಬುವುದು ಮುಖ್ಯಸಮಸ್ಯೆ ಅಲ್ಲ. ಹೇಳುವುದು ಅಸಲು ಧರ್ಮವಾ ಅಲ್ಲವಾ ಎನ್ನುವುದೇ ನಮ್ಮ ದೃಷ್ಟಿಯಲ್ಲಿ ಮುಖ್ಯ. ಭೂಮಿ ಮೇಲೆ ಅಧರ್ಮಕ್ಕೆ ಹೆಚ್ಚಾಗಿ ಬೆಲೆಕೊಡುವವರಿದ್ದಾರೆ ಆದ್ದರಿಂದ ನಮ್ಮ ಬೋಧನೆಗಳು ಬಹಳ ಜನರಿಗೆ ಇಷ್ಟವಾಗುವುದಿಲ್ಲ.

**ಪ್ರಶ್ನೆ ॥ ಅವರಿಗೆ ಇಷ್ಟವಾಗುವುದಿಲ್ಲ ಅನ್ನುತ್ತಿದ್ದೀರಲ್ಲ! ಅವರಿಗೆ ಇಷ್ಟವಾಗುವಂತೆ ಹೇಳಿದರೆ ನಿಮಗೇನು ನಷ್ಟ?**

ಜ॥ ಧರ್ಮವಿದು, ಅಧರ್ಮವಿದು ಎಂದು ತಿಳಿದು ಇನ್ನೊಬ್ಬರಿಗೆ ಇಷ್ಟವಾಗುವುದಕ್ಕೋಸ್ಕರ ಅಧರ್ಮ ವಿಷಯವನ್ನು ಹೇಳುವುದು ದೈವದ್ರೋಹ, ದೈವವಿರುದ್ಧವಾಗುತ್ತದೆ. ಅದರಿಂದ ಕ್ಷಮಿಸಲಾರದ ಕರ್ಮ ಏರ್ಪಡುತ್ತದೆ ಎಂದು ತಿಳಿದು ನಾವು ಹೇಗೆ ಹೇಳುತ್ತೇವೆ?

**ಪ್ರಶ್ನೆ ॥ ಶಾಸ್ತ್ರವೆಂದರೆ ಏನೆಂದು ತಿಳಿಯದವರಿಗೆ ನೀವು ಶಾಸ್ತ್ರವೊಂದೇ ಹೇಳುವುದರಿಂದ ಏನು ರುಚಿಸುತ್ತದೆ.?**

ಜ॥ ಶಾಸ್ತ್ರವೆಂದರೆ ಏನೆಂದು, ಅವು ಯಾವೆಂಬ ವಿಷಯವನ್ನು ಸಹ ಎಷ್ಟೋ ಬಾರಿ ತಿಳಿಸಿದ್ದೇವೆ. ಆದರೂ ಗ್ರಂಥಗಳೆಲ್ಲವನ್ನು ಶಾಸ್ತ್ರಗಳೆಂದು ಕೊಳ್ಳುವವರಿದ್ದಾರೆ. ಅದು ಅವರ ಕರ್ಮ ನಾವೇನು ಮಾಡುತ್ತೇವೆ. ವಿವರ ಹೇಳುವುದೇ ಒಬ್ಬ ಗುರುವಾಗಿ ನನ್ನ ಧರ್ಮ, ಅದೇ ನಾನು ಮಾಡುತ್ತಿದ್ದೇನೆ. ಒಬ್ಬ ವ್ಯಕ್ತಿಗೆ ಬಾಳೆ ಎಲೆಯಲ್ಲಿ ಊಟ ಬಡಿಸಿ ಸೊಪ್ಪು, ಸಾಂಬಾರು, ಪಲ್ಯಗಳು, ನಿಂಬೆಹಣ್ಣಿನ ಉಪ್ಪಿನಕಾಯಿ ಹಾಕಿದ್ದೇವೆಂದುಕೊಳ್ಳಿ. ತಿನ್ನುವ ಅನ್ನದೊಳಗೆ ಒಂದೊಂದು ಒಂದು ಸಲ ಕಲಿಸಿಕೊಂಡು ತಿಂದವನಿಗೆ ಅವುಗಳೆಲ್ಲ ರುಚಿ ಬೇರೆ ಬೇರೆಯಾಗಿ ತಿಳಿಯುತ್ತದೆ. ಆಗ ಯಾವುದು ಹೆಚ್ಚಿನ ರುಚಿ, ಯಾವುದು ಕಡಿಮೆರುಚಿ ಎಂದು ಸುಲಭವಾಗಿ ಹೇಳುತ್ತಾನೆ. ಹಾಗಲ್ಲದೆ ಎಲ್ಲವನ್ನು ಒಂದೇಸಲ ಕಲಿಸಿಕೊಂಡು ತಿನ್ನುವವನಿಗೆ ಯಾವ ಪದಾರ್ಥದ ರುಚಿ ಯಾವುದೋ ತಿಳಿಯದಂತೆ ಹೋಗುತ್ತದೆ. ಬಿಡಿಬಿಡಿಯಾಗಿ ತಿಂದಾಗ ಸೊಪ್ಪಿನ ಪ್ರತ್ಯೇಕತೆ ಏನೋ, ಪಲ್ಯಗಳ ಪ್ರತ್ಯೇಕತೆ ಏನೋ ತಿಳಿಯುತ್ತದೆ. ಎಲ್ಲಾ ಒಂದೇ ಎಂದು ಕಲಿಸಿಕೊಂಡು ತಿನ್ನುವವನಿಗೆ ಯಾವ ರುಚಿಯನ್ನು ಕುರಿತು ಹೇಳಿದರು ಅವನಿಗೆ ಅರ್ಥವಾಗುವುದಿಲ್ಲ. ಅವನಿಗೆ ಕಾಣಿಸುವ ರುಚಿ ಒಂದಾದರೆ ನಾವು ಹೇಳುವ ರುಚಿ ಮತ್ತೊಂದಾಗುತ್ತದೆ. ಹಾಗೆಯೇ ನಾನು ಶಾಸ್ತ್ರಬೇರೆ, ಪುರಾಣಬೇರೆ,

ಚರಿತ್ರೆಗಳು ಬೇರೆಯೆಂದು ಹೇಳಿದರೆ ಎಲ್ಲಾ ಪುಸ್ತಕಗಳೇ ತಾನೆ ಅಂದುಕೊಳ್ಳುವ ವರಿಗೆ ಶಾಸ್ತ್ರ ಒಂದರ ಪ್ರತ್ಯೇಕತೆ ಹೇಗೆ ತಿಳಿಯುತ್ತದೆ. ಯಾವುದು ಏನಾದರಾಗಲಿ ನನ್ನ ಕೆಲಸ ಮಾತ್ರ ಧರ್ಮಗಳಿಂದ ಕೂಡಿಕೊಂಡ ಯೋಗಶಾಸ್ತ್ರವನ್ನು ತಿಳಿಸುವುದೆ.

**ಪ್ರಶ್ನೆ ॥ ಕೆಲವರು ನಿಮಗೆ ಸಹಕರಿಸಿ, ಈತನು ಹೇಳುವುದು ಶಾಸ್ತ್ರಬದ್ಧವಾದ ಧರ್ಮಯುಕ್ತವಾದ ಜ್ಞಾನವೆಂದು ತಿಳಿಸಿದರೆ ನಿಮಗೆ ಚೆನ್ನಾಗಿರುತ್ತದಲ್ಲವೆ! ಅದಕ್ಕೆಂದು ಪ್ರಸ್ತುತ ಜ್ಞಾನಿಗಳೆಂದು ಹೆಸರುವಾಸಿಯಾದವರ ಹತ್ತಿರ ನೀವು ಸ್ನೇಹ ಇಟ್ಟುಕೊಳ್ಳುವುದು ಒಳ್ಳೆಯದಲ್ಲವೆ!**

ಜ ॥ ಇದು ರಾಜಕೀಯ ಪಾರ್ಟಿ ಅಲ್ಲವಲ್ಲ ಸ್ನೇಹ ಇಟ್ಟುಕೊಳ್ಳುವುದಕ್ಕೆ. ಈ ದಿನ ಪ್ರಪಂಚ ಜನಸಂಖ್ಯೆಯಲ್ಲಿ ಶೇ.70 ರಷ್ಟು ಪ್ರಜೆಗಳು ದೈವವಾಗಿ ಹೇಳಿಕೊಳ್ಳುವ ಏಸುಪ್ರಭುವು ಸಹ ತಾನು ಹೇಳುವುದು ಸತ್ಯಮಾರ್ಗವೆಂದು ಹೇಳಿದರೂ, ಆ ದಿನ ಎಷ್ಟುಜನ ಕೇಳಿದ್ದಾರೆ. ಆ ದಿನ ಜ್ಞಾನಿಗಳೆಂದು ಹೆಸರುವಾಸಿಯಾದ ಶಾಸ್ತ್ರಿಗಳೆಲ್ಲರೂ ಆತನನ್ನು ವಿರೋಧಿಸಿ, ಆತನು ಹೇಳುವುದು ಜ್ಞಾನವಲ್ಲ ಎಂದು ಘೋಷಿಸಿ ಆತನ ಮರಣಕ್ಕೆ ಕಾರಣವಾಗಲಿಲ್ಲವಾ! ಎಷ್ಟೋ ಜನ ಎಷ್ಟೋ ರೋಗಗಳು ಆತನ ಸ್ಪರ್ಶದಿಂದಲೇ ಗುಣಪಡಿಸಿಕೊಂಡು, ಆತನ ಕೈಯಿಂದ ರೊಟ್ಟಿಗಳು ತಿಂದವರೂ ಸಹ ಆತನ ಮೇಲೆ ಕಲ್ಲು ಬೀಸಲಿಲ್ಲವಾ! ಈ ದಿನ ಹಿಂದೂ ಮತದಲ್ಲಿ ದೊಡ್ಡದಾಗಿ ಹೇಳಿಕೊಳ್ಳುವ ಭಗವದ್ಗೀತೆಯನ್ನು ಶ್ರೀಕೃಷ್ಣನು ಅರ್ಜುನನಿಗೊಬ್ಬನಿಗೆ ಹೇಳಿದ್ದಾನೆ. ಆ ದಿನ ಎಲ್ಲರೂ ಕೇಳಬೇಕೆಂದು ಆತನು ತಾಪತ್ರಯಪಡಲಿಲ್ಲ. ಅವರ ದಾರಿಯಲ್ಲಿ ನಡೆಯುತ್ತಿರುವ ನಾವು ಅವರಂತೆ ಸತ್ಯವನ್ನು ತಿಳಿಸಬೇಕೆಂದುಕೊಂಡಿದ್ದೇವೆ. ಆದರೆ ಎಷ್ಟುಜನ ನಮ್ಮಜೊತೆ ಸಹಕರಿಸುತ್ತಿರುವುದು ವಿಶೇಷ ಅಲ್ಲ.

**ಪ್ರಶ್ನೆ** ॥ ನೀವು ಸಹ ಪೂರ್ವದ ಏಸುಪ್ರಭುವಿನಂತೆ ಮತ್ತು ಇತರ ದೊಡ್ಡ ಮಹರ್ಷಿಗಳಂತೆ ಕೆಲವು ಸಂದರ್ಭಗಳಲ್ಲಿ ಬಾಯಿ ಮಾತಿನ ಮೂಲಕ ಮತ್ತು ಕೈ ಸ್ಪರ್ಶದ ಮೂಲಕ ಕೆಲವು ಭಯಂಕರ ಕರ್ಮಗಳನ್ನು ಸಹ ಸ್ಥಂಭಿಸುವಂತೆ ಮಾಡಿ ಯೋಗಶಕ್ತಿ ಇರುವ ಯೋಗಿ ಎಂದು ನಿರೂಪಿಸಿಕೊಂಡರೂ, ಬಹಳಜನ

ನಿಮ್ಮನ್ನು ದೊಡ್ಡ ಜ್ಞಾನಿಯಾಗಿ ಗುರುತಿಸಲಾರದೆ ಹೋಗಿದ್ದಾರೆ. ಕೊನೆಗೆ ಕರ್ಮದಿಂದ ಹೊರಬಿದ್ದ ವ್ಯಕ್ತಿಗಳು ಸಹಿತವು ಜ್ಞಾನವನ್ನು ಕುರಿತು ಕೇಳುವುದಿಲ್ಲ ಏಕೆ?

ಜ ॥ ಯೋಗಶಕ್ತಿ ಎಂದರೆ ಏನೋ, ಮಂತ್ರಶಕ್ತಿ ಎಂದರೆ ಏನೋ ಅರ್ಥ ವ್ಯತ್ಯಾಸ ತಿಳಿಯದ ಮನುಜರು ಆದ್ದರಿಂದ ಅವರು ನನ್ನನ್ನು ಯೋಗಿಯಾಗಿ ಗುರುತಿಸಲಾರದೆಹೋಗಿದ್ದಾರೆ. ಕೊನೆಗೆ ನನ್ನ ಹತ್ತಿರ ನನ್ನ ಸ್ಪರ್ಶದ ಮೂಲಕವೊ ಅಥವಾ ದೃಷ್ಟಿ ಮೂಲಕವೊ ಚೆನ್ನಾಗಾದವರೂ ಸಹ ಇದು ಏನೋ ಮಂತ್ರಶಕ್ತಿ ಎಂದು, ನನ್ನನ್ನು ಒಬ್ಬ ಮಾಂತ್ರಿಕನನ್ನಾಗಿ ಲೆಕ್ಕಿಸಿಕೊಂಡು ಅಕ್ಕರೆತೀರಿದೆ ಅಲ್ಲವೆ ಎಂದು ದೂರ ಹೋಗಿದ್ದಾರೆ.

**ಪ್ರಶ್ನೆ ॥ ಅಂತಹ ಮನುಷ್ಯರಿಗೆ ನೀವು ಸಂಪಾದಿಸಿಕೊಂಡ ಯೋಗಶಕ್ತಿಯನ್ನು ಏಕೆ ಖರ್ಚುಮಾಡಿದ್ದೀರಾ?**

ಜ ॥ ಜ್ಞಾನಕ್ಕೆ ಇಂತಹ ಸಾಮರ್ಥ್ಯವಿದೆಯೆಂದು ಎಲ್ಲೋ ಒಂದುಕಡೆ ನಿರೂಪಿಸಬೇಕಲ್ಲವೆ! ಆದ್ದರಿಂದ ಹತ್ತಿರ ಬಂದವರ್‍ಯಾರಿಗೋ ಒಬ್ಬರಿಗೆ ಕರ್ಮವನ್ನು ಸುಟ್ಟು ನಿರೂಪಿಸಬೇಕೆಂಬ ಉದ್ದೇಶದಿಂದ ಹಾಗೆ ಮಾಡಿದ್ದೇವೆ ಮತ್ತು ಈ ವಿಧಾನ ಜ್ಞಾನಶಕ್ತಿಯಿಂದಲೇ ನಡೆದಿದೆ. ಕರ್ಮವನ್ನು ಸುಡುವ ಶಕ್ತಿ ಒಂದು ಯೋಗಶಕ್ತಿಗೆ (ಜ್ಞಾನಶಕ್ತಿ) ಹೊರತು ಇತರ ಯಾವುದಕ್ಕೂ ಇಲ್ಲವೆಂದು ಸಹ ತಿಳಿಸಿದ್ದೇವೆ. ಏಸುಪ್ರಭು ಹತ್ತಿರ ಸ್ವಸ್ಥತೆ ಹೊಂದಿ ಪುನಃ ಆತನ ಮೇಲೆ ಕಲ್ಲು ಬೀಸಿದವರು ಪೂರ್ವದಲ್ಲಿ ಇದ್ದರು. ಅಂತಹ ಮಾನವೀಯತೆಯೇ ಅಲ್ಲವೆ! ಈದಿನವೂ ಸಹ ಇದೆ. ಆದ್ದರಿಂದ ಅವರಕೆಲಸ ಮುಗಿದುಹೋದ ತಕ್ಷಣ ಕಲ್ಲು ಹಾಕದಂತೆ ಹೋಗಿದ್ದಾರೆ ಅದಕ್ಕೆ ಸಂತೋಷಿಸಬೇಕು.

**ಪ್ರಶ್ನೆ ॥ ನೀವು ಎಷ್ಟೋ ರಚನೆಗಳು ಸಾಗಿಸುತ್ತಿದ್ದೀರಾ. ಈಗಿನ ಕಾಲದಲ್ಲಿ ಕೆಲವು ಸಾವಿರಾರು ಹಣವಿದ್ದರೂ ಸಹ ಒಂದು ಪುಸ್ತಕವನ್ನು ಅಚ್ಚುಹಾಕಲಾರೆವು. ಅಂತಹದರಲ್ಲಿ ನೀವು ಕೆಲವು ಲಕ್ಷಗಳ ಹಣ ಖರ್ಚಿಟ್ಟು ಪುಸ್ತಕಪ್ರಚಾರ ಸಾಗಿಸಿ**

**ಸಾಲಗಳ ಪಾಲಾಗಿದ್ದೀರ. ನೀವು ಅಧಿಕ ಬಡ್ಡಿಗಳಿಗೆ ಹಣ ತೆಗೆದುಕೊಂಡು ಅಂದುಕೊಂಡಾಗ ಅಂದುಕೊಂಡ ಕೆಲಸವನ್ನು ನೆರವೇರಿಸುತ್ತಿದ್ದೀರಾ. ಮತ್ತೆ ಸ್ವಯಂಕೃಷಿಯಿಂದಲೇ ಸಾಲಗಳು ತೀರಿಸುತ್ತಿದ್ದೀರಾ. ನೀವು ಮಾಡದ ಕೆಲಸವಂತು ಇಲ್ಲ. ನೀವೊಬ್ಬ ಗುರುವಾಗಿ ಇಷ್ಟು ಕೆಲಸಗಳು ಸ್ವತಃಮಾಡಿ ಹಣ ಖರ್ಚುಮಾಡಿ ನಿಮ್ಮ ಧ್ಯೇಯಕ್ಕೆ ವಿನಿಯೋಗಿಸುವುದಕ್ಕಿಂತ, ನೀವು ಎಲ್ಲರ ಗುರುಗಳಂತೆ ಕೆಲವು ಊರುಗಳಲ್ಲಿ ಉಪನ್ಯಾಸ ಕಾರ್ಯಕ್ರಮಗಳು ಏರ್ಪಡಿಸಿ ಕಾಣಿಕೆಗಳು ತೆಗೆದುಕೊಳ್ಳ ಬಹುದಲ್ಲವೆ?**

ಜ ॥ ಅದು ನನಗೆ ಇಷ್ಟವಾಗದ ಕೆಲಸ. ನನ್ನ ಮೂಲಕ ನಡೆಯುವ ಪ್ರತಿ ಕೆಲಸಕ್ಕೆ ಸಹಕರಿಸಬೇಕೆನ್ನುವವರು ಅವರ ಶ್ರಮದಾನದಿಂದಲೇ ಸಹಕರಿಸಬೇಕೆಂದು, ಹಾಗೆ ಮಾಡಿದಾಗಲೇ ಬಹಳ ಫಲಿತ ಅವರಿಗೆ ದಕ್ಕುತ್ತದೆ ಎಂದು ನನ್ನ ಭಾವ.

**ಪ್ರಶ್ನೆ ॥ ಹಾಗೆ ನಿಮಗೆ ಶ್ರಮರೂಪವಾಗಿ ಶ್ರಮಿಸುವವರಿದ್ದಾರೆಂಬ ತೃಪ್ತಿ ನಿಮಗಿದೆಯಾ?**

ಜ ॥ ಇದೆ. ನನ್ನನ್ನು, ನನ್ನ ಉದ್ದೇಶವನ್ನು ಅರ್ಥ ಮಾಡಿಕೊಂಡು ಶ್ರಮಿಸುವುದಕ್ಕೆ ನನಗೋಸ್ಕರ ಅವರ ಪ್ರಾಣಗಳನ್ನು ಸಹಿತವು ಲೆಕ್ಕಮಾಡದವರಿದ್ದಾರೆ. ಆದ್ದರಿಂದಲೇ ನಾನು ಎಲ್ಲರಿಗೋಸ್ಕರ ಅಲ್ಲ ಕೆಲವರಿಗೋಸ್ಕರವೇ ಎನ್ನುವ ಸಮಾಧಾನದಿಂದ ಹೆಚ್ಚಿನ ಉತ್ಸಾಹದಿಂದ ಜ್ಞಾನ ತಿಳಿಸುತ್ತಿದ್ದೇವೆ.

**ಪ್ರಶ್ನೆ ॥ ಸ್ವಲ್ಪಕಾಲ ನಿಮಗೆ ಸಾಲಾಗಿ ಕಷ್ಟಗಳೇ ಎದುರಾಗಿವೆ ಅಂದುಕೊಳ್ಳಿ. ಆಗ ಹೀಗೆಯೇ ಜ್ಞಾನ ತಿಳಿಸುತ್ತೀರಾ?**

ಜ ॥ ಕಷ್ಟಸುಖಗಳು ಕರ್ಮಫಲಿತಗಳು, ಪ್ರಕೃತಿ ಸಂಬಂಧವಾದವು. ಆದ್ದರಿಂದ ಕರ್ಮ ನಿರ್ಣಯದ ಪ್ರಕಾರವೇ ಅವು ಸಂಭವಿಸುತ್ತವಾಗಲಿ ಅವುಗಳಿಗೆ ಜ್ಞಾನಪರ ವಾಗಿ ಹಿಂಜರಿಯಬಾರದು. ಬರುವ ಕಷ್ಟಗಳು ಬಾರದೆ ಇರುವುದಿಲ್ಲವೆಂದು ತಿಳಿಸುತ್ತಿರುವ ನಾವೇ ಜ್ಞಾನದಲ್ಲಿ ಹಿಂದೆಜ್ಜೆ ಹಾಕಿದರೆ ದೃಢನಿರ್ಣಯವೆಂಬುದಕ್ಕೆ ಅರ್ಥವೇ ಇರುವುದಿಲ್ಲ.

ಇದು ಒಬ್ಬ ಗುರು ತಲೆಯಲ್ಲಿ ಹೊಳೆದ ಬುದ್ಧಿಯೊಂದರ ಎರಡು ವಿವರಗಳು ನಿಮಗೆ ತಿಳಿಸಿದ್ದೇವೆ. ಈಗಿನ  ಕಾಲದಲ್ಲಿ ಗುರುಗಳಾಗಿ ಭೂಮಿ ಮೇಲೆ ಕೊನೆಸಾಗುವುದು ಬಹಳ ಕಷ್ಟ. ಆದ್ದರಿಂದಲೇ ಕೆಲವರು ಹಿರಿಯರು ಅಂದಿದ್ದಾರೆ. ಈ  ಕಾಲದಲ್ಲಿ ನೂರು ಜನ ಗುರುಗಳ ಹತ್ತಿರ ಶಿಷ್ಯನಾಗಿರಬಹುದು ಆದರೆ, ಒಬ್ಬ ಶಿಷ್ಯನಿಗೆ ಗುರುವಾಗಿರುವುದು ಕಷ್ಟವೆಂದಿದ್ದಾರೆ. ಅಂದರೆ ಗುರು ಎನ್ನುವ ಪದವಿ ಬಹಳ ಕಷ್ಟತರವಾದುದ್ದಾಗಿ ಅವರು ಹೇಳುತ್ತಿದ್ದಾರೆ. ಇನ್ನು ಅಸಲಾದ ಗುರುಗಳಾಗಿ ನಡೆಯಬೇಕೆಂದರೆ ಮತ್ತಷ್ಟು ಕಷ್ಟ. ಭೂಮಿಮೇಲೆ ಗುರುಗಳು ಕಡಿಮೆಯಾದರೆ ಜ್ಞಾನವೆಂಬುದೇ ಕಾಣಿಸದಂತೆ ಹೋಗುತ್ತದೆ. ಆದ್ದರಿಂದ ನೀವಾದರು ಗುರುಗಳಿಗೆ ಗೌರವಕೊಡಿ.

# ಭಗವಂತನ ಬರುವಿಕೆ

ದೇವರು ಎನ್ನುವವನು ಎಲ್ಲಾಮತಗಳಿಂದಲು ಪೂಜಿಸಲ್ಪಡುವವನು. ಎಲ್ಲಾ ಮತದವರು ಅವರವರ  ಪ್ರವಕ್ತರು ಬೋಧಿಸಿದ ಹೆಸರಿನ ಮೇಲೆ ದೇವರನ್ನು ಬೇಡಿಕೊಳ್ಳುತ್ತಿರುತ್ತಾರೆ. ಭಿನ್ನ ಮತದವರು ಎಷ್ಟೋ ಭಿನ್ನ ಆರಾಧನೆ ಗಳಿಂದ ಆರಾಧಿಸಿದರೂ ಅವರ ಆರಾಧನೆ ಎಲ್ಲವೂ ದೇವರನ್ನು ಕುರಿತೇ, ವಿಶಾಲ ದೃಷ್ಟಿಯಿಂದ ನೋಡಿದಾಗ ಎಲ್ಲಾ ಮತದವರ ಹೃದಯಗಳಲ್ಲಿ ದೇವರನ್ನು ಕುರಿತು ಸ್ಮರಣೆ ಇದೆ. ಪ್ರಪಂಚಕ್ಕೆಲ್ಲ ಆದಿಕರ್ತನಾದ ದೇವರು ಒಬ್ಬನಿದ್ದಾನೆಂದು ಮತಗಳೆಲ್ಲ ಹೇಳಿಕೊಳ್ಳುತ್ತಿವೆ. ಸೃಷ್ಟಿಕರ್ತನಾದ ಆ ದೇವರ ಸನ್ನಿಧಾನವನ್ನು ಸೇರುವುದಕ್ಕೆ ಎಲ್ಲಾ ಮತಗಳ ಪ್ರಜೆಗಳು ಬಳಲುತ್ತಿದ್ದಾರೆ.

ಮಾನವನು ಯಾವುದೋ ಒಂದು ಮತವನ್ನು ಆಧಾರ ಮಾಡಿಕೊಂಡು, ದೇವರನ್ನು ತಿಳಿದುಕೊಳ್ಳುವುದಕ್ಕೆ ಮಾಡುವ ಪ್ರಯತ್ನವೇ ದೈವಾರಾಧನೆ. ಕಾಲ ನಡೆದಂತೆಲ್ಲ ಮತ ಒಂದರ ಉದ್ದೇಶ ದೇವರನ್ನು ತಿಳಿಯುವುದಕ್ಕೆ ಎಂದು ಮರೆತು, ಮತವನ್ನು ವೃದ್ಧಿಗೊಳಿಸುವುದೇ ಮುಖ್ಯ ಉದ್ದೇಶವಾಗಿ ಮನುಷ್ಯರು

ಇಟ್ಟುಕೊಳ್ಳುವುದು ನಡೆದಿದೆ. ಮತದಲ್ಲಿನ ಸಾರಾಂಶವಾದ ದೈವಚಿಂತನೆ ಬಿಟ್ಟು, ದೇವರಿಗೋಸ್ಕರ ಏನು ತ್ಯಾಗ ಮಾಡಲಾರದ ಮಾನವನು ಮತಕ್ಕೋಸ್ಕರ ಪ್ರಾಣವನ್ನಾದರು ಬಿಡುವ ಸ್ಥಿತಿಗೆ ಸೇರಿದ್ದಾನೆ. ಇಂತಹ ಸಮಯದಲ್ಲಿ ಮತ ದೊಡ್ಡದಾ? ಮತದ ಮೂಲಕ ತಿಳಿಯಲ್ಪಡುವ ದೈವ ದೊಡ್ಡದಾ? ಎನ್ನುವ ಪ್ರಶ್ನೆ ಕೆಲವರಿಗೆ ಉದ್ಭವಿಸದೆ ಇರುವುದಿಲ್ಲ. ಯಾವುದು ದೊಡ್ಡದೋ ಹೇಳಬೇಕಾಗಿರುವವನು ದೇವರೆ. ಮಾನವನು ಮತೋನ್ಮಾದನಾಗಿ ದೈವವನ್ನೇ ಮರೆತು ಆತನು ಹೇಳಿದಂತೆ ನಡೆಯದ ದಿನ, ಮತ್ತೆ ಆತನೇ ಬಂದು ಇದು ನೀವು ಆಚರಿಸಬೇಕಾಗಿರುವುದು, ಇದು ಆಚರಿಸಬಾರದೆಂದು ತಿಳಿಸಬೇಕು. ಎಂತಹ ಬಿಳಿ ಗೋಡೆಯಾದರು ಹೊಗೆ ಇರುವುದರಿಂದ ಸ್ವಲ್ಪಕಾಲಕ್ಕೆ ಸ್ವಲ್ಪ ತನ್ನ ಬಿಳಿತನವನ್ನು ಕಳೆದುಕೊಂಡಂತೆ, ನಿಷ್ಕಲ್ಮಷ ಹೃದಯವಿರುವ ಮಾನವನು ಮಾಯ (ಸಾತಾನ್) ಒಂದರ ಸಂಬಂಧದಿಂದ ಅಜ್ಞಾನಿಯಾಗಿ ಬದಲಾ ಗುತ್ತಿದ್ದಾನೆ. ಕೊಳಕಾದ ಗೋಡೆಗೆ ಸುಣ್ಣ ಬಳಿದು ಮತ್ತೆ ಬಿಳಿತನವನ್ನು ಕೈಗೂಡಿ ಸಿದಂತೆ, ದೇವರು ಮಾನವನನ್ನು ಮತ್ತೆ ಜ್ಞಾನಿಯಾಗಿ ಬದಲಾಯಿಸುವುದಕ್ಕೆ ಆಗಾಗ ಭೂಮಿಮೇಲೆ ಅವತರಿಸಿ, ತನ್ನ ವಾಕ್‌ಗಳನ್ನು (ಧರ್ಮಗಳನ್ನು) ತಿಳಿಸಿ ಹೋಗುತ್ತಿರುತ್ತಾನೆ. ಆದರೆ ಆತನು ಯಾವಾಗ ಬರುತ್ತಾನೋ, ಯಾವಾಗ ಹೋಗುತ್ತಾನೋ ಯಾರಿಗೂ ತಿಳಿಯದು.

ಅಧರ್ಮಪರನಾದ ಮಾನವನನ್ನು ಧರ್ಮಪರನಾಗಿ ಬದಲಾಯಿಸು ವುದರಿಂದ ದೇವರು ಮಾನವನಾಗಿ ಹುಟ್ಟಿ ಬಂದಾಗ, ಆತನನ್ನು ಗುರ್ತಿಸುವುದಕ್ಕೆ ಒಂದೇ ಒಂದು ಅವಕಾಶ ಇದೆ. ಆತನು ತಿಳಿಸುವ ಧರ್ಮಗಳನ್ನನುಸರಿಸಿ ಈ ವ್ಯಕ್ತಿ ಯಾರೆಂದು ಯೋಚಿಸಿ ತಿಳಿದುಕೊಳ್ಳುವ ಅವಕಾಶ ಇದ್ದರೂ, ಆತನು ಅಷ್ಟು ಸುಲಭವಾಗಿ ಸಿಗುವವನು ಅಲ್ಲ. ಅಂಥವನನ್ನೆ ಭಗವಂತನೆಂದು ಎನ್ನುತ್ತಿದ್ದೇವೆ. ದೇವರು ಮಾನವನಾಗಿ ಬಾರದ ಮೊದಲೆ, ಅಣುಅಣುನಲ್ಲಿ ವ್ಯಾಪಿಸಿ ಆಕಾರವಿಲ್ಲದ್ದಾಗಿ ಎಲ್ಲಾಕಡೆ ಇರುವ ವೇಳೆ, ಆ ದೈವವನ್ನು ಯಾವ ಹೆಸರಿಟ್ಟು ಕರೆಯಲಾರೆವು. ಆದ್ದರಿಂದಲೇ ಪುರುಷರಿಗಿಂತ ಉತ್ತಮವಾದ

ಪುರುಷೋತ್ತಮನೆಂದು, ಆತ್ಮಗಿಂತ ಪರವಾದ ಪರಮಾತ್ಮನೆಂದು ಅರ್ಥಗಳನ್ನು ತಿಳಿಸುವ ಪದಗಳೇ ಬಳಸಿದ್ದೇವೆ. ಪರಮಾತ್ಮ, ಪರಮ ಪುರುಷ ಎನ್ನುವವು ಹೆಸರುಗಳು ಅಲ್ಲ. ವಿಶ್ವವ್ಯಾಪಕವಾದ ಆ ದೇವರೆ ಮಾನವಾಕೃತಿ ಧರಿಸಿದ ವೇಳೆ ಆತನನ್ನು ಭಗವಂತನೆಂದು ಒಂದು ಹೆಸರಿಟ್ಟು ಕರೆಯುವುದು ನಡೆಯುತ್ತಿದೆ. ಅಷ್ಟು ದೊಡ್ಡ ದೇವರಿಗೆ ಆಕಾರ ಬಂದಿರುವ ವೇಳೆ ಭಗವಂತನೆಂದು ಎನ್ನುವುದು ಏನೋ ದೊಡ್ಡ ವಿಶೇಷವಾಗಿರುತ್ತದೆ. ಆ ಭಗವಾನ್ ಎನ್ನುವ ಹೆಸರನ್ನು ವಿವರಿಸಿ ತಿಳಿದುಕೊಳ್ಳೋಣ.

ಭಗ ಎಂದರೆ ಸ್ತ್ರೀಯ ಗರ್ಭ (ಯೋನಿ) ಎಂದು ಅರ್ಥ. ಭಗವಂತ ನೆಂದರೆ ಸ್ತ್ರೀ ಗರ್ಭದಿಂದ ಹುಟ್ಟಿದವನೆಂದು ಅರ್ಥ. ಓ ಇಷ್ಟೇನಾ! ಇಷ್ಟು ಸಣ್ಣ ಅರ್ಥವೇನಾ!! ಅಂದುಕೊಳ್ಳಬೇಡಿ ಇದು ಬಹಳ ದೊಡ್ಡ ಅರ್ಥವಿರುವ ಪದ. ಇದರಲ್ಲಿ ಏನು ದೊಡ್ಡತನವಿದೆ ಎಂದು ಕೆಲವರಂದುಕೊಳ್ಳಬಹುದು. ನಾವು ಸಹ ಸ್ತ್ರೀಯೋನಿಯಿಂದ ಹುಟ್ಟಿದವರೇ ಅಲ್ಲವೆ! ನಾವು ಸಹ ಭಗವಂತರೆ ತಾನೆ!! ಭಗವಾನ್ ಎಂದರೆ ಯೋನಿಯಿಂದ ಹುಟ್ಟುವುದೇ ಆದರೆ ಆ ದೇವರಿಗೂ ನಮಗೂ ಏನು ವ್ಯತ್ಯಾಸ? ಎಂದು ಸಹ ಕೆಲವರಿಗೆ ಪ್ರಶ್ನೆ ಬಂದಿರುತ್ತದೆ. ಅದಕ್ಕೆ ಸಮಾಧಾನ ಸಹ ತಿಳಿಯಬೇಕಲ್ಲವೆ! ಅಣುವಿಗಿಂತ ಅಣುವಾಗಿ, ಎಲ್ಲದಕ್ಕೂ ಅಧಿಪತಿಯಾಗಿ, ಅವ್ಯಕ್ತನಾಗಿ ಅವಿನಾಶನಾಗಿ ಎಲ್ಲಾ ಶರೀರಗಳಿಗೆ ಶಕ್ತಿಯನ್ನು ಕೊಟ್ಟು ಆಡಿಸುವ ಪರಮಾತ್ಮ, ಪರಮಪಿತ, ಪರಂಧಾಮನಾದ ಆ ದೈವವೊಬ್ಬನೆ ಭಗದಿಂದ ಹುಟ್ಟಬಲ್ಲನು. ಭಗವಂತನು ಆಗಬಲ್ಲನು. ಆತನು ಹೊರತು ಸಕಲ ಭೂಮಂಡಲದಲ್ಲಿ ಯಾವ ಪ್ರಾಣಿ ಭಗದಿಂದ ಹುಟ್ಟಲಿಲ್ಲ, ಭಗವಂತನು ಆಗಲಿಲ್ಲ. ಈ ಮಾತು ಹೇಳುತ್ತಿರುವ ನಮಗೆ ಮೆಂಟಲ್ ಎಫೆಕ್ಟ್ ಬಂದಿದೆ ಎಂದು ನಿಮಗೆ ಅನುಮಾನ ಸಹ ಬಂದಿರುತ್ತದೆ. ಸತ್ಯ ಪ್ರಕಟಣೆ ಬಹಳ ಕಷ್ಟವಾದುದು. ಈಗ ಈ ಮಾತು ಹುಚ್ಚುಮಾತಾಗಿದ್ದರೂ ಇದಕ್ಕೆ ಸ್ವಲ್ಪ ಗೌರವಕೊಟ್ಟು ಯೋಚಿಸಿರೆಂದು ಕೋರುತ್ತಾ ಬರೆಯುತ್ತಿದ್ದೇವೆ.

ಜೀವಿಗಳಾದ ನಾವಾಗಲಿ ಮತ್ತು ಯಾವ ಜೀವರಾಶಿಯಾಗಲಿ ಯೋನಿಯಿಂದ ವಾಸ್ತವವಾಗಿ ಹುಟ್ಟಲಿಲ್ಲ. ನಾವು ಧರಿಸಿದ ಶರೀರಗಳು ಮಾತ್ರ ಸ್ತ್ರೀಯೋನಿಯಿಂದ ಹುಟ್ಟಿವೆ. ಅಷ್ಟೇಯಾಗಲಿ ಶರೀರವನ್ನು ಧರಿಸಿದ ನಾವು ಯಾವ ಸಂದರ್ಭದಲ್ಲಿ ಸಹ ಯೋನಿಯಿಂದ ಹುಟ್ಟಲಿಲ್ಲ. ಅಂದರೆ ಸಜೀವವಾಗಿ ನಾವು ಗರ್ಭದಿಂದ ಬರಲಿಲ್ಲ. ನಮ್ಮ ಶರೀರವು ಗರ್ಭದಿಂದ ಹೊರಬಿದ್ದ ನಂತರ ಅದರೊಳಗೆ ಹಳೆವಸ್ತ್ರ ಬಿಟ್ಟು ಹೊಸವಸ್ತ್ರವನ್ನು ಧರಿಸಿದಂತೆ ಹಳೇಶರೀರವನ್ನು ಬಿಟ್ಟು ಹೊಸಶರೀರದಲ್ಲಿ ಸೇರುತ್ತಿದ್ದೇವೆ. ಪರಿಮಿತವಾದ ಜೀವಾತ್ಮ ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರದವರೆಗೂ ಪ್ರಯಾಣಿಸುತ್ತಿದೆ. ಆದರೆ ದೇವರು ಅಪರಿಮಿತವಾದವನು, ಒಂದು ಕಡೆ ಮರಣಿಸಿ ಮತ್ತೊಂದು ಕಡೆ ಹುಟ್ಟುವವನು ಅಲ್ಲ, ಆತನು ಕರ್ಮಕೈಯಲ್ಲಿ ಇಲ್ಲದವನು. ಸ್ತ್ರೀ ಶರೀರದಲ್ಲಿ ಸಹ ಚೈತನ್ಯವಾಗಿದ್ದಾನೆ. ಆತನು ಗರ್ಭದಿಂದ ಸಜೀವವಾಗಿ ಹುಟ್ಟುತ್ತಿದ್ದಾನೆ. ಗರ್ಭದಿಂದ ಯಾವನಾದರೆ ಸಜೀವವಾಗಿ ಹುಟ್ಟಿದ್ದಾನೋ ಆತನಿಗೇ "ಭಗವಾನ್" ಎನ್ನುವ ಪದ ಅನ್ವಯಿಸುತ್ತದೆ. ಗರ್ಭದಿಂದ ಹೊರಬಿದ್ದ, ಚೈತನ್ಯರಹಿತವಾಗಿರುವ ಶರೀರವನ್ನು ಸೇರುವ ಜೀವಾತ್ಮಗಳಿಗೆ ಎಂದಿಗೂ ಭಗವಾನ್ ಎನ್ನುವ ಹೆಸರು ಅನ್ವಯಿಸುವುದಿಲ್ಲ. **(ನಿಮಗೆ ಈ ವಿಷಯ ಪೂರ್ತಿಯಾಗಿ ಅರ್ಥ ಆಗಬೇಕೆಂದರೆ ನಮ್ಮ ರಚನೆಯಲ್ಲಿನ "ಜನನ ಮರಣ ಸಿದ್ಧಾಂತವೆಂಬ" ಗ್ರಂಥವನ್ನು ಓದಿರಿ.)**

ಮಾನವನಲ್ಲಿ ಅಧರ್ಮಗಳು ಹೆಚ್ಚಾದಾಗ, ಧರ್ಮಗಳಿಗೆ ಆಪತ್ತು ಉಂಟಾದಾಗ ಭೂಮಿ ಮೇಲೆ ಆತನು ಬರುವುದು, ಆತನು ಇರುವಿಕೆ ಯಾರಿಗೂ ಗೊತ್ತಿಲ್ಲವೆಂದು ಸಹ ಇದೆ. ದೊಡ್ಡ ರಹಸ್ಯವಾದ ಆತನ ಅವತಾರವನ್ನು ಗುರ್ತಿಸಿದವರಿಗೆ ಯಾವ ಯೋಗದಿಂದ ಕೆಲಸವಿಲ್ಲದೆ ಮೋಕ್ಷ ಪಡೆಯುತ್ತಾರೆಂದು ಸಹ ಇದೆ. ದೇವರೊಂದರ ಹುಟ್ಟುವಿಕೆ ಎಲ್ಲಿ ಯಾವ ಕಾಲದಲ್ಲಿ ನಡೆಯುತ್ತದೋ ತಿಳಿಯದಿರುವಾಗ, ಭೂಮಿ ಮೇಲೆ ಒಂದೇ ಕಾಲದಲ್ಲಿ ಎಷ್ಟೋಜನ ಭಗವಾನ್ ಎಂಬ ಹೆಸರುಹೊಂದಿದವರು ಇದ್ದಾರಲ್ಲವೆ! ಪರಿಶೀಲಿಸಿ ನೋಡಿದರೆ ಭೂಮಿ

ಮೇಲೆ ಭಗವಾನ್ ಎಂದು ಹೆಸರು ಇಟ್ಟುಕೊಂಡ ಸ್ವಾಮಿಗಳು, ಯೋಗಿಗಳು ಈಗಲೂ ನೂರಾರು ಸಂಖ್ಯೆಯಲ್ಲಿ ಇದ್ದಾರೆ ಇವರೆಲ್ಲಾ ಭಗವಂತರು ಅಲ್ಲವಾ? ಇಷ್ಟು ಜನರಲ್ಲಿ ನಿಜವಾದ ಭಗವಾನ್ ಯಾರು? ಎನ್ನುವ ಸಂಶಯ ನನಗೂ ನಿಮಗೂ ಎಲ್ಲರಿಗೂ ಉದ್ಭವಿಸುತ್ತದೆ. ಈ ಪ್ರಶ್ನೆಗೆ ಉತ್ತರ ಹುಡಿಕಿದರೆ ಭೂಮಿ ಮೇಲೆ ಒಂದು ಸಮಯದಲ್ಲಿ, ಒಬ್ಬ ಭಗವಂತನು ಯಾವಾಗಲೋ ಒಂದುಸಲ ಇರಬಹುದು ಆದರೆ, ಎಲ್ಲಾ ಕಾಲದಲ್ಲಿಯೂ ಎಷ್ಟೋಜನ ಭಗವಾನರು ಇರುವುದು ಅಸಂಭವ. ಮತ್ತು ಇರುವವರೆಲ್ಲ ಬರೀ ಭಗವಾನರೆ. ನಿಜ ಭಗವಂತನೆಲ್ಲಿಯಾದರು ಇರಬಹುದೇನೋ! ಒಂದುವೇಳೆ ಇದ್ದರೆ ಆ ಒಬ್ಬನು ಹೊರತು ಪಡಿಸಿ ಉಳಿದವರೆಲ್ಲಾ ಸಾಮಾನ್ಯ ಮಾನವರೇ, ಭಗವಾನರು ಅಲ್ಲ.

ದೇವರೆ ಶರೀರ ಧರಿಸಿ ಈಗ ಭೂಮಿ ಮೇಲೆ ಇದ್ದಾನೆಂದುಕೊಳ್ಳೋಣ, ಆತನಿಗೆ ಮಾತ್ರ ಭಗವಾನ್ ಎನ್ನುವ ಮಾತು ಅನ್ವಯಿಸುತ್ತದೆ. ಆದರೆ ಆತನು ಭಗವಾನ್ ಎನ್ನುವ ಗುರುತಿನಿಂದ ಯಾವ ಕಾರಣಕ್ಕು ಇರುವುದಿಲ್ಲ. ಆತನು ಇರುವಾಗ ಗ್ರಹಿಸುವುದು ಕಷ್ಟ. ಆತನು ಹೋದ ನಂತರ ಅರ್ಥವಾದಾಗ ಇಂತಹ ಜನ್ಮ ದೇವರದು ಎಂದು ಗ್ರಹಿಸುತ್ತೇವೆ. ಒಂದುವೇಳೆ ಶರೀರದಿಂದ ಇರುವಾಗಲೇ ಗ್ರಹಿಸಿದರೆ ಯಾವ ಯೋಗವಾಚರಿಸದಿದ್ದರೂ ಭೀಷ್ಮನಂತೆ ಮೋಕ್ಷ ಪಡೆಯಬಹುದು. ದೈವವು ಮಾನವ ರೂಪವಾಗಿ ಬಂದು, ಮಾನವ ಪರಿಧಿಯಲ್ಲಿಯೇ ಮಾನವನಂತೆ ನಟಿಸಿ, ತಾನು ಸ್ವಲ್ಪವೂ ಹೊರಬೀಳದಂತೆ ಧರ್ಮಗಳನ್ನು ತಿಳಿಸಿಹೋಗುತ್ತಿರುತ್ತಾನೆ. ಆ ಭಗವಂತನೆ "ನಾನು ಭಗವಂತ ನೆಂದು" ತಿಳಿಯದಂತೆ ಜಾಗ್ರತೆಪಟ್ಟು, ರಹಸ್ಯವಾಗಿಯೇ ಕಾಲ ಕಳೆದು, ತನ್ನ ಧರ್ಮಗಳನ್ನು ಮಾತ್ರ ಇಲ್ಲಿ ತಿಳಿಸಿ ತಾನುಮಾತ್ರ ತಪ್ಪಿಸಿಕೊಂಡು ಹೋಗುತ್ತಿದ್ದಾನೆ. **'ಭಗವಾನ್'** ಎನ್ನುವ ಪದಕ್ಕೆ ಅರ್ಥ ತಿಳಿಯದೆ ಎಷ್ಟೋಜನ ಭಗವಾನರಾಗಿ ನೆಲೆಸಿದ ಈಕಾಲದಲ್ಲಿ ನಿಜವಾದ ಭಗವಾನ್ ತಪ್ಪದೆ ಬಂದು ಅಧರ್ಮಗಳನ್ನು ಖಂಡಿಸಿ ಧರ್ಮಗಳನ್ನು ತಿಳಿಸುವುದು ಎಷ್ಟಾದರೂ ಅವಸರ. ಆ ಭಗವಾನ್ ಯಾವಾಗ ಬರುತ್ತಾನೋ ಸಾವಿರಕಣ್ಣುಗಳಿಂದ ನೋಡುತ್ತಾ, ಬಂದರೆ

ತಿಳಿಯದಂತೆ ಬಂದುಹೋಗುವ ಆ ಕಳ್ಳ ಭಗವಂತನನ್ನು ತಿಳಿದುಕೊಳ್ಳುವುದಕ್ಕೆ ಸಾವಿರ ತಲೆಗಳಿಂದ ಯೋಚಿಸುತ್ತಾ ಇರೋಣ.

**(ದಯೆ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯಗಳು ಇರುವವನು ಭಗವಂತನೆಂದು ಕೆಲವರ ವಾದ, ಆದರೆ ಅದು ಸರಿಯಾದ ಸತ್ಯವಲ್ಲವೆಂದು ತಿಳಿಯಬೇಕು. ಭಗದಿಂದ ಹುಟ್ಟಿದವರೆ ಭಗವಂತರೆಂದು ತಿಳಿಯಬೇಕು. ದೇವರೊಬ್ಬನಿಗೆ ಭಗದಿಂದ ಹುಟ್ಟುವ ಅವಕಾಶ ಇದೆಯೆಂದು ಸಹ ತಿಳಿಯಬೇಕು.)**

# ಯೋಗಿ ಎಂದರೆ ಯಾರು

ನಾವು ಚಿಕ್ಕವರಿರುವಾಗ ಯೋಗಿಗಳು, ಸನ್ಯಾಸಿಗಳು ಎಂದರೆ ಕೇಳಿಕೊಂಡು ತಿನ್ನುವವರೆಂದು ಭಾವಿಸುತ್ತಿದ್ದೆವು. ಅಂದಿನ ನಮ್ಮ ಹಿರಿಯರಲ್ಲಿ ಸಹ ಆ ಭಾವನೆಯೇ ಇದ್ದು ಆ ವಿಧವಾಗಿಯೇ ಮಾತನಾಡುವುದರಿಂದ, ಅವರ ಹತ್ತಿರ ಬೆಳೆದ ನಮಗೂ ಸಹ ಯೋಗಿಗಳೆಂದರೆ ಕೇಳಿಕೊಂಡು ತಿನ್ನುವ ಸಾಧುಗಳೆಂದು ಅಂದುಕೊಳ್ಳುತ್ತಿದ್ದೆವು. ಈದಿನ ಸಹ ಬಹಳಜನ ಅಜ್ಞಾನ ಜನರಲ್ಲಿ ಸನ್ಯಾಸಿ, ಯೋಗಿ ಎಂದರೆ ಕಡಿಮೆ ಭಾವನೆ ಇದೆ. ಸ್ವಲ್ಪ ಕೆಟ್ಟದಾರಿ ಹಿಡಿಯುವವನನ್ನು **'ಏನೋ ನೀನು ಸನ್ಯಾಸಿ ಆಗಬೇಕೆಂದು ಇದ್ದೀಯಾ'** ಎನ್ನುತ್ತಿದ್ದಾರೆ. ಇದರಿಂದ ಎಲ್ಲಾ ವಿಧಗಳು ಕೆಟ್ಟುಹೋದವರನ್ನು ಸನ್ಯಾಸಿಗಳೆಂದು ಈಗಿನ ಕೆಲವರ ಭಾವನೆ. ಆದರೆ ಸ್ವಲ್ಪ ಜ್ಞಾನ ತಿಳಿದವರು ಯೋಗಿಗಳೆಂದರೆ ದೊಡ್ಡವರೆಂಬ ಭಾವಹೊಂದಿದ್ದಾರೆ.

ಈಗಿನ ಕಾಲದಲ್ಲಿ ಸಹ ಜ್ಞಾನ ತಿಳಿದ ದೊಡ್ಡ ಯೋಗಿಗಳು ಕೆಲವರು ಅಲ್ಲಲ್ಲಿ ಇದ್ದಾರೆ. ಅಂತಹ ಯೋಗಿಗಳು ಅಪರೂಪವಾಗಿ ಎಲ್ಲಿಯೋ ಒಂದುಕಡೆ ಕಾಣಿಸುತ್ತಿದ್ದರೂ ಕೆಲವರು ಯೋಗಿಗಳಲ್ಲದವರು ಸಹ ನಾವು ಯೋಗಿಗಳು ಎಂದು ಪ್ರಚಾರ ಮಾಡಿಕೊಳ್ಳುತ್ತಿದ್ದಾರೆ. ಹೀಗೆ ನಿಜಯೋಗಿಗಳು ಸುಳ್ಳು ಹೇಳುವ ಯೋಗಿಗಳು ಎರಡು ವಿಧಗಳಾಗಿ ಭೂಮಿಮೇಲೆ ಇದ್ದಾರೆ. ಸಂಪೂರ್ಣ

ಜ್ಞಾನವಿಲ್ಲದ ಮನುಷ್ಯ ಸತ್ಯಾಸತ್ಯಯೋಗಿಗಳನ್ನು ಗುರುತಿಸಲಾರದೆ ಎಲ್ಲರನ್ನು ಯೋಗಿಗಳಾಗಿಯೇ ಲೆಕ್ಕಿಸುತ್ತಿದ್ದಾನೆ. ತಿಳಿಯದಿರುವುದರಿಂದ ಯೋಗಿಯಲ್ಲದವನನ್ನು ಸಹ ಯೋಗಿಯೇ ಅಂದುಕೊಳ್ಳುತ್ತಿದ್ದಾನೆ. ಆದ್ದರಿಂದ ಕೆಲವರು ಜ್ಞಾನ ಜಿಜ್ಞಾಸಿಗಳು, ಕೆಲವರು ಯೋಗಾಸಕ್ತರು ಯೋಗಿ ಅಲ್ಲದಿರುವಂತಹ ವರನ್ನು ಆಶ್ರಯಿಸುವ ಅವಕಾಶ ಸಹ ಇದೆ. ಆ ವಿಧವಾಗಿ ಆಶ್ರಯಿಸಿದವರು ಅಸತ್ಯದ ಯೋಗಿ ಹೇಳಿದ ಯಾವುದೋ ಒಂದು ಸಾಧನೆ ಮಾಡುತ್ತಾ ಅದನ್ನೇ ನಿಜಯೋಗವಾಗಿ ಭ್ರಮಿಸುವುದು ಸಹ ನಡೆಯುತ್ತಿದೆ. ಅಂಥವರಿಗೆ ನಿಜವಾದ ಯೋಗಿ ಕಾಣಿಸಿದರೂ ಆತನನ್ನು ಗುರುತಿಸದೆ ಹೋಗುವುದಲ್ಲದೆ ಆತನನ್ನೇ ಅನುಮಾನಿಸುವುದು, ಅವಮಾನಿಸುವುದು ಸಹ ನಡೆಯುತ್ತಿದೆ. ಎಷ್ಟೋ ಅರ್ಥವಾಗದ ವಿಷಯಗಳನ್ನು ಸಹಿತವು ವಿವರಿಸಿ ಸಂಶಯರಹಿತ ಮಾಡುವ ದೊಡ್ಡ ಯೋಗಿಗಳನ್ನು ಸಹ ಲೆಕ್ಕ ಮಾಡದೆ ನೀವು ಹೇಳುವ ವಿಷಯಗಳಿಂದ, ನಿಮ್ಮ ಅರ್ಥಗಳಿಂದ ನಮಗೇನು ಅಗತ್ಯವಿಲ್ಲ. ನಮ್ಮ ದಾರಿ ಬೇರೆ ನಾವು ಪ್ರತ್ಯೇಕವಾದ ಯೋಗ ಮಾಡುತ್ತಿದ್ದೇವೆ, ನಮಗೆ ಜ್ಞಾನದ ಅವಶ್ಯಕತೆ ಇಲ್ಲ, ಪುಸ್ತಕಗಳು ಓದಬೇಕಾದ ಕೆಲಸ ಅಷ್ಟಕ್ಕು ಇಲ್ಲವೆಂದು ಎನ್ನುತ್ತಿದ್ದಾರೆ. ಗೀತೆಯಲ್ಲಿ ಹೇಳಿದ ಯೋಗಗಳು ಎರಡೇ ಎರಡಾದರೆ ಅವುಗಳಲ್ಲದ ಮಾರ್ಗಗಳನ್ನಾಶ್ರಯಿಸಿ, ತಾವು ಆಚರಿಸುವುದೇ ನಿಜ ಯೋಗವೆಂದುಕೊಳ್ಳುವವರಿದ್ದಾರೆ. ಇಂತಹ ತಪ್ಪನ್ನು ಯಾವ ವಿಧವಾಗಿಯೂ ಸರಿಮಾಡಿಕೊಳ್ಳುವ ಅವಕಾಶ ಇಲ್ಲದಂತೆ ಅವರಿದ್ದಾರೆ. ಇದಕ್ಕೆಲ್ಲಾ ಕಾರಣ ಅವರಿಗೆ ಸತ್ಯವಾದ ಯೋಗಿಗಳು ಯಾರೆಂದು ತಿಳಿಯದೆಹೋಗುವುದೆ. ಆದ್ದರಿಂದ ಈಗ ಯೋಗಿಗಳ ಬಗ್ಗೆ ತಿಳಿದುಕೊಳ್ಳುವುದು ಮುಖ್ಯವಾದ ವಿಷಯ.

ಯೋಗಶಾಸ್ತ್ರದ ಪ್ರಕಾರ ಜ್ಞಾನ ತಿಳಿದವರನ್ನು ಜ್ಞಾನಿ ಎಂದು, ಯೋಗಸಾಧನೆ ಮಾಡುವವನನ್ನು ಯೋಗಸಾಧಕನೆಂದು, ಆತ್ಮಶಕ್ತಿಯನ್ನು ಹೊಂದಿದವನನ್ನು ಯೋಗಿ ಎನ್ನುವುದು ಇದೆ. ಯೋಗಿ ಜ್ಞಾನಿಗಳಿಗಿಂತ, ತಪಸ್ವಿಕರಿಗಿಂತ, ಯೋಗಸಾಧಕರಿಗಿಂತ ದೊಡ್ಡವನೆಂದು ಗೀತೆಯಲ್ಲಿ ಆತ್ಮ

ಸಂಯಮಯೋಗದಲ್ಲಿ 46ನೇ ಶ್ಲೋಕದಲ್ಲಿ ದೇವರೇ ಹೀಗೆ ಹೇಳಿದ್ದಾನೆ. **'ತಪಸ್ವಿ ಭ್ಯೋಧಿಕೋ ಯೋಗೀ ಜ್ಞಾನಿ ಭ್ಯೋಪಿ ಮತೋಧಿಕಃ ಕರ್ಮಿ ಭ್ಯ ಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ'** ಇಲ್ಲಿ ಎಲ್ಲರಿಗಿಂತ ಯೋಗಿಯೇ ಅಧಿಕನಾದಾಗ, ಯೋಗಿಯನ್ನು ಗುರುತಿಸುವುದಕ್ಕೆ ಮಾರ್ಗಗಳು ಇವೆಯಾ ಎಂದು ಯೋಚಿಸಬೇಕು. ಆ ವಿಧವಾಗಿ ಯೋಚಿಸಿದರು ಬಾಹ್ಯವಿಧಾನಗಳಿಂದ ಅಂದರೆ ವೇಷ ಭೂಷಣಗಳಿಂದ ಯಾರು ಯೋಗಿಯನ್ನು ಗುರುತಿಸಲಾರರು. ನೋಡಿದ ತಕ್ಷಣ ನಿಜವಾದ ಯೋಗಿಗಳನ್ನು ನಾವು ಗುರುತಿಸುತ್ತೇವೆಂದು ಕೆಲವರು ಅಂದುಕೊಳ್ಳುತ್ತಿರುತ್ತಾರೆ. ಅವರು ಅಂದುಕೊಂಡಂತೆ ಸ್ವಲ್ಪವೂ ಕಣ್ಣಿನ ನೋಟಕ್ಕೆ ಯೋಗತ್ವವು ಗುರುತಿಸಲ್ಪಡುವುದಿಲ್ಲ. ಅಂತಹದರಲ್ಲಿ ಇಂತಹವರೆ ನಿಜಯೋಗಿಗಳೆಂದು, ಅವರನ್ನೇ ಆಶ್ರಯಿಸಬೇಕೆಂದು, ಹೇಗೆ ಗ್ರಹಿಸುತ್ತೇವೆಂದು ಅನುಮಾನ ಬರುತ್ತದೆ. ಇದಕ್ಕೆ ನಮಗೆ ಗೀತಾಶಾಸ್ತ್ರವೇ ಉತ್ತರ ಹೇಳುತ್ತದೆ. ಆತ್ಮಸಂಯಮಯೋಗವೆಂಬ ಅಧ್ಯಾಯದಲ್ಲಿ 1ನೇ ಶ್ಲೋ. **"ಅನಾಶ್ರಿತಃ ಕರ್ಮ ಫಲಂ ಕಾರ್ಯಂ ಕರ್ಮ ಕರೋತಿಯಃ ಸ ಸ ನ್ಯಾಸೀಚ ಯೋಗೀಚ ನನಿರಗ್ನಿರ್ನ ಚಾಕ್ರಿಯಃ"** "ಕರ್ಮಫಲಗಳಾದ ಪಾಪಪುಣ್ಯಗಳು ತನ್ನನ್ನು ಸ್ವಲ್ಪವೂ ಅಂಟದಂತೆ ಕಾರ್ಯಗಳನ್ನು ಕರ್ಮಪ್ರಕಾರ ಮಾಡುವವನು ನಿಜವಾದ ಸನ್ಯಾಸಿ, ನಿಜವಾದ ಯೋಗಿ ಜ್ಞಾನಾಗ್ನಿ ಇಲ್ಲದಂಥವನು ಕೆಲಸಗಳು ಮಾಡದಂತೆ ಇರುವವನು ಯೋಗಿಯಲ್ಲ." ಭಗವಂತನ ಈ ವಾಕ್ಯದಿಂದ ಯಾರು ಯೋಗಿಗಳೋ, ಯಾರು ಯೋಗಿಗಳು ಅಲ್ಲವೊ ತಿಳಿದುಕೊಳ್ಳುವುದಕ್ಕೆ ಅವಕಾಶ ಇದೆ. ಆದರೂ ಪಾಪಪುಣ್ಯಗಳು ತಮ್ಮನ್ನು ಅಂಟದಂತೆ ಯಾರು ಕೆಲಸಗಳು ಮಾಡುತ್ತಿದ್ದಾರೋ, ಯಾರಹತ್ತಿರ ಜ್ಞಾನಾಗ್ನಿ ಇದೆಯೊ, ನಮ್ಮ ಕಣ್ಣಿಗೆ ಕಾಣಿಸುವ ವಿಷಯ ಅಲ್ಲ. ಆದ್ದರಿಂದ ಯೋಗಿಗಳನ್ನು ಗುರುತಿಸುವುದು ಕಷ್ಟ. ಯೋಗಿಗಳು ತಮಷ್ಟಕ್ಕೆ ತಾವು ಇತರರು ತಮ್ಮನ್ನು ಗುರುತಿಸುವಂತೆ ಪ್ರವರ್ತಿಸಿದಾಗ ಮಾತ್ರವೇ ದೇವರು ಹೇಳಿದ ಸೂತ್ರಗಳನ್ನು ಅನುಸರಿಸಿ ಯೋಗಿಗಳನ್ನು ಗುರುತಿಸುವ ಅವಕಾಶ ಇದೆ.

ಜ್ಞಾನ ಎನ್ನುವುದನ್ನು ಆಚರಿಸಿ ಯೋಗ ಮಾಡಿದಾಗ ಯೋಗಶಕ್ತಿ ಲಭಿಸುತ್ತದೆಂದು, ಆ ಯೋಗಶಕ್ತಿಗೆ (ಜ್ಞಾನಶಕ್ತಿಗೆ) ಇಂತಹ ಪ್ರಭಾವ ಇದೆಯೆಂದು ನಿರೂಪಿಸುವ ಯೋಗಿಗಳು ಸಹ ಇದ್ದಾರೆ. ಜ್ಞಾನ, ಯೋಗ, ದೇವರು ಎನ್ನುವುದು ನಂಬಿಕೆ ಮಾತ್ರವೇ ಅಲ್ಲ, ನಿಜವಾಗಲು ನಿರೂಪಿಸುತ್ತೇವೆಂದು ಹೇತುವಾದಿಗಳಿಗೆ ಸಹಿತ ತಿಳಿಸುವ ಸಲುವಾಗಿ ನಿಜಯೋಗಿಗಳು ತಮ್ಮಲ್ಲಿನ ಜ್ಞಾನಾಗ್ನಿಯನ್ನು ಯಾವುದೋ ಒಂದು ಸಂದರ್ಭದಲ್ಲಿ ಬಹಿರ್ಗತ ಮಾಡಿ ನಿರೂಪಿಸುತ್ತಾರೆ. ಅಂತಹ ನಿರೂಪಣೆಗಳು ಯಾವ ವಿಧವಾಗಿ ಇರುತ್ತವೆಂದರೆ ಉದಾಹರಣೆಗೆ ಒಬ್ಬ ಯೋಗಿ ಒಬ್ಬ ಕುರುಡನ ಕಣ್ಣಿನ ಮೇಲೆ ಕೈಯಿಟ್ಟು ಅಂಧತ್ವವನ್ನು ಹೋಗಲಾಡಿಸಿ ದೃಷ್ಠಿ ತರಿಸಿದ್ದಾನೆಂದುಕೊಳ್ಳೋಣ. ಆತನು ಯಾವ ವೈದ್ಯ ಮಾಡದೆಯೇ ಸ್ಪರ್ಶದಿಂದಲೇ ದೃಷ್ಠಿ ಬರುವಂತೆ ಮಾಡಿದ್ದಾನೆ. ತನ್ನಲ್ಲಿನ ಜ್ಞಾನಾಗ್ನಿಯನ್ನು ಮತ್ತೊಬ್ಬನ ಅಂಧತ್ವಕ್ಕೆ ಕಾರಣವಾದ ಪಾಪದ ಮೇಲೆ ಬಿಟ್ಟು ಆ ಪಾಪ ಸುಟ್ಟುಹೋಗುವಂತೆ ಮಾಡಿದ್ದಾನೆ. ಆದ್ದರಿಂದ ಅವನಿಗೆ ದೃಷ್ಟಿ ಗುಣವಾಗಿದೆ. ಅಂತಹ ಸಮಯದಲ್ಲಿ ಆತನನ್ನು ಯೋಗಶಕ್ತಿ ಇರುವ ಯೋಗಿಯಾಗಿ ಗುರುತಿಸುವ ಅವಕಾಶ ಇತರರಿಗಿದೆ. ಮುಖ್ಯವಾಗಿ ಗಮನಿಸಬೇಕಾದ ವಿಷಯ ಏನೆಂದರೆ! "ಅಂತಹ ಶಕ್ತಿಯೇ ಇದ್ದರೆ ದೇಶದಲ್ಲಿರುವ ಕುರುಡರೆಲ್ಲರನ್ನು ಯೋಗಿಗಳು ತಮ್ಮ ಶಕ್ತಿಯಿಂದ ಗುಣಪಡಿಸಬಹುದಲ್ಲವೆ!" ಎಂದು ಕೇಳುವವರು ಕೆಲವರಿರುತ್ತಾರೆ. ಅವರಿಗೆ ನಮ್ಮ ಸಮಾಧಾನ ಏನೆಂದರೆ! ಯೋಗವಾಚರಿಸಿದಾಗಲೇ ಯೋಗಶಕ್ತಿ ಲಭಿಸುತ್ತದೆ. ಯೋಗವಾಚರಿಸಿದಾಗ ತಮಗೆ ಎಷ್ಟು ಶಕ್ತಿ ಲಭಿಸಿದೆಯೋ ಯಾವ ಯೋಗಿಗು ತಿಳಿದಿಲ್ಲ. ಅದು ಯಾವುದೊ ಒಂದು ಸಂದರ್ಭದಲ್ಲಿ ಹೊರಬಿದ್ದಾಗ ಮಾತ್ರ ತಮ್ಮಲ್ಲಿ ಶಕ್ತಿ ಇದೆಯೆಂದು ಸಹ ಯಾವ ಯೋಗಿಗು ಗೊತ್ತಿಲ್ಲ. ಇಲ್ಲಿ ಇನ್ನೊಂದು ಪ್ರಶ್ನೆ ಸಹ ನಮಗೆ ಬರುತ್ತದೆ. ಅದೇನೆಂದರೆ! ತನ್ನಲ್ಲಿ ಶಕ್ತಿ ಇರುವ ವಿಷಯ ಸಹ ತನಗೆ ತಿಳಿಯದೆಹೋದರೆ ಆ ಯೋಗಿ ಇತರರ ಕರ್ಮವನ್ನು ಸುಡುತ್ತೇನೆಂದು ಹೇಗೆ ಅಂದುಕೊಳ್ಳುತ್ತಾನೆ? ಎದುರಿಗಿರುವವನ ರೋಗವನ್ನು ಹೇಗೆ ವಾಸಿಮಾಡಬೇಕೆಂದುಕೊಳ್ಳುತ್ತಾನೆ? ಎಂದು ಕೇಳಬಹುದು. ಅದಕ್ಕೆ ಉತ್ತರ

ಈ ವಿಧವಾಗಿದೆ. ಯಾವ ಯೋಗಿ ಇತರರ ಕರ್ಮವನ್ನು ತೊಲಗಿಸಬೇಕೆಂದುಕೊಳ್ಳುವುದಿಲ್ಲ. ಏಕೆಂದರೆ! ಅವನಲ್ಲಿ ಎಷ್ಟು ಶಕ್ತಿ ಇರುವುದು ಅವನಿಗೆ ಗೊತ್ತಿಲ್ಲ. ಒಂದುವೇಳೆ ಇತರರ ಕರ್ಮವನ್ನು ತೊಲಗಿಸಬೇಕೆಂದುಕೊಂಡರು, ಒಂದು ರೋಗವನ್ನು ಇಲ್ಲದಂತೆ ಮಾಡಬೇಕೆಂದರು, ರೋಗವನ್ನಾಗಲಿ, ದುಃಖವನ್ನಾಗಲಿ ಇಲ್ಲದಂತೆ ಮಾಡುವುದಕ್ಕೆ ಪ್ರಯತ್ನಿಸಿದರೂ ಆಗ ಆ ರೋಗ ವಾಸಿಯಾಗದಂತೆಯೋ, ಆ ದುಃಖ ಹೋಗದಂತೆಯೋ ಇರುವುದು ಸಹ ನಡೆಯುತ್ತಿದೆ. ಒಬ್ಬೊಬ್ಬರ ರೋಗ ವಿಷಯದಲ್ಲಾಗಲಿ, ನೋವಿನ ವಿಷಯದಲ್ಲಾಗಲಿ ಅದೇ ಯೋಗಿ ತಾಕಿದರೆ ವಾಸಿಯಾಗುವುದು ಇದೆ. ಯೋಗಿ ಒಬ್ಬನ ಸಣ್ಣ ನೋವನ್ನು ಇಲ್ಲದಂತೆ ಮಾಡಬೇಕೆಂದು ದೊಡ್ಡ ಪ್ರಯತ್ನ ಮಾಡಿದರು ಆ ನೋವು ಹೋಗದಂತೆ ನಿಂತು ಕೊನೆಗೆ ನನ್ನಲ್ಲಿಯೇ ಶಕ್ತಿಯಿಲ್ಲವೇನೋ ಎಂಬ ಅನುಮಾನವನ್ನು ಯೋಗಿಗೆ ಬರುವಂತೆ ಮಾಡುತ್ತದೆ. ಒಂದುಸಲ ಅದೇ ಯೋಗಿ ಸಣ್ಣ ಪ್ರಯತ್ನ ಮಾಡಿದರು ದೊಡ್ಡ ರೋಗ ಸಹಿತವು ಪೂರ್ತಿ ಗುಣವಾಗುತ್ತದೆ. ಹಾಗೆ ನಡೆಯುವುದಕ್ಕೆ ಕಾರಣ ಏನೆಂದರೆ?

ಯೋಗಿ ಸಂಪಾದಿಸಿಕೊಂಡ ಯೋಗಶಕ್ತಿ ಯೋಗಿದೆ ಆದರೂ ಅದು ಶರೀರದಲ್ಲಿ ಶರೀರಕ್ಕೆಲ್ಲ ಯಜಮಾನನಾದ ಆತ್ಮ ಅಧೀನದಲ್ಲಿ ಇರುತ್ತದೆ. ಆತ್ಮ ಅಧೀನದಲ್ಲಿನದು ಆದ್ದರಿಂದ ಅದನ್ನು ಆತ್ಮಶಕ್ತಿ ಎಂದು ಸಹ ಎನ್ನುತ್ತಿದ್ದೇವೆ. ಒಬ್ಬ ಮನುಷ್ಯ ರೋಗವನ್ನಾಗಲಿ ನೋವನ್ನಾಗಲಿ ಹೋಗಬೇಕೆಂದು ಯೋಗಿ ಶರೀರದಲ್ಲಿನ ಜೀವಾತ್ಮ (ಯೋಗ) ಅಂದುಕೊಂಡರೆ ಆ ವಿಷಯ ಯೋಗಿ ಶರೀರದಲ್ಲಿನ ಆತ್ಮಕ್ಕೆ ಇಷ್ಟವಾದರೆ ತನ್ನ ಅಧೀನದಲ್ಲಿನ ಶಕ್ತಿಯನ್ನು ಬಿಡುಗಡೆ ಮಾಡಿ ಇನ್ನೊಬ್ಬನ ಕರ್ಮವನ್ನು ಸುಟ್ಟುಹಾಕುತ್ತದೆ. ಒಂದುವೇಳೆ ಯೋಗಿ ಆತ್ಮಕ್ಕೆ ಇಷ್ಟವಿಲ್ಲದಿದ್ದರೆ ತನ್ನ ಆಧೀನದಲ್ಲಿನ ಶಕ್ತಿಯನ್ನು ಬಿಡುಗಡೆ ಮಾಡುವುದಿಲ್ಲ. ಆಗ ಹೊರಗೆ ಯೋಗಿ ಪ್ರಯತ್ನಿಸಿದರೂ ಅದು ನಡೆಯುವುದಿಲ್ಲ. ಆದ್ದರಿಂದ ಯೋಗಿಗಳ ಹತ್ತಿರ ಕೆಲವರ ಕರ್ಮ ಹೋದರೂ ಕೆಲವರ ಕರ್ಮ ಮಾತ್ರ ಹೋಗುವುದಿಲ್ಲ. ಒಳಗಿನ ಆತ್ಮ ವಿಷಯ ತಿಳಿದ ಯೋಗಿಗಳು ಹೊರಗಿನ

ರೋಗಿಗಳ ವಿಷಯವನ್ನು ಹೆಚ್ಚಾಗಿ ತಲೆ ಕೆಡಿಸಿಕೊಳ್ಳುವುದಿಲ್ಲ. ಒಂದೊಂದು ಸಮಯದಲ್ಲಿ ಮೇಲ್ನೋಟಕ್ಕೆ ತಾನು (ಯೋಗಿ) ಸುಮ್ಮನಿದ್ದರೂ, ತನ್ನಲ್ಲಿನ ಆತ್ಮಪ್ರೇರೇಪಣೆ ನಡೆದಾಗ ಯೋಗಿ ಆಗ ಏನು ಮಾಡಿದರೂ ಎದುರಿಗಿರುವವನ ನೋವಾಗಲಿ, ರೋಗವಾಗಲಿ ಸುಲಭವಾಗಿ ಹೋಗುತ್ತದೆ. ಪ್ರಪಂಚದಲ್ಲಿ ಜ್ಞಾನಕ್ಕೆ ಇಂತಹ ಶಕ್ತಿ ಇದೆಯೆಂದು ನಿರೂಪಿಸುವುದಕ್ಕೋಸ್ಕರ ಆತ್ಮಪ್ರೇರೇಪಣೆಯಿಂದಲೇ ಯಾವ ವಿಧ ವೈದ್ಯವಿಲ್ಲದಂತೆ ರೋಗ ಹೋಗುವುದು ನಡೆಯುತ್ತಿದೆ. ಮನುಷ್ಯರು ಯೋಗಿಗಳಾಗಿ ಬದಲಾಗುವುದಕ್ಕೆ ಶಕ್ತಿಯ ಬಗ್ಗೆ ತಿಳಿಯುವುದಕ್ಕೆ ಇಂತಹ ಸಂಘಟನೆಗಳು ನಡೆಯುತ್ತಿರುತ್ತವೆ. ಒಬ್ಬ ಯೋಗಿ ಅಜ್ಞಾನದಲ್ಲಿನ ಮನುಷ್ಯನನ್ನು ಯೋಗಿಯಾಗಿ ತಯಾರಾಗುವುದಕ್ಕೆ, ಅವನ ಕರ್ಮವನ್ನು ಅವನು ನಿರೋಧಿಸುವ ಯೋಗಶಕ್ತಿಯನ್ನು ಸಂಪಾದಿಸಿಕೊಳ್ಳುವುದಕ್ಕೆ ಜ್ಞಾನ ತಿಳಿಸುವನು.

ನಿಜಯೋಗಿಗಳು ಇನ್ನೊಬ್ಬ ವ್ಯಕ್ತಿಯನ್ನು ಯೋಗಿಯಾಗಿ ಬದಲಾಯಿಸಿ, ಅವನಿಗೂ ಸಹ ಆ ಶಕ್ತಿಯನ್ನು ಕೈಗೂಡಿಸುವ ಗುರುಗಳಾಗಿ ಇದ್ದಾರೆ. ಕಷ್ಟ ಸುಖಗಳಿಗೆ ಕಾರಣವಾದ ಕರ್ಮವನ್ನು ಸುಟ್ಟುಹಾಕುವುದಕ್ಕೆ ತಕ್ಕ ಜ್ಞಾನಾಗ್ನಿಯನ್ನು ಸಮಕೂಡಿಸಿಕೊಳ್ಳುವುದಕ್ಕೆ ಶಿಷ್ಯರು ಗುರುಗಳನ್ನು ಆಶ್ರಯಿಸಬೇಕು. ಆ ಶಕ್ತಿಯನ್ನು ಸಂಪಾದಿಸಿಕೊಂಡು ಜ್ಞಾನಾಗ್ನಿ ಪ್ರಕಾಶದಲ್ಲಿ ತಮ್ಮಂತಹವನನ್ನಾಗಿ ಮಾಡುವುದೇ ಗುರುಗಳ ಧ್ಯೇಯವಾಗಿರಬೇಕು. ಹಾಗಲ್ಲದೆ ಉಪದೇಶ ಕೊಡುವುದೇ ಗುರುಗಳ ಕಾರ್ಯವೆಂದು ಅದನ್ನು ತೆಗೆದುಕೊಂಡು ಸಾಧನೆ ಮಾಡುವುದೇ ಶಿಷ್ಯರ ಕಾರ್ಯವೆಂದು ಅಂದುಕೊಂಡರು ಜೀವನವೇ ವ್ಯರ್ಥವಾಗುತ್ತದೆ. ಜ್ಞಾನಶಕ್ತಿ ಲಭಿಸದ ಸಾಧನೆ ಸಂಭಳವಿಲ್ಲದ ಉದ್ಯೋಗವಂತಹದ್ದು. ಶಕ್ತಿ ಇಲ್ಲದ ಗುರುಗಳು ದೇವರು ಹೇಳಿದ ಸೂತ್ರದ ಪ್ರಕಾರ ಯೋಗಿಗಳೇ ಅಲ್ಲ.

ಈಗಿನ ಕಾಲದಲ್ಲಿ ಕೆಲವರು ಶಿಷ್ಯರು ಶಕ್ತಿಯನ್ನನುಸರಿಸಿ ಗುರುಗಳನ್ನು ಆಶ್ರಯಿಸುತ್ತಿಲ್ಲ. ಯಾವ ಗುರುವಿಗಾದರೆ ವಿಮಾನಗಳು ಇವೆಯೊ, ಯಾವ ಗುರುವಿಗಾದರೆ ಬಹಳ ಆಸ್ತಿಗಳಿವೆಯೊ, ಯಾರ ಹತ್ತಿರವಾದರೆ ಕೆಲವು ಕೋಟಿಗಳ ಹಣ ಇದೆಯೋ ಅವರನ್ನೇ ದೊಡ್ಡ ಯೋಗಿಗಳಾಗಿ ತಿಳಿಯುತ್ತಿದ್ದಾರೆ. ಉದಾ

ಹರಣೆಗೆ ಎಲ್ಲಿ ಯಾವ ಡಾಕ್ಟರ್ ಹತ್ತಿರ ವಾಸಿಯಾಗದ ರೋಗಿಯನ್ನು ಒಬ್ಬ ಬಡಯೋಗಿ ತನ್ನ ಹಸ್ತ ಸ್ಪರ್ಷದಿಂದಲೇ ಗುಣಪಡಿಸಿದರೂ ಅದನ್ನು ಮಂತ್ರ ಪ್ರಭಾವವಾಗಿ, ಆ ಯೋಗಿಯನ್ನು ಒಬ್ಬ ಮಾಂತ್ರಿಕನನ್ನಾಗಿ ತಿಳಿಯುತ್ತಾರೆ. ಯಾವ ನಿರೂಪಣೆ ಮಾಡದಿದ್ದರೂ ಹಣದ ಸಾಮರ್ಥ್ಯ ಹೊಂದಿದ್ದು, ವಿದೇಶಗಳಿಗೆ ಹೋಗಿ ಬೋಧನೆ ಹೇಳಿ ಬಂದಮಾತ್ರಕ್ಕೆ ಅವನ ಹತ್ತಿರ ಜ್ಞಾನಾಗ್ನಿ ಇದೆಯಾ ಇಲ್ಲವಾ ಎಂದು ತಿಳಿಯದೆ, ಆತನನ್ನೇ ದೊಡ್ಡ ಯೋಗಿಯಾಗಿ ತಿಳಿಯುತ್ತಾರೆ. ಇಲ್ಲಿ ಹಣ ಇರುವವನು ಬೋಧನೆ ಹೇಳಿದಷ್ಟು ಮಾತ್ರಕ್ಕೆ ಯೋಗಿಯಾಗಿ, ಗುರುವಾಗಿ ಲೆಕ್ಕಿಸಲ್ಪಡುತ್ತಿದ್ದಾನೆ. ಹಣ ಇಲ್ಲದಿದ್ದರೂ ಜ್ಞಾನವಿರುವ ಬೋಧನೆ ಇದ್ದರೂ, ಸಂಪೂರ್ಣಶಕ್ತಿ ಇದ್ದರೂ ಅಂಥವರನ್ನು ಮಾಂತ್ರಿಕರಾಗಿ ತಿಳಿಯುತ್ತಿದ್ದಾರೆ.

ಮುಖ್ಯವಾಗಿ ದೇವರಲ್ಲಿ ಐಕ್ಯವಾಗಿ ಜನ್ಮರಾಹಿತ್ಯವನ್ನು ಕೋರುವ ಮೋಕ್ಷಾಸಕ್ತರೇ ಯೋಗಿಗಳೆಂದು, ತಮ್ಮಲ್ಲಿನ ಜ್ಞಾನವನ್ನು ಉಪಯೋಗಿಸಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಬೇಕು. **'ಯಥೈಥಾಂಸಿ ಸಮಿಧ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ'** ಅನ್ನುವ ಭಗವಾನನ ವಾಕ್ಯಾನುಸಾರ ಕರ್ಮವನ್ನು ಸುಟ್ಟು ಯೋಗಿಗಳಾಗಿ ನಿರೂಪಣೆ ಹೊಂದಿದವರೆ ನಿಜಯೋಗಿಗಳು. ಯೋಗಸಿದ್ಧಾಂತದ ಪ್ರಕಾರ ಈ ದಿನ ಸಹ ಅಂಥವರೆ ಯೋಗಿಗಳು. ಅಂತಹ ಯೋಗಿಗಳೆ ನಿಜಗುರುಗಳು.

ತಾವು ಆಶ್ರಯಿಸಿದ ಗುರುಗಳ ಹತ್ತಿರ ಶಕ್ತಿ ಇದೆಯೋ ಇಲ್ಲವೋ ಸ್ವಲ್ಪವೂ ಯೋಚಿಸದೆಯೇ ಇತರ ಗುರುಗಳನ್ನು ಕಡಿಮೆಯವರೆಂದು ಹೇಳನವಾಗಿ ಮಾತನಾಡಬಾರದು. ಹೆಚ್ಚು ಕಡಿಮೆಗಳು ಯೋಗಶಕ್ತಿಯನ್ನನುಸರಿಸಿ ಇರುತ್ತದೆ, ಆದ ಕಾರಣ ಆ ಶಕ್ತಿಯೊಂದರ ವಿವರ ತಿಳಿಯದವರು ಯಾವ ಗುರುಗಳನ್ನು ಕಡಿಮೆಯಾಗಿ ಲೆಕ್ಕ ಹಾಕಬಾರದು.

# ತಪಸ್ಸು – ಯೋಗ

ಇಂದಿನ ಪ್ರಪಂಚದಲ್ಲಿ ದೇವರಿದ್ದಾನೆ ಎನ್ನುವ ನಂಬಿಕೆ ಇರುವವರು ಬಹಳಜನರು ಇದ್ದಾರೆ. ಆ ನಂಬಿಕೆ ಇರುವವರು ಅನೇಕ ವಿಧಗಳ ತಮ್ಮ ಭಕ್ತಿಯನ್ನು ದೇವರಿಗೆ ತೋರಿಸುತ್ತಿದ್ದಾರೆ. ಶ್ರದ್ಧೆಯನ್ನು ಅನುಸರಿಸಿ ಅವರು ದೇವರ ಬಳಿ ಭಕ್ತಿ ತೋರಿಸುವ ವಿಧವೂ ಸಹ ನಿರ್ಣಯಿಸಲ್ಪಟ್ಟಿರುತ್ತದೆ. ಪ್ರಪಂಚದಲ್ಲಿ ಮಾನವರು ಅನೇಕ ವಿಧಗಳ ಶ್ರದ್ಧಾಯುತರಾಗಿದ್ದಾರೆ. ಆದ್ದರಿಂದ ಅವರು ಅನುಸರಿಸುವ ಭಕ್ತಿಮಾರ್ಗ ಸಹ ಅನೇಕ ವಿಧಗಳು ಇರುತ್ತದೆ. ಕೆಲವರು ಮಂತ್ರಯುಕ್ತವಾದ ಪೂಜೆಗಳು ಮಾಡುತ್ತಿರುತ್ತಾರೆ. ಕೆಲವರು ತಮ್ಮ ತಮ್ಮ ಇಷ್ಟದೇವತೆಗಳನ್ನು ಆರಾಧಿಸುತ್ತಿರುತ್ತಾರೆ. ಮತ್ತೆ ಕೆಲವರು ಯಜ್ಞಗಳು ಮಾಡುತ್ತಿರುತ್ತಾರೆ. ಇನ್ನು ಕೆಲವರು ತಪಸ್ಸು ಮಾಡುವವರು ಸಹ ಇದ್ದಾರೆ. ಕೆಲವರು ಯೋಗವನ್ನು ಆಚರಿಸುವವರು ಇದ್ದಾರೆ. ಇನ್ನು ಎಷ್ಟೋ ವಿಧಾನಗಳಲ್ಲಿ ಮಾನವರು ದೇವರ ಬಳಿ ಭಕ್ತಿಯನ್ನು ತೋರಿಸುತ್ತಿದ್ದಾರೆ. ಎಲ್ಲರೂ ಒಂದೇ ಮಾರ್ಗವನ್ನು ಅನುಸರಿಸದೇ ಅನೇಕ ಮಾರ್ಗಗಳನ್ನು ಅನುಸರಿಸುವುದಕ್ಕೆ ಅವನೊಂದರ ಶ್ರದ್ಧೆ, ಕರ್ಮಗಳೇ ಕಾರಣ. ಪೂರ್ವ ಜನ್ಮದಲ್ಲಿ ಯಾರು ಮಾಡಿಕೊಂಡ ಪುಣ್ಯಫಲವನ್ನು ಮತ್ತು ಶ್ರದ್ಧೆಗಳನ್ನನುಸರಿಸಿ ಅವನಿಗೆ ಈ ಜನ್ಮದಲ್ಲಿ ಭಕ್ತಿಮಾರ್ಗದಲ್ಲಿ ಅನುಸರಿಸುವ ವಿಧಾನ ಸಹ ನಿರ್ಣಯಿಸಲ್ಪಟ್ಟಿರುತ್ತದೆ. ಸಕಲ ಮಾನವರಿಗೆ ದೇವರು ಒಬ್ಬನೇ ಆದರೂ ಆತನನ್ನು ತಿಳಿದುಕೊಳ್ಳುವುದಕ್ಕೆ ಅನೇಕ ಮಾರ್ಗಗಳು ಪ್ರಪಂಚದಲ್ಲಿವೆ. ನಾನಾ ವಿಧ ಪೂಜೆಗಳು, ವ್ರತಗಳು, ತಪಸ್ಸುಗಳು, ಯೋಗಗಳು ಅನೇಕವು ಆತನನ್ನು ತಿಳಿದುಕೊಳ್ಳುವುದಕ್ಕಾಗಿ ಇವೆ. ಪ್ರತಿ ಮಾನವನು ಮಾಡುವ ಚಿಕ್ಕ ಪೂಜೆ ಸಹಿತವು ಆತನಿಗೆ ಸೇರುತ್ತಿದೆ. ಸಕಲ ಪೂಜೆಗಳಿಗೆ ಭೋಕ್ತ ಒಬ್ಬ ಪರಮಾತ್ಮನೇ ಆದರೂ ಮಾನವರು ಆಚರಿಸುವ ಭಕ್ತಿ ವಿಧಾನಗಳು ಇಷ್ಟು ವಿಧಗಳಾಗಿವೆ. ಆದ್ದರಿಂದ ಅವುಗಳಲ್ಲಿ ಯಾವ ವಿಧಾನ ಒಳ್ಳೆಯದೋ ತಪ್ಪದೆ ತಿಳಿದುಕೊಂಡು ಪ್ರಯತ್ನಿಸಬೇಕು. ಹಾಗಲ್ಲದೆ ಎಲ್ಲರೂ ನಡೆಯುವ ಮಾರ್ಗವನ್ನೇ ನಾನು ಹೋಗುತ್ತಿದ್ದೇನೆಂದರೆ ಅದರ

ಗಮ್ಯ (ಗುರಿ) ದೂರವೋ? ಅಥವಾ ಹತ್ತಿರವೋ? ಯಾವ ವಿಧಾನವಾದರು ನಾವು ಆಚರಿಸುವ ಭಕ್ತಿ ಪರಮಾತ್ಮನಿಗೆ ಸೇರುತ್ತದೆ. ಆದರೆ ಅದರಿಂದ ಹೊಂದುವ ಫಲಿತ ಅನೇಕ ವಿಧಗಳಾದ ಸ್ಥಾನಗಳಲ್ಲಿ ಇರುತ್ತದೆ. ಯಾರು ಯಾವ ವಿಧವಾಗಿ ಆಚರಿಸುತ್ತಿರುತ್ತಾರೋ ಅವರಿಗೆ ಆ ವಿಧರೂಪದಿಂದಲೇ ಪರಮಾತ್ಮ ಅವರ ಪೂಜೆಗಳು ಸ್ವೀಕರಿಸಿ ಫಲಿತಕೊಡುತ್ತಾನೆ. ಆರಾಧನೆಗಳು ಎಷ್ಟು ಆದರೂ, ಯಾವ ರೂಪವಾದರು ಎಲ್ಲದಕ್ಕು ಆದಿ ಪುರುಷನು ಒಬ್ಬನೇ. ಆದರೆ ಆರಾಧಿಸುವವರಿಗೆ ಲಭಿಸುವ ಫಲಿತಗಳು ವ್ಯತ್ಯಾಸಗಳು ಹೊಂದಿವೆ ಅಂದಿದ್ದೇವಲ್ಲವೆ! ಅವುಗಳ ವ್ಯತ್ಯಾಸಗಳನ್ನು ಮೊದಲು ಎರಡು ವಿಧಗಳಾಗಿ ವಿಭಜಿಸಬಹುದು. ಎರಡು ವಿಧಗಳು ಯಾವುವು ಎಂದರೆ! ಒಂದು ಕಾಮ್ಯಾರ್ಥ ಸಿದ್ಧಿ, ಎರಡು ಮೋಕ್ಷಸಿದ್ಧಿ. ಪ್ರಪಂಚದಲ್ಲಿ ಈ ಎರಡು ಫಲಿತಗಳಲ್ಲಿ ಮೊದಲನೆಯ ದಾದ ಕಾಮ್ಯಾರ್ಥ ಸಿದ್ಧಿಯನ್ನು ಕೋರುವವರೇ ನೂರಕ್ಕೆ ತೊಂಭತ್ತೊಂಭತ್ತು ಪಾಲು ಇದ್ದಾರೆ. ಉಳಿದ ಒಂದು ಪಾಲಿನಲ್ಲಿಯೂ ಸಹ ಮೋಕ್ಷಸಿದ್ಧಿಯನ್ನು ಕೋರುವವರು ಬಹಳ ಅಪರೂಪವಾಗಿರುತ್ತಾರೆ. ತಿಳಿದ ಜ್ಞಾನಿಗಳು ಮೋಕ್ಷಸಿದ್ಧಿಯನ್ನು ಕುರಿತು ಹೇಳಿದರೂ ಅದರಿಂದ ನಮಗೇನು ಕೆಲಸ? ಪ್ರಪಂಚದಲ್ಲಿ ಎಲ್ಲಾ ವಿಧಗಳಲ್ಲಿ ಸುಖ ಜೀವನ ಕಳೆಯುವುದಕ್ಕೆ ದೇವರನ್ನು ಆರಾಧಿಸಿದರೆ ಸಾಕು, ಅದಕ್ಕಿಂತ ಇನ್ನೇನು ಬೇಕು. ಎನ್ನುವವರು ಬಹಳಜನ ಇದ್ದಾರೆ. ಕಾಮ್ಯಾರ್ಥಸಿದ್ಧಿಯನ್ನು ಕೋರಿ ಮಾಡುವ ಆರಾಧನೆಗಳು ಸಹ ಅನೇಕ ವಿಧಗಳಾಗಿ ಇವೆ. ಆದ್ದರಿಂದ ಕಾಮ್ಯಾರ್ಥ ಸಿದ್ಧಿಯನ್ನು ಸಹ ಮಾನವರು ಅನೇಕ ವಿಧಗಳಾಗಿಯೇ ಪಡೆಯುತ್ತಿದ್ದಾರೆ. ಸ್ವಲ್ಪ ಜನರು ತಾವು ಕೋರಿಕೊಂಡ ಕೋರಿಕೆಗಳು ಈ ಜನ್ಮದಲ್ಲಿಯೇ ನೆರವೇರುತ್ತವೆಂದು ಅಂದುಕೊಳ್ಳುತ್ತಿರುತ್ತಾರೆ. ಹಾಗೆ ಎಂದಿಗೂ ನಡೆಯುವುದಿಲ್ಲ. ಪ್ರತಿಜೀವಿಯು ಕೋರಿಕೊಂಡ ಕೋರಿಕೆಗಳು ಮರುಜನ್ಮದಲ್ಲಿ ನೆರವೇರುತ್ತಿವೆ. ಕಾಮ್ಯಾರ್ಥಸಿದ್ಧಿ ಶೀಘ್ರವಾಗಿ ಫಲಿತಕೊಡುತ್ತದೆ. ಅಂದರೆ ಮರುಜನ್ಮದಲ್ಲೆ ನೆರವೇರುತ್ತದೆ. ಮೋಕ್ಷಸಿದ್ಧಿ ಹಾಗಲ್ಲದೆ ಕೆಲವು ಜನ್ಮಗಳ ವರೆಗೂ ಸಹ ಲಭಿಸದೆ ಹೋಗುತ್ತದೆ.

ಮೋಕ್ಷಸಿದ್ಧಿಯನ್ನು ಕೋರಿ ಪರಮಾತ್ಮನನ್ನು ಆರಾಧಿಸುವವರು ಸ್ವಲ್ಪಜನರೆ ದೇಶದಲ್ಲಿ ಇದ್ದಾರೆ. ಕಾಮ್ಯಾರ್ಥಸಿದ್ಧಿಯನ್ನು ಕೋರಿ ಆಚರಿಸುವವರು ಹೆಚ್ಚು ಜನರಿದ್ದು, ಮೋಕ್ಷಸಿದ್ಧಿಯನ್ನು ಕೋರಿ ಆಚರಿಸುವವರು ಸ್ವಲ್ಪ ಜನರೇ ಏಕೆ ಇದ್ದಾರೆ? ಮೋಕ್ಷವನ್ನು ಸೇರಬೇಕೆಂದು ಎಲ್ಲರೂ ಏಕೆ ಅಂದುಕೊಳ್ಳುತ್ತಿಲ್ಲ? ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನ ಪ್ರಪಂಚದಲ್ಲಿ ಭಕ್ತಿ ಹೊಂದಿದವರು ಬಹಳಜನ ಇದ್ದಾರೆ. ಆದರೆ ಅವರ ಭಕ್ತಿ ಕ್ಷುದ್ರದೇವತೆಗಳನ್ನು ಮೊದಲುಗೊಂಡು ಮಹಾದೇವತೆಗಳವರೆಗೂ ತೋರಿಸಲ್ಪಡುತ್ತಿದೆ. ಕೆಲವರು ದೊಡ್ಡಮ್ಮ, ಸುಂಕಲಮ್ಮ, ಕಾಳಿಕಾ ಮೊದಲಾದ ಹೆಣ್ಣುದೇವತೆಗಳನ್ನು ಆರಾಧಿಸುವವರು, ಮತ್ತೆ ಕೆಲವರು ಇಂದ್ರನು, ಚಂದ್ರನು ಮೊದಲುಗೊಂಡು ವಿಷ್ಣು, ಈಶ್ವರ, ಬ್ರಹ್ಮವರೆಗೂ ಆರಾಧಿಸುವವರು ಇದ್ದಾರೆ. ಎಷ್ಟು ಮಂದಿ ದೇವತೆಗಳು ಇದ್ದಾರೊ ಆ ದೇವತೆಗಳಿಗಿಂತಲೂ ಅಂದರೆ ದೇವತೆಗಳಲ್ಲಿ ಅಗ್ರಗಣ್ಯರಾದ ವಿಷ್ಣು, ಈಶ್ವರ, ಬ್ರಹ್ಮರಿಗಿಂತಲು ಅತೀತನಾಗಿರುವ ಮತ್ತು ಎಲ್ಲರ ದೇವತೆಗಳಲ್ಲಿ ಸಹ ಅಂತರ್ಯಾಮಿಯಾಗಿ ಇರುವವನನ್ನು ಯಾರು ಗ್ರಹಿಸದೆ ಇದ್ದಾರೆ. ಪೂರ್ವಜನ್ಮದಲ್ಲಿ ಭಕ್ತಿ ಮಾರ್ಗದಲ್ಲಿ ವಿಶೇಷವಾದ ಜ್ಞಾನವನ್ನು ಯಾರು ಸಂಪಾದಿಸಿಕೊಂಡಿರುತ್ತಾರೋ ಅವರಿಗೆ ಮಾತ್ರವೇ ದೇವತೆಗಳೆಲ್ಲರಿಗಿಂತ ಅತೀತನಾದ ದೇವರು ಇದ್ದಾನೆಂಬ ವಿಷಯ ತಿಳಿಯುತ್ತಿದೆ. ಹಾಗೆ ತಿಳಿದವರು ಮಾತ್ರವೇ ದೇವದೇವನಾದ ಪರಮಾತ್ಮನನ್ನು ಆರಾಧಿಸುತ್ತಿರುತ್ತಾರೆ. ಪರಮಾತ್ಮನನ್ನು ಆರಾಧಿಸುವವರೇ ಮೋಕ್ಷಸಿದ್ಧಿಯನ್ನು ಕೋರಿ ಆಚರಿಸುವ ವರೆಂದು ಹೇಳಬಹುದು, ದೇಶದಲ್ಲಿ ಭಕ್ತಿ ಮಾರ್ಗದಲ್ಲಿ ಪುಣ್ಯಫಲಿತಗಳು ಕಡಿಮೆ ಇರುವವರೇ ಹೆಚ್ಚಾಗಿದ್ದಾರೆ. ಆದ ಕಾರಣ ಅವರವರ ಪುಣ್ಯಫಲಿತಗಳಿಗೆ ಸಮಾನವಾದ ದೇವರನ್ನೆ ನಂಬಿ ಆರಾಧಿಸುತ್ತಿದ್ದಾರೆ. ಆದ್ದರಿಂದ ದೇಶದಲ್ಲಿ ದೇವತೆಗಳನ್ನು ಆರಾಧಿಸುವವರು ಬಹಳಜನ ಇದ್ದಾರೆ. ಅಂದರೆ ಕಾಮ್ಯಾರ್ಥ ಸಿದ್ಧಿಯನ್ನು ಪಡೆಯುವವರು ಅಧಿಕವಾಗಿ ಇದ್ದಾರೆಂದು ಹೇಳಬಹುದು.

ಎಲ್ಲರಿಗೂ ಅತೀತನಾಗಿ, ಎಂದಿಗೂ ನಾಶ ಇಲ್ಲದವನಾಗಿ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದ ದೇವತೆಗಳೆ ಆರಾಧಿಸುವ ಪರಮಾತ್ಮ ಒಬ್ಬನಿದ್ದಾನೆಂಬ ವಿಷಯ ತಿಳಿಯುವುದಕ್ಕೆ ಎಷ್ಟೋ ಜನ್ಮಗಳ ಪುಣ್ಯಫಲಿತ ಅಗತ್ಯ. ಪುಣ್ಯಫಲ ವಿಶೇಷದಿಂದ ಪರಮಾತ್ಮ ಬೆಲೆ ತಿಳಿದುಕೊಂಡ ನಂತರ, ಆತನನ್ನು ಆರಾಧಿಸಿ ಪರಮಾತ್ಮನನ್ನು ಸೇರುವುದಕ್ಕೆ ಅವರ ಶ್ರದ್ಧೆಯನ್ನನುಸರಿಸಿ ಇರುತ್ತದೆ. ಪರಮಾತ್ಮನನ್ನು ಆರಾಧಿಸುತ್ತಿದ್ದರು ಕೆಲವರು ಅನೇಕ ಜನ್ಮಗಳಿಗೆ, ಕೆಲವರು ಕೆಲವು ಜನ್ಮಗಳಿಗೆ, ಕೆಲವರು ಒಂದೇ ಜನ್ಮದಲ್ಲಿಯೇ ಮೋಕ್ಷವನ್ನು ಹೊಂದುತ್ತಿದ್ದಾರೆ. ಪರಮಾತ್ಮನನ್ನು ಆರಾಧಿಸುವ ಬುದ್ಧಿ ಹುಟ್ಟುವುದಕ್ಕೆ ಅನೇಕ ಜನ್ಮಗಳ ಪುಣ್ಯಫಲ ಅಗತ್ಯವೆಂದಿದ್ದೇವಲ್ಲವೆ! ದೇಶದಲ್ಲಿ ಪುಣ್ಯಫಲ ಹೆಚ್ಚಾಗಿರುವವರು ಬಹಳ ಅಪರೂಪವಾಗಿದ್ದಾರೆ. ಆದ್ದರಿಂದ ಮೋಕ್ಷವನ್ನು ಉಪೇಕ್ಷಿಸಿ ಪರಮಾತ್ಮನನ್ನು ಆರಾಧಿಸುವವರು ಸಹ ಅಪರೂಪವಾಗಿಯೇ ಇರುತ್ತಾರೆಂದು ಹೇಳಬಹುದು.

ದೇಶದಲ್ಲಿ ಯಾರು ಯಾವ ವಿಧಾನವನ್ನು ಭಕ್ತಿ ಮಾರ್ಗದಲ್ಲಿ ಆಚರಿಸುತ್ತಿದ್ದಾರೋ ಅವರು ಆ ವಿಧಾನವೇ ದೊಡ್ಡದೆಂದು ಅನ್ನುತ್ತಿದ್ದಾರೆ. ಎಲ್ಲಾ ವಿಧಗಳ ಆಚಾರಗಳಿಗೂ ನಾಯಕನು ಒಬ್ಬನೇ ಎಂದು ಗ್ರಹಿಸಲಾರದೆ ಇದ್ದಾರೆ. ಕೆಲವರು ಮತಗಳಾಗಿ ವಿಭಜಿಸಿಕೊಂಡು ನಮ್ಮ ಮತ, ಶ್ರೇಷ್ಠವಾದುದು ನಮ್ಮ ಮತ ಶ್ರೇಷ್ಠವಾದದ್ದು ಎಂದು ವಾದಿಸಿಕೊಳ್ಳುತ್ತಿದ್ದಾರೆ. ಎಲ್ಲಾ ಮತಗಳಿಗು ಯಜಮಾನ ಒಬ್ಬನೆ ಎಂದು ಗ್ರಹಿಸದೆ ಇದ್ದಾರೆ. ಹಾಗೆ ಪೂಜೆಗಳು ಮಾಡುವವರು, ಹೋಮಗಳು ಮಾಡುವವರು, ತಪಸ್ಸು ಮಾಡುವವರು ನಾವೇ ದೊಡ್ಡವರು ಅಂದುಕೊಳ್ಳುತ್ತಿದ್ದಾರೆ. ಇವು ಎಲ್ಲವೂ ಪರಮಾತ್ಮನ ಬಗ್ಗೆ ಸಾಧನೆ ಗಳಾಗಿ ಇವೆ. ಆದರೆ ಯಾವ ಸಾಧನೆಯಿಂದ ನಾವು ಕಡತೇರಬಹುದೊ ಮಾನವರಾದ ನಾವು ತಪ್ಪದೆ ತಿಳಿದುಕೊಳ್ಳಬೇಕು. ಈ ವಿಷಯವನ್ನು ಉದ್ದೇಶಿಸಿ **ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ ಭಗವಂತನು ಮತ್ತು ಪರಮಾತ್ಮ :–**

**53ನೇ ಶ್ಲೋ. 'ನಾಹಂ ವೇದೈರ್ನತಪಸಾ ನದಾನೇನ ನಚೇಜ್ಯಯಾ ಶಕ್ಯ ಏವಂ**

**ವಿಧೋಧ್ರಷ್ಟುಂ ಧೃಷ್ಟವಾನಸಿ ಮಾಂ ಯಥಾ'** ಅರ್ಜುನಾ? ವೇದಗಳಿಂದಾದರೂ, ದಾನಗಳಿಂದಾದರೂ, ಯಜ್ಞಗಳಿಂದಾದರೂ, ತಪಸ್ಸುಗಳಿಂದಾದರೂ ಈಗ ನೀನು ನೋಡಿದ ಈ ವಿಶ್ವರೂಪವನ್ನು ನೋಡಬೇಕೆಂದರು ಸಾಧ್ಯವಾಗುವುದಿಲ್ಲ'

**48ನೇ ಶ್ಲೋ. ನವೇದ ಯಜ್ಞಾಧ್ಯಯನೈರ್ನ ದಾನೈರ್ನ ಚಕ್ರಿಯಾಭಿರ್ನ ತಪೋಭಿರುಗ್ರೈಃ**
**ಏವಂ ರೂಪಶ್ಯಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ।**

**'ಅರ್ಜುನಾ! ವೇದಮಂತ್ರಗಳ ಉಚ್ಛಾರಣೆಯಿಂದಾಗಲಿ, ವಿವಿಧ ರೀತಿಯ ಯಜ್ಞಗಳಿಂದಾಗಲಿ, ದಾನಗಳಿಂದಾಗಲಿ, ಉಗ್ರವಾದ ತಪಸ್ಸುಗಳಿಂದಾಗಲಿ, ನನ್ನನ್ನು ತಿಳಿದುಕೊಳ್ಳುವುದಕ್ಕೆ ಲೋಕದಲ್ಲಿ ಸಾಧ್ಯವಾಗುವುದಿಲ್ಲ. ಅಂತಹ ನನ್ನ ರೂಪವನ್ನು ನನ್ನ ಅನುಗ್ರಹದಿಂದ ನೀನು ನೋಡಿದ್ದೀಯಾ'** ಎಂದು ಪರಮಾತ್ಮ ಹೇಳಿದ್ದಾನೆ. ಆದ್ದರಿಂದ ದೇಶದಲ್ಲಿ ನಾವು ಆಚರಿಸುವ ವಿವಿಧ ಆರಾಧನೆಗಳಾದರು, ವೇದಗಳನ್ನು ಕಂಠಾಪಾಠ ಮಾಡಿಕೊಂಡು ಅಧ್ಯಯನ ಮಾಡುವುದರಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ, ಉಗ್ರವಾದ ತಪಸ್ಸುಗಳಿಂದಾಗಲಿ ಪರಮಾತ್ಮನನ್ನು ತಿಳಿದುಕೊಳ್ಳುವುದಕ್ಕೆ ಸೇರುವುದಕ್ಕೆ ಯಾವ ಕಾರಣಕ್ಕು ಸಾಧ್ಯವಾಗುವುದಿಲ್ಲವೆಂದು ತಿಳಿಯುತ್ತಿದೆ. ಈ ಮಾತಿನಿಂದಲೇ ಬಹಳಜನರಿಗೆ ದುಃಖ ಉಂಟಾಗಬಹುದು. ಏಕೆಂದರೆ! ಅವರು ಮಾಡುವ ಆರಾಧನೆಗಳು ಸಣ್ಣ ಪೂಜೆಗಳು ಮೊದಲುಗೊಂಡು ಹೋಮಗಳು, ತಪಸ್ಸುಗಳವರೆಗೂ ಇರುತ್ತದೆ. **ತಪಸ್ಸು ದೊಡ್ಡದಾಗಿ ಮಾಡುವವರು ಸಹ ನನ್ನನ್ನು ತಿಳಿದುಕೊಳ್ಳುವುದಕ್ಕೆ ಅನರ್ಹರು ಎಂದು ಭಗವಂತನೆ ಹೇಳಿದರೆ ದುಃಖವಲ್ಲದೆ ಏನು ಹುಟ್ಟುತ್ತದೆ?** ಭಗವಂತನು ನಮ್ಮನ್ನು ಬಾಧೆ ಇಡುವುದಕ್ಕೆ ಈ ಮಾತು ಹೇಳಲಿಲ್ಲ. ನಾವು ಸರಿಯಾದ ಮಾರ್ಗದಲ್ಲಿ ನಡೆದು ತನ್ನನ್ನು ತಿಳಿದುಕೊಳ್ಳುವುದಕ್ಕೋಸ್ಕರ ಪರಮಾತ್ಮ ಆ ವಿಧವಾಗಿ ಹೇಳಿದ್ದಾನೆ. ತಪಸ್ಸುಗಳಿಂದ ನನ್ನನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ ಅಂದಿದ್ದಾನೆಂದರೆ ಬೇರೆ ವಿಧಾನ ಏನೋ ಒಂದಿದೆ ಎಂದು ತಿಳಿಯುತ್ತಲೇ ಇದೆ. ಆ ವಿಧಾನವೇನೋ ಪರಿಶೀಲಿಸಿ ನೋಡೋಣ.

ದೇಶದಲ್ಲಿ ಎಲ್ಲವನ್ನು ಮೀರಿರುವುದು ತಪಸ್ಸೆಂದು ಬಹಳಜನರಿಗೆ ಅಭಿಪ್ರಾಯ ಇರಬಹುದು. ಅಂಥವರು ಇನ್ನು ಬೇರೆವಿಧ ಅಭಿಪ್ರಾಯಗಳು ಇರುವವರು ದೇಶದಲ್ಲಿ ಇದ್ದಾರೆಂಬ ಉದ್ದೇಶದಿಂದಲೇ ಭಗವಂತನು ಗೀತಾಶಾಸ್ತ್ರದಲ್ಲಿ ಆತ್ಮ ಸಂಯಮಯೋಗದಲ್ಲಿ.

**46ನೇ ಶ್ಲೋ. ತಪಸ್ವಿಭ್ಯೋಧಿಕೋ ಯೋಗಿ ಜ್ಞಾನಭ್ಯೋಪಿ ಮತೋಧಿಕಃ**
**ಕರ್ಮಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ !**

ಅರ್ಜುನಾ! 'ಯೋಗಿ ತಪಸ್ಸು ಮಾಡುವವರಿಗಿಂತಲು ಉತ್ತಮನು, ಜ್ಞಾನವಂತನಿಗಿಂತಲು ಶ್ರೇಷ್ಠನು ಮತ್ತು ಕರ್ಮಗಳು ಮಾಡುವವರಿಗಿಂತಲು ಅಧಿಕನು ಆದ್ದರಿಂದ ನೀನು ಸಹ ಯೋಗಿಯಾಗು' ಎಂದಿದ್ದಾನೆ.

ಇದರಿಂದ ಎಲ್ಲರಿಗಿಂತ ಉತ್ತಮನು ಯೋಗಿ ಎಂದು, ಎಲ್ಲಾ ಅಭ್ಯಾಸ ಗಳಿಗಿಂತ ಯೋಗಾಭ್ಯಾಸವೇ ಪರಮಾತ್ಮನನ್ನು ತಿಳಿದುಕೊಳ್ಳುವುದಕ್ಕೆ ಶ್ರೇಯಸ್ಕರವಾದುದೆಂದು ತಿಳಿಯುತ್ತಿದೆ. ಯಾರು ಹೇಳಿದರೂ ಮಾನವರು ಕೇಳುವುದಿಲ್ಲವೆಂದು ಗೀತೆಯಲ್ಲಿ ಮೇಲಿನ ವಾಕ್ಯವನ್ನು ಭಗವಂತನೇ ಸ್ವತಃವಾಗಿ ತಿಳಿಸಿದ್ದಾನೆ. ಇಲ್ಲಿ ಕೆಲವರಿಗೆ ಅನುಮಾನಬಂದು 'ತಪಸ್ಸು ಮಾಡುವವರಿಗಿಂತ ಯೋಗಿ ಉತ್ತಮನೆಂದು, ಭಗವಂತನು ತಿಳಿಸಿದ್ದಾನಲ್ಲ! ಮತ್ತು ಜ್ಞಾನಿ ಯೋಗಿಗಿಂತ ಕಡಿಮೆಯವನೆಂದು ತಿಳಿಸಿದ್ದಾನಲ್ಲ! ಜ್ಞಾನಿ ಬೇರೆ ಯೋಗಿ ಬೇರೆನಾ? ಮತ್ತು ತಪಸ್ವಿಗೂ ಯೋಗಿಗೂ ಏನು ಭೇದವಿರುತ್ತದೆ?' ಎಂದು ಕೇಳಬಹುದು. ಅದಕ್ಕೆ ಸಮಾಧಾನ ಜ್ಞಾನಿ ಎಂದರೆ ಪರಮಾತ್ಮ ಒಂದರ ಸಾಧನೆ ವಿಷಯಗಳು ತಿಳಿದುಕೊಂಡವನು ಎಂದು ಅರ್ಥ. ಅಜ್ಞಾನ ಎಂದರೆ ತಿಳಿಯದತನ ಎಂದು ಅರ್ಥ. ಒಂದು ಊರಿಗೆ ಹೋಗುವ ದಾರಿಯನ್ನು ತಿಳಿದುಕೊಂಡಷ್ಟು ಮಾತ್ರಕ್ಕೆ ಊರು ಸೇರಿದವರೊಂದಿಗೆ ಸಮಾನ ಹೇಗಾಗುತ್ತದೆ? ಹಾಗೆ ಪರಮಾತ್ಮನನ್ನು ಸೇರುವ ವಿಷಯಗಳು ತಿಳಿದುಕೊಂಡಷ್ಟು ಮಾತ್ರಕ್ಕೆ ಹೊಂದಿದವನಂತೆ ಹೇಗಾಗುತ್ತಾನೆ? ಹಾಲು ಮೊಸರಾಗಿ ನಂತರ ಬೆಣ್ಣೆಯಾಗಿ ಆ ನಂತರ ತುಪ್ಪವಾಗಿ ಬದಲಾಗುತ್ತದೆ ಎಂದು ತಿಳಿದುಕೊಂಡಷ್ಟು ಮಾತ್ರಕ್ಕೆ ತುಪ್ಪ ಆಗುತ್ತದಾ?

ಆಗುವುದಿಲ್ಲ. ಹಾಲನ್ನು ಕಾಯಿಸಿ ಮೊಸರನ್ನು ಮಾಡಿ, ನಂತರ ಮೊಸರನ್ನು ಕಡಿದು ಬೆಣ್ಣೆಯನ್ನು ತೆಗೆದು, ಆ ನಂತರ ಅಗ್ನಿಯಿಂದ ಬಿಸಿ ಮಾಡಿದರೆ ತುಪ್ಪ ನೋಡಬಹುದು. ಹಾಗೆ ಪ್ರಪಂಚದಲ್ಲಿ ಪರಮಾತ್ಮನನ್ನು ತಿಳಿದುಕೊಳ್ಳುವ ಮಾರ್ಗಗಳನ್ನು ತಿಳಿದುಕೊಂಡ ಮಾತ್ರಕ್ಕೆ ಪರಮಾತ್ಮನನ್ನು ಸೇರಿದ್ದೇವೆ ಅಂದರೆ, ಕನ್ನಡಿಯಲ್ಲಿ ಕಾಣಿಸುವ ವಸ್ತುವನ್ನು ಹಿಡಿದುಕೊಂಡಿದ್ದೇವೆ ಎನ್ನುವಂತಿರುತ್ತದೆ. ಆದ್ದರಿಂದ ಜ್ಞಾನಿ ಆದಷ್ಟು ಮಾತ್ರಕ್ಕೆ ಯೋಗಿ ಆಗಲಾರನೆಂದು ಭಗವಂತನು ತಿಳಿಸಿದ್ದಾನೆ. ಯೋಗಿ ಎಂದರೆ ಆತ್ಮನಲ್ಲಿ ಬೆರೆತಿರುವವನು ಎಂದು ಅರ್ಥ. ವಿಧಾನ ತಿಳಿದಷ್ಟು ಮಾತ್ರಕ್ಕೆ ಯಾರೂ ಯೋಗಿ ಆಗಲಾರನು. ತನಗೆ ತಿಳಿದ ದೈವವಿಧಾನಗಳನ್ನು ಆಚರಿಸುವವನೇ ಕೊನೆಗೆ ಯೋಗಿಯಾಗಿ ಬದಲಾಗುತ್ತಾನೆ. ಆದ್ದರಿಂದ ಯೋಗಿ ಜ್ಞಾನಿಗಿಂತ ಉತ್ತಮನೆಂದು ಹೇಳಬಹುದು.

ತಪಸ್ಸು ಮಾಡುವವರಿಗಿಂತ ಯೋಗಿ ಉತ್ತಮನೆಂದು ಭಗವಂತನು ತಿಳಿಸಿದ್ದಾನೆ. ಹಾಗೆ ಏಕೆ ತಿಳಿಸಿದ್ದಾನೆಂದರೆ! ಯೋಗಿಗೂ ತಪಸ್ವಿಗೂ ಬಹಳ ವ್ಯತ್ಯಾಸ ಇದೆ. ತಪಸ್ಸು ಎಂದರೆ ತಪಿಸುವುದು. ಒಬ್ಬ ವ್ಯಕ್ತಿ ತಪಸ್ಸು ಮಾಡುತ್ತಿದ್ದಾನೆಂದರೆ ಆ ವ್ಯಕ್ತಿ ಯಾವುದೋ ಒಂದು ದೇವರ ಆಕಾರವನ್ನು ನೋಡಬೇಕೆಂಬ ನಿಮಿತ್ತವೋ ಅಥವಾ ಒಂದು ಮಂತ್ರವನ್ನು ಮನಸ್ಸಿನಲ್ಲಿ ಲಯ ಮಾಡಿಕೊಂಡು ಅದಕ್ಕೋಸ್ಕರ ತಪಿಸುವುದೋ ಆಗಿರುತ್ತದೆ. ಇನ್ನು ಕೆಲವರು ಮನಸ್ಸು ಒಂದುಕಡೆ ಕೇಂದ್ರೀಕರಿಸಿ ಕಾಣಿಸುವ ದೃಶ್ಯಗಳಿಗೋಸ್ಕರ ತಪಿಸುತ್ತಿದ್ದಾರೆ. ಒಟ್ಟಾರೆ ಜೀವಿಯು ಇಂದ್ರಿಯಗಳಿಗೆ ಕಾಣಿಸುವವುಗಳ ಮೇಲೆ ಆಗಲಿ, ತನಗಿಂತ ಇತರ ವಸ್ತುಗಳ ಮೇಲಾಗಲಿ, ದೇವರುಗಳ ಮೇಲಾಗಲಿ ತಪಿಸುವುದನ್ನು ತಪಸ್ಸು ಎಂದು ಹೇಳಬಹುದು. ಅನೇಕರು ಪೂರ್ವದಲ್ಲಿ ತಪಸ್ಸು ಮಾಡಿ ಅವರ ಇಷ್ಟಗಳನ್ನು ದೇವತೆಗಳಿಂದ ಪಡೆದಿದ್ದಾರೆ. ಜನ ಸಮೂಹಗಳಲ್ಲಿದ್ದರೆ ಅವರ ತಪಸ್ಸಿಗೆ ಭಂಗ ಉಂಟಾಗುತ್ತದೆಂದು ಮಾನವ ಸಂಚಾರವಿಲ್ಲದ ಅರಣ್ಯಕ್ಕೆ ಹೋಗಿ ಪೂರ್ವದಲ್ಲಿ ತಪಸ್ಸು ಮಾಡಿಕೊಳ್ಳುತ್ತಿದ್ದರು. ಪೂರ್ವದಲ್ಲಿ ಬಹಳಜನ ಕೋರಿಕೆಗಳನ್ನು ನೆರವೇರಿಸಿಕೊಳ್ಳುವುದಕ್ಕೋಸ್ಕರ

ತಮ್ಮ ಇಷ್ಟ ದೈವವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಸ್ಮರಿಸಿ ಸ್ಮರಿಸಿ ಸ್ವಲ್ಪಕಾಲಕ್ಕೆ ತಪಸ್ಸು ಫಲಿಸಿದಾಗ ಅವರ ಕೋರಿಕೆಗಳನ್ನು ನೆರವೇರಿಸಿಕೊಳ್ಳುತ್ತಿದ್ದರು. ಅರ್ಜುನನು ಪಾಶುಪತಾಸ್ತ್ರಕ್ಕೋಸ್ಕರ ಶಿವನನ್ನು ತಪಿಸಿದ್ದಾನೆ. ವಿಶ್ವಾಮಿತ್ರನು ಸಹ ಸ್ವಲ್ಪಕಾಲ ಬ್ರಹ್ಮಾಸ್ತ್ರಕ್ಕೋಸ್ಕರ ತಪಿಸಿದಂತೆ ಚರಿತ್ರೆಯಲ್ಲಿ ತಿಳಿಯುತ್ತಿದೆ. ತಪಸ್ಸಿನಿಂದ ಮೋಕ್ಷಸಿದ್ಧಿಯನ್ನು ಪಡೆಯಲಾರೆವು, ಕಾಮ್ಯಾರ್ಥಸಿದ್ಧಿಯನ್ನು ಪಡೆಯಬಹುದು. ಆದ್ದರಿಂದಲೇ ಭಗವಂತನು ತಪಸ್ಸಿನಿಂದ ನನ್ನನ್ನು ಸೇರುವುದಕ್ಕೆ ಸಾಧ್ಯವಾಗುವುದಿಲ್ಲ ಎಂದು ತಿಳಿಸಿದ್ದಾನೆ. ತಪಸ್ವಿಗಿಂತ ಪರಮಾತ್ಮ ಮಾರ್ಗವನ್ನು ತಿಳಿದುಕೊಂಡ ಜ್ಞಾನಿಯೇ ಉತ್ತಮನೆಂದು ಹೇಳಬಹುದು. ತಪಸ್ಸಿನಿಂದ ಹೊಂದುವ ಫಲ ಅನುಭವಿಸಿದ ತಕ್ಷಣ ಮುಗಿದುಹೋಗುತ್ತದೆ. ಜ್ಞಾನ ಹಾಗಲ್ಲದೆ ಮರುಜನ್ಮದಲ್ಲಿ ಸಹ ಪರಮಾತ್ಮ ಮಾರ್ಗವನ್ನೇ ಸೂಚಿಸುತ್ತದೆ. ಆದ್ದರಿಂದ ತಪಸ್ವಿಗಿಂತ ಜ್ಞಾನಿಯೇ ಉತ್ತಮನೆಂದು ಹೇಳಬಹುದು. ತಿಳಿದವನಿಗಿಂತ ಹೊಂದಿದವನು ಇನ್ನೂ ಶ್ರೇಯಸ್ಕರನು, ಆದ್ದರಿಂದ ಜ್ಞಾನಿಗಿಂತ ಯೋಗಿ ಅಧಿಕನೆಂದು ಹೇಳಬಹುದು. ಒಬ್ಬ ಯೋಗಿ ಮಾತ್ರ ತನ್ನ ದೇಹದಲ್ಲಿರುವ ಆತ್ಮವನ್ನು ಯೋಗದ ಮುಖಾಂತರ ತಿಳಿದುಕೊಳ್ಳುತ್ತಿದ್ದಾನೆ. ಉಳಿದವರು ಯಾರು ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಭಗವಂತನು ಗೀತಾಶಾಸ್ತ್ರವನ್ನು ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ

**11ನೇ ಶ್ಲೋ. ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯ ವಸ್ಥಿತಮ್,**
**ಯತಂತೋಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯ ಚೇತಸಃ**

ಪ್ರಯತ್ನ ಮಾಡುವ ಯೋಗಿಗಳು ಮಾತ್ರ ದೇಹದಲ್ಲಿರುವ ಆತ್ಮವನ್ನು ತಿಳಿದುಕೊಳ್ಳುತ್ತಾರೆ. ಉಳಿದವರು ಎಷ್ಟು ಪ್ರಯತ್ನಿಸಿದರೂ ತಿಳಿದುಕೊಳ್ಳ ಲಾರರೆಂದು ಹೇಳಿದ್ದಾನೆ. ಆದ್ದರಿಂದ ಪ್ರಪಂಚದಲ್ಲಿ ಆತ್ಮವನ್ನು ತಿಳಿದುಕೊಳ್ಳು ವುದಕ್ಕೆ ಉತ್ತಮವಾದ ಮಾರ್ಗ ಯೋಗವೇ ಎಂದು ಎಲ್ಲಾ ವಿಧಗಳಲ್ಲಿ ತಿಳಿಯುತ್ತಿದೆ. ಏನಾದರೂ ಪರಿಶೋಧಿಸಿ ತಿಳಿದುಕೊಳ್ಳುವುದು ಮಾನವರ ಕರ್ತವ್ಯ. ನಮ್ಮ ಅನುಭವದಲ್ಲಿ ತಪಸ್ಸನ್ನೇ ದೊಡ್ಡದಾಗಿ ಭಾವಿಸಿಕೊಳ್ಳುವವರು

ಬಹಳಜನ ತಟಸ್ಥಿಸಿರುವುದರಿಂದ  ತಪಸ್ಸಿಗಿಂತ ಯೋಗ ಮೀರಿರುವುದೆಂದು ವಿಶಧೀಕರಿಸಿ ತಿಳಿಸಲಾಗಿದೆ. ಆದ್ದರಿಂದ ತಪಸ್ವಿಕರಾಗಲಿ, ಜ್ಞಾನಿಗಳಾಗಲಿ ನಮ್ಮನ್ನು ಹೇಳನಮಾಡಿದ್ದಾರೆಂದು ಅಭಿಪ್ರಾಯಪಡದೆ ವಾಸ್ತವವನ್ನು ತಿಳಿದುಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.

ಮತ್ತೊಂದು ಮಾತು **'ಕರ್ಮಿಭ್ಯಶ್ಚಾಧಿಕೋ ಯೋಗಿ'** ಎಂದು ಭಗವಂತನು ಆತ್ಮ ಸಂಯಮಯೋಗದಲ್ಲಿ ಹೇಳಿದ್ದಾನಲ್ಲ! ಕರ್ಮವನ್ನು ಆಚರಿಸುತ್ತಾ ಕರ್ಮವನ್ನು ಸನ್ಯಾಸಿಸಿ ಅವುಗಳಿಂದ ಬರುವ ಪಾಪಪುಣ್ಯಗಳನ್ನು ಹೊಂದದೆಹೋಗಬಹುದಲ್ಲ! ಅದೂ ಕರ್ಮಯೋಗವೇ ತಾನೆ! ಮತ್ತು ಕರ್ಮಗಳು ಮಾಡುವವರಿಗಿಂತ ಯೋಗಿ ಅಧಿಕನೆಂದಿದ್ದಾರಲ್ಲ! ಹೇಗೆ? ಎಂದು ಕೆಲವರು ಕೇಳಬಹುದು. ಆ ಮಾತನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಇಲ್ಲಿ ತಿಳಿದುಕೊಳ್ಳಬೇಕಾದ ರಹಸ್ಯ ಒಂದಿದೆ. ಅದು ಏನೆಂದರೆ ಕರ್ಮವನ್ನು ಆಚರಿಸುತ್ತಾ ಅದರಲ್ಲಿ ಬರುವ ಪಾಪಪುಣ್ಯವನ್ನು ಹೊಂದದೆ ಹೋಗುವುದು ಸಹ ಯೋಗವೇ. ಅಂಥವನನ್ನು ಕರ್ಮಯೋಗಿ ಎನ್ನುತ್ತಾರೆ. ಆತ್ಮಸಂಯಮ ಯೋಗದಲ್ಲಿ ಆತ್ಮಯೋಗಿಯನ್ನು ಕುರಿತು ಭಗವಂತನು ತಿಳಿಸಿದ್ದಾನೆ. ಕರ್ಮಯೋಗಿಗಿಂತ ಆತ್ಮಯೋಗಿ ಅಧಿಕನು. ಯೋಗಿಗಳಲ್ಲಿ ಸಹ ಚಿಕ್ಕವರು ದೊಡ್ಡವರು ಇದ್ದಾರೆಂದು ಮೊದಲೇ ತಿಳಿದುಕೊಂಡಿದ್ದೇವೆ. ಸರ್ವ ಯೋಗಿಗಳಲ್ಲಿ ಸಹ ಎಷ್ಟೋ ತಾರತಮ್ಯಗಳು ಹೊಂದಿದ್ದಾರೆ. ಆದ್ದರಿಂದಲೇ ಭಗವಂತನು ಗೀತಾ ಶಾಸ್ತ್ರದಲ್ಲಿ ಅಲ್ಲಲ್ಲಿ **'ಸರ್ವ ಯೋಗಿಗಳಲ್ಲಿ ನನಗೆ ಇಂಥವರು ಉತ್ತಮರು, ಈ ವಿಧವಾಗಿ ಇರುವವರನ್ನು ನಾನು ಶ್ರೇಷ್ಟರೆಂದು ತಿಳಿಯುತ್ತಿರುತ್ತೇನೆ'** ಎಂದು ಹೇಳಿದ್ದಾನೆ. ಮತ್ತು ಆತ್ಮಸಂಯಮ ಯೋಗದಲ್ಲಿ ಕೊನೆಯಲ್ಲಿ **'ಸರ್ವ ಯೋಗಿಗಳಲ್ಲಿ ಯಾರು ಸಂಪೂರ್ಣವಾಗಿ ಅಂತರಾತ್ಮದಲ್ಲಿ ನನ್ನನ್ನೇ ಆಶ್ರಯಿಸಿ ಶ್ರದ್ಧೆಹೊಂದಿ ನನ್ನನ್ನೇ ಆರಾಧಿಸುತ್ತಿರುತ್ತಾನೋ ಅವನೇ ಉತ್ತಮನೆಂದು ತಿಳಿಯುತ್ತಿದ್ದೇನೆ.'** ಎಂದು ತಿಳಿಸಿದ್ದಾನೆ. ಆದ್ದರಿಂದ ಯೋಗಿಗಳಲ್ಲಿ ಸಹ ಚಿಕ್ಕವರು ದೊಡ್ಡವರು ಇದ್ದಾರೆಂದು ಹೇಳಬಹುದು. ಕರ್ಮಯೋಗಿಗಳಿಗಿಂತ ಆತ್ಮಯೋಗಿ ಏಕೆ ಅಧಿಕನು ಎನ್ನುವ ವಿಷಯವನ್ನು ತಿಳಿದುಕೊಳ್ಳೋಣ.

ಕರ್ಮಯೋಗ ಆಚರಿಸಿ ಮಾಡುತ್ತಿರುವ ಕಾರ್ಯದಲ್ಲಿನ ಪಾಪಪುಣ್ಯಗಳು ಆ ಜೀವಿಗೆ ಸ್ವಲ್ಪವೂ ಅಂಟುವುದಿಲ್ಲ. ಆದರೆ ಹೋದ ಜನ್ಮದಲ್ಲಿ ಮಾಡಿಕೊಂಡಿರುವ ಪಾಪಪುಣ್ಯಗಳನ್ನು ಅಂದರೆ ಪ್ರಾರಬ್ಧವನ್ನು ತಪ್ಪದೆ ಅನುಭವಿಸಬೇಕಾಗಿರುತ್ತದೆ. ಕೆಸರಿನಲ್ಲಿ ತೂರಿದ ಕುಂಬಾರ ಹುಳಕ್ಕೆ ಕೆಸರು ಅಂಟದಿರುವಂತೆ, ಕರ್ಮಯೋಗಿ ಕರ್ಮಗಳು ಆಚರಿಸಿದರೂ ಆ ಕರ್ಮದಲ್ಲಿನ ಪಾಪಪುಣ್ಯಗಳು ಆ ಜೀವಿಗೆ ಅಂಟದಂತಿರುತ್ತದೆ. ಆ ಜನ್ಮದಲ್ಲಿ ಕರ್ಮವನ್ನು ಕರ್ಮಯೋಗದಿಂದ ಸಂಪಾದಿಸದಂತೆ ಇರಬಹುದು. ಆದರೆ ಹೋದ ಜನ್ಮಗಳಲ್ಲಿ ಸಂಪಾದಿಸಿಕೊಂಡ ಕರ್ಮವನ್ನು ಕರ್ಮಯೋಗದಿಂದ ಹೋಗಲಾಡಿಸಿಕೊಳ್ಳಲಾರ. ಕರ್ಮಯೋಗದ ಶಕ್ತಿ ಆ ಜನ್ಮದಲ್ಲಿ ಬರುವ ಕರ್ಮವನ್ನು ಜಯಿಸುವುದಕ್ಕೆ ಮಾತ್ರವೇ ಉಪಯೋಗಪಡುತ್ತದೆ. ಹಿಂದಿನ ಜನ್ಮದಲ್ಲಿ ನಾವು ಮಾಡಿಕೊಂಡ ಪಾಪಪುಣ್ಯಗಳನ್ನು ಇಲ್ಲದಂತೆ ಮಾಡಿಕೊಳ್ಳಬೇಕೆಂದರೆ ಒಂದು ಆತ್ಮಯೋಗದಿಂದಲೇ ಸಾಧ್ಯವಾಗುತ್ತದೆ. ಆತ್ಮಯೋಗದಿಂದ ಆ ಜನ್ಮದ ಕರ್ಮವನ್ನು ಅಂಟದಂತೆ ಇರಬಹುದು. ಮತ್ತು ಹಿಂದಿನ ಜನ್ಮದಲ್ಲಿ ಸಂಪಾದಿಸಿಕೊಂಡ ಕರ್ಮವನ್ನು ಜ್ಞಾನಾಗ್ನಿಯಿಂದ ಸುಟ್ಟುಹಾಕಬಹುದು. ಇವುಗಳೆಲ್ಲವನ್ನು ಪರಿಶೀಲಿಸಿ ನೋಡಿದರೂ ಕರ್ಮಗಳು ಮಾಡುವವರಿಗಿಂತ ಯೋಗಿ ಅಧಿಕನೆಂದು ಭಗವಂತನು ಏಕೆ ಹೇಳಿರುವುದು ಅರ್ಥವಾಗುತ್ತದೆ.

ಪವಿತ್ರವಾದ ಮಾನವ ಜನ್ಮದೊಳಗೆ ಬಂದಿರುವ ಜೀವಿಗಳಿರಾ! ನಿಮ್ಮಲ್ಲಿ ಅಂಟಿರುವ ಅಹಮ್‌ನ್ನು ಬಿಟ್ಟು ಇಲ್ಲಿಯವರೆಗೂ ನಂಬಿಕೊಂಡ ಮಾರ್ಗಗಳನ್ನು ಬಿಟ್ಟು ಅತ್ಯುತ್ತಮವಾದ ಯೋಗಮಾರ್ಗದಲ್ಲಿ ಅತಿವೇಗವಾಗಿ ಪ್ರಯಾಣಿಸಿ ಪರಮಪದವನ್ನು ಪಡೆಯಬೇಕೆಂದು ನಿಮಗೆ ತಿಳಿಸುತ್ತಿದ್ದೇವೆ. ಇಂದಿನ ನನ್ನ ಮಾತು ನಂಬದಿದ್ದರು ಅಂದಿನ ಭಗವಂತನ ಮಾತಾದರೂ ನಂಬಿ ಸರಿಯಾದ ಮಾರ್ಗವನ್ನು ಸೇರಿಕೊಳ್ಳುತ್ತೀರೆಂದು ಅಂದುಕೊಳ್ಳುತ್ತಿದ್ದೇನೆ.

# ಮಂತ್ರ ಶಕ್ತಿ

ಈದಿನ ಪ್ರಪಂಚದಲ್ಲಿ ಮಾಂತ್ರಿಕರು ಸಹ ಇದ್ದಾರೆ. ಮಂತ್ರಕ್ಕೆ ಪ್ರಭಾವವಿದೆ ಎಂದು ನಿರೂಪಿಸುತ್ತಿದ್ದಾರೆ. ಯೋಗಿಗಳನ್ನು ನೋಡಿ ನೀವು ಮಾಡುತ್ತಿರುವ ಅಭ್ಯಾಸವು ಬೆಟ್ಟವನ್ನು ಅಗೆದು ಇಲಿಯನ್ನು ಹಿಡಿದಂತೆ ಇದೆ. ಎಷ್ಟು ಕಷ್ಟಪಟ್ಟರೂ ಫಲಿತ ಸ್ವಲ್ಪವೂ ಸಹ ಇರುವುದಿಲ್ಲ. ಅದೇ ಅಭ್ಯಾಸ ನಾವು ಮಾಡುತ್ತಿರುವ ವಿಧಾನದಿಂದ  ಮಾಡಿದರು ನೀವು ತಕ್ಷಣ ಫಲಿತವನ್ನು ಹೊಂದಬಹುದು. ಹೊಂದಿದಂತೆ ಇತರರಿಗೆ ನಿರೂಪಿಸಬಹುದೆಂದು ಯೋಗವನ್ನೆ ಅವಹೇಳನ ಮಾಡುತ್ತಾ ಯೋಗಾಭ್ಯಾಸಕರನ್ನೇ ಕೆಲಸಕ್ಕೆ ಬಾರದ ಕೆಲಸ ಮಾಡುತ್ತಿರುವವರಾಗಿ ಭಾವಿಸಿ ಹೇಳುತ್ತಿದ್ದಾರೆ. ಅದರಿಂದ ಕೆಲವರು ಯೋಗಾಭ್ಯಾಸಪರರು ಸಹ ಅವರು ಹೇಳುವುದು ನಿಜವೇ ಎಂದು ನಂಬಿ ಬೇಗನೆ ಫಲಿತಕೊಡುವ ಮಂತ್ರಮಾರ್ಗವನ್ನೆ ಅನುಸರಿಸುತ್ತಿದ್ದಾರೆ. ಇದು ಎಲ್ಲವೂ ಗಮನಿಸಿದ ನಂತರ ಯೋಗಶಕ್ತಿಗೂ, ಮಂತ್ರಶಕ್ತಿಗೂ ಇರುವ ವ್ಯತ್ಯಾಸ ಏನು? ಎನ್ನುವ ವಿಷಯ ತಿಳಿಯದೆಹೋಗುವುದರಿಂದ ಮತ್ತು ಯೋಗ ಎಂದರೆ ಏನು? ಮಂತ್ರ ಎಂದರೆ ಏನು? ಎನ್ನುವ ವಿಷಯ ತಿಳಿಯದಿರುವುದರಿಂದ ಕೆಲವರು ಯೋಗಭ್ರಷ್ಟ ರಾಗುತ್ತಿದ್ದಾರೆಂದು ತಿಳಿಯುತ್ತಿದೆ. ಆದ್ದರಿಂದ ಮಂತ್ರಗಳನ್ನು ಮಂತ್ರಶಕ್ತಿಯನ್ನು ಕುರಿತು  ಹೇಳಬೇಕೆಂದುಕೊಂಡಿದ್ದೇನೆ.

ಕೆಲವು ಇಟ್ಟಿಗೆಗಳನ್ನು ಶೇಕರಿಸಿ ಕ್ರಮವಾಗಿ ಜೋಡಿಸುತ್ತಾ ಹೋದರು ಕೊನೆಗೆ ಒಂದು ಗೃಹ ತಯಾರಾಗುತ್ತದೆ. ಹಾಗೆ ಒಂದು ಯಂತ್ರವನ್ನು ತಯಾರು ಮಾಡಿಕೊಳ್ಳುವುದಕ್ಕೆ ಕೆಲವು ಕಬ್ಬಿಣದಚೂರುಗಳನ್ನು ಶೇಕರಿಸಬೇಕು. ಪುಸ್ತಕವನ್ನು ತಯಾರು ಮಾಡುವುದಕ್ಕೆ ಕೆಲವು ಕಾಗದಗಳನ್ನು ಶೇಕರಿಸಬೇಕು. ಕೆಲವು ಇಟ್ಟಿಗೆಗಳ ಕೂಡಲಿಯನ್ನೇ ಗೃಹವೆನ್ನುತ್ತಿದ್ದೇವೆ. ಕೆಲವು ಕಬ್ಬಿಣತುಂಡಗಳ ಕೂಡಲಿಯನ್ನೇ ಯಂತ್ರವೆನ್ನುತ್ತಿದ್ದೇವೆ. ಕೆಲವು ಕಾಗದಗಳ ಕೂಡಲಿಯನ್ನೇ ಪುಸ್ತಕ ಎನ್ನುತ್ತಿದ್ದೇವೆ. ಒಂದೊಂದು ವಸ್ತುವನ್ನು ತಯಾರುಮಾಡುವುದಕ್ಕೆ ಅದಕ್ಕೆ ಸಂಬಂಧಿಸಿದ ಕೆಲವು ಚೂರುಗಳನ್ನು ಕೂಡಿಸಿ ಜೋಡಿಸಿದಂತೆ, ಒಂದೊಂದು ಕಾರ್ಯವನ್ನು ಸಾಧಿಸುವುದಕ್ಕೆ ಒಂದೊಂದು ವಿಧಮಂತ್ರಗಳನ್ನು

ಕೂಡಿಸಿ ಜೋಡಿಸಬೇಕು. ಇಲ್ಲಿ ಕೆಲವರಿಗೆ ಹೊರಗಿನ ವಸ್ತುಗಳನ್ನು ಸೇರಿಸಿ ಒಂದು ರೂಪವನ್ನು ಏರ್ಪಡಿಸಿ ಕಾರ್ಯಗಳನ್ನು ಸಾಧಿಸಬಹುದು, ಆದರೆ ಮಂತ್ರಗಳಿಂದ ಕಾರ್ಯಗಳನ್ನು ಮಾಡುವುದು ಹೇಗೆ? ಎನ್ನುವ ಸಂಶಯ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ!

ಮಂತ್ರ ಎಂದರೆ ಒಂದು ನಿರ್ಣಿತ ಶಕ್ತಿ ಯುಕ್ತವಾದುದು. ಮಂತ್ರವು ಕೆಲವು ಅಕ್ಷರಗಳಿಂದಾಗಲಿ ಅಥವಾ ಒಂದು ಅಕ್ಷರದಿಂದಾಗಲಿ ಇರುವುದು. ಅಕ್ಷರಗಳ ಮಿಶ್ರಿತದಿಂದ ಇಲ್ಲವೆ ಅಕ್ಷರದಿಂದ ಆ ಮಂತ್ರಕ್ಕೆ ಪ್ರಭಾವವಿರುತ್ತದೆ. ಉದಾಹರಣೆಗೆ 'ರಂ' ಎನ್ನುವುದು ಒಂದು ಮಂತ್ರ 'ಹ್ರೀಂ' ಎನ್ನುವುದು ಒಂದು ಮಂತ್ರ. ಹಾಗೆ ಕೆಲವು ಅಕ್ಷರಗಳ ಕೂಡಲಿಯಾದ 'ಶ್ರೀಂ ಹ್ರೀಂ ಕ್ಲೀಂ ಐಂ ರಂ' ಎನ್ನುವವು ಒಂದು ಮಂತ್ರ. ಹೀಗೆ ಅನೇಕ ಅಕ್ಷರ ಸಮ್ಮೇಳನಗಳಲ್ಲಿ ಎಷ್ಟೋ ಮಂತ್ರಗಳು ಇವೆ. ಒಂದೊಂದು ವಿಧವಾದ ಮಂತ್ರಕ್ಕೆ ಒಂದೊಂದು ವಿಧವಾದ ಶಕ್ತಿ ಇರುತ್ತದೆ. ಆ ಶಕ್ತಿ ಯಾವ ವಿಧವಾದುದೋ ತಿಳಿದುಕೊಂಡವರು ಆ ಶಕ್ತಿಯನ್ನು ಸಂಪಾದಿಸಿಕೊಂಡು, ಅದಕ್ಕೆ ಸಂಬಂಧಿಸಿದ ಕೆಲಸವನ್ನು ಪೂರ್ವದಲ್ಲಿ ನೆರವೇರಿಸಿಕೊಳ್ಳುತ್ತಿದ್ದರು. ಮಂತ್ರಶಕ್ತಿಯನ್ನು ಅವರು ಹೇಗೆ ಸಂಪಾದಿಸಿಕೊಂಡಿದ್ದಾರೆಂದು ನಾವು ಅಂದುಕೊಳ್ಳಬಹುದು. ಅದು ಹೇಗೆ ಎಂದರೆ ಉದಾಹರಣೆಗೆ ಕೆಲವು ಅಕ್ಷರಗಳಿಂದ ಕೂಡಿದ ಮಂತ್ರವು ಮಾರಣಮಂತ್ರ ಅನ್ನಲಾಗುತ್ತದೆ. ಆ ಮಾರಣಮಂತ್ರವನ್ನು ಕೆಲವು ನಿಯಮಗಳ ಪ್ರಕಾರ ನಿರ್ಣಯವಾದ ಸಂಖ್ಯೆಯಲ್ಲಿ ಮನಸ್ಸಿನಿಂದ ಉಚ್ಚಾಟನೆ ಮಾಡಿದರೆ ಆ ಮಂತ್ರದಲ್ಲಿನ ಶಕ್ತಿಯೆಲ್ಲವೂ ಒಂದು ಕೂಡಲಿಯಾಗಿ ಏರ್ಪಟ್ಟು ಅದು ಮಾರಣಮಾಡುವ ಪ್ರಭಾವ ಹೊಂದಿರುವುದಾಗುತ್ತದೆ. ಆ ಮಂತ್ರ ಪ್ರಭಾವ ಉಚ್ಚಾಟನೆ ಮಾಡಿದವನಲ್ಲಿ ನಿಗೂಢವಾಗಿ ನಿಂತುಹೋಗುತ್ತದೆ. ಹಾಗೆ ಮಂತ್ರಪ್ರಭಾವವನ್ನು ಸಂಪಾದಿಸಿಕೊಳ್ಳುವುದನ್ನೇ ಮಂತ್ರಸಿದ್ಧಿ ಎಂದು ಅನ್ನುತ್ತಾರೆ. ಆ ಸಿದ್ಧಿ ಹೊಂದಿದ ವ್ಯಕ್ತಿ ಮತ್ತೆ ಆ ಮಾರಣಮಂತ್ರವನ್ನು ಉಚ್ಛರಿಸಿಕೊಂಡು ಯಾರ ಮೇಲೆ ಅದರ ಪ್ರಭಾವ ತೋರಿಸಬೇಕೆಂದು ಸಂಕಲ್ಪಿಸಿಕೊಳ್ಳುತ್ತಾನೋ,

ಅವನ ಮೇಲೆ ಅದು ಪ್ರಸಾರವಾಗಿ ಅವನನ್ನು ಮರಣ ಮಾಡುತ್ತಿದೆ. ಒಂದು ಮಾರಣವನ್ನೇ ಅಲ್ಲದೆ ಅನೇಕ ವಿಧ ಕಾರ್ಯಗಳನ್ನು ಮಂತ್ರಪ್ರಭಾವಗಳಿಂದ ಪೂರ್ವದಲ್ಲಿ ಕೆಲವರು ಮಾಡಿದಂತೆ ತಿಳಿಯುತ್ತಿದೆ. ಪೂರ್ವದಲ್ಲಿ ಮಂತ್ರ ಪ್ರಭಾವಗಳಿಂದ ವಿನಿಯೋಗಿಸುವ ಆಯುಧಗಳನ್ನು **'ಅಸ್ತ್ರಗಳು'** ಎಂದು ಅನ್ನುತ್ತಿದ್ದರು. ಪೂರ್ವದಲ್ಲಿ **ನಾಗಾಸ್ತ್ರ, ಬ್ರಹ್ಮಾಸ್ತ್ರ** ಎನ್ನುವ ನಾನಾವಿಧ ಅಸ್ತ್ರಗಳು ಇರುವಂತೆ ತಿಳಿಯುತ್ತಿದೆ. ಒಂದೊಂದು ಅಸ್ತ್ರವು ಮಂತ್ರ ಪ್ರಭಾವದಿಂದ ಕೂಡಿಕೊಂಡಿರುತ್ತದೆ. ಆ ಪ್ರಭಾವವನ್ನನುಸರಿಸಿ ಫಲಿತವಿರುತ್ತದೆ. ಆದ್ದರಿಂದ ಎಲ್ಲದಕ್ಕಿಂತ ಹೆಚ್ಚು ಪ್ರಭಾವ ಹೊಂದಿರುವುದು **'ಬ್ರಹ್ಮಾಸ್ತ್ರ'** ಎಂದು ಚರಿತ್ರೆಯಲ್ಲಿ ತಿಳಿಯುತ್ತಿದೆ. ರಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದಂತೆ, ಕರ್ಣನು ಅರ್ಜುನನ ಮೇಲೆ ನಾಗಾಸ್ತ್ರವನ್ನು ಪ್ರಯೋಗಿಸಿದಂತೆ ತಿಳಿಯುತ್ತಿದೆ. ಅವರು ಆ ದಿನ ಧನಸ್ಸಿಗೆ ಒಂದು ಬಾಣ ಸಂಧಿಸಿಬಿಟ್ಟು ಇದು ಸಹಸ್ರಮಾರಣಾಸ್ತ್ರ, ಇದು ಸಾವಿರಜನರನ್ನು ಸಾಯಿಸುತ್ತದೆಂದು ಹೇಳುತ್ತಿದ್ದರು. ಒಂದು ಬಾಣ ಸಾವಿರಜನರನ್ನು ಹೇಗೆ ಸಾಯಿಸುತ್ತದೆಂದು ಅನುಮಾನ ಬರಬಹುದು. ಅದಕ್ಕೆ ಸಮಾಧಾನ! ಬಿಟ್ಟಒಂದು ಬಾಣ ಮಂತ್ರ ಪ್ರಭಾವದಿಂದ ಸಾವಿರಜನರನ್ನು ಸಾಯಿಸುತ್ತಿತ್ತು. ಅಸ್ತ್ರ ಒಂದಾದರೂ ಫಲಿತ ಸಾವಿರಜನರನ್ನು ಸಾಯಿಸುವುದು, ಸಾವಿರಜನರನ್ನು ಸಾಯಿಸುವ ಶಕ್ತಿ ಆ ಸಮಯದಲ್ಲಿ ಆ ಬಾಣದಲ್ಲಿ ನಿಗೂಢವಾಗಿದೆ.

ಪೂರ್ವಕಾಲದಿಂದ ಇಲ್ಲಿಯವರೆಗೂ ಮಂತ್ರಗಳು ನಾನಾವಿಧ ಪ್ರಭಾವಗಳಿರುವವಾಗಿ ಇವೆ. ಹಾವಿಗೆ ಒಂದು ವಿಧ ಮಂತ್ರ, ಚೇಳಿಗೆ ಒಂದು ವಿಧವಾದ ಮಂತ್ರ, ದೆವ್ವಗಳಿಗೆ ಒಂದು ವಿಧ ಮಂತ್ರ, ಮರಣಕ್ಕೆ ಒಂದು ವಿದ ಮಂತ್ರ ಹೀಗೆ ಅನೇಕ ವಿಧ ಮಂತ್ರಗಳು ಈಗಲೂ ಇವೆ. ಒಂದೊಂದು ವಿಧ ಮಂತ್ರಕ್ಕೂ ಒಂದೊಂದು ವಿಧ ಆಚಾರವಿರುತ್ತದೆ. ಆ ಆಚಾರದ ಪ್ರಕಾರ ಇದ್ದರೇ ಆ ಮಂತ್ರ ಫಲಿಸುತ್ತದೆ. ಆಚಾರ ಬಿಟ್ಟರೆ ಆ ಮಂತ್ರ ಫಲಿಸುವುದಿಲ್ಲ. ಮುಖ್ಯವಾಗಿ ಹೇಳಬೇಕೆಂದರೆ ಮಂತ್ರ ಅಕ್ಷರಗಳಿಂದ ಕೂಡಿರುವುದಾಗಿ, ಎಷ್ಟೋ

ನಿಯಮಗಳು ಇರುವುದಾಗಿರುತ್ತದೆ. ನಿಯಮಗಳನ್ನು ಅತಿಕ್ರಮಿಸದ ಪಕ್ಷದಲ್ಲಿ ಎಷ್ಟು ಕಾಲವಾದರೂ ಮಂತ್ರಪ್ರಭಾವ ಹಾಗೆ ಇರುತ್ತದೆ.

ಒಂದು ಮಚ್ಚನ್ನು ಕೆಲವು ಕಟ್ಟಿಗೆಗಳನ್ನು ಹೊಡೆಯುವುದಕ್ಕೆ ವಿನಿಯೋಗಿಸಿದರು ಆ ಮಚ್ಚಿನ ಹರಿತವು ಕಡಿಮೆಯಾಗಿ ಮೊದ್ದುಹೋಗುತ್ತದೆ. ಆಗ ಆ ಮಚ್ಚಿಗೆ ಮತ್ತೆ ಹರಿತ ಮಾಡಬೇಕಾಗಿ ಬರುತ್ತದೆ. ಇಲ್ಲದ ಪಕ್ಷದಲ್ಲಿ ಮಚ್ಚು ಕಟ್ಟಿಗೆಗಳನ್ನು ಕತ್ತರಿಸುವುದಿಲ್ಲ. ಹಾಗೆ ಮಂತ್ರಗಳನ್ನು ಸಿದ್ಧಿಮಾಡಿಕೊಂಡ ನಂತರ ಅದನ್ನು ಒಂದು ಕೆಲಸಕ್ಕೆ ವಿನಿಯೋಗಿಸಿದರೂ ಆ ಕೆಲಸ ನೆರವೇರುತ್ತದೆ. ಆದರೆ ಎರಡನೆಸಲ ಆ ಮಂತ್ರ ಬಲವು ಕಡಿಮೆಯಾಗಿರುತ್ತದೆ. ಅದಕ್ಕೆ ಬಲ ಬರುವುದಕ್ಕೆ ಮತ್ತೆ ಮಂತ್ರವನ್ನು ಕೆಲವು ಸಲ ಪಠಿಸಬೇಕಾಗಿರುತ್ತದೆ. ಮಂತ್ರವನ್ನು ನಿಯಮಗಳ ಪ್ರಕಾರ ನಿತ್ಯ ಪಠಿಸುತ್ತಿದ್ದರೂ ಕೆಲಸ ನೆರವೇರಿಸುವುದಕ್ಕೆ ಆ ಮಂತ್ರಗಳು ಸಾಮರ್ಥ್ಯಗಳು ಹೊಂದಿರುತ್ತವೆ. ಹಾಗೆ ಪಠಿಸದಂತಿದ್ದರೂ ಮೊಚ್ಚು ಇದ್ದರು ಮೊದ್ದುಹೋಗಿ ಕತ್ತರಿಸುವುದಕ್ಕೆ ಯೋಗ್ಯವಲ್ಲದ ವಿಧವಾಗಿ, ಮಂತ್ರಸಿದ್ಧಿ ಹೊಂದಿದರೂ ಆ ಮಂತ್ರ ಕೆಲಸಮಾಡದೆ ಹೋಗುತ್ತದೆ.

ಮಂತ್ರಗಳ ಪ್ರಭಾವದಿಂದ ಕೆಲವು ಜನ ದೇವತೆಗಳನ್ನು ವಶ ಮಾಡಿಕೊಂಡು ಅವರನ್ನು ತಮ್ಮತಮ್ಮ ಕೆಲಸಗಳಲ್ಲಿ ವಿನಿಯೋಗಿಸುವುದು ಸಹ ನಡೆಯುತ್ತಿದೆ. ಕಾಳಿಕಶಕ್ತಿಯನ್ನು ವಶ ಮಾಡಿಕೊಂಡವರು, ಭಗಳಾಮುಖಿ ಶಕ್ತಿಯನ್ನು ವಶ ಮಾಡಿಕೊಂಡವರು, ಕಾಟೇರಿದೇವತೆಯನ್ನು ವಶ ಮಾಡಿಕೊಂಡವರು, ಆಂಜನೇಯನನ್ನು ವಶ ಮಾಡಿಕೊಂಡವರು ಈ ಕಾಲದಲ್ಲಿಯೂ ಸಹ ಇದ್ದಾರೆ. ಹಾಗೆ ವಶ ಮಾಡಿಕೊಂಡವರಿಗೆ ಸ್ವಲ್ಪಕಾಲಕ್ಕೆ ಆ ದೇವತೆಗಳಿಂದಲೇ ಅಪಾಯ ನಡೆಯುತ್ತಿರುವುದು ಸಹ ಸಂಭವಿಸುತ್ತಿದೆ. ಹಾಗೆ ಏಕೆ ನಡೆಯುತ್ತಿದೆ ಎಂದರೆ! ಒಬ್ಬ ಬಲಶಾಲಿಯನ್ನು ಕಾರಾಗಾರ (ಜೈಲು) ದಲ್ಲಿ ಹಾಕಿ ಅವನಿಂದ ಕೆಲಸಗಳು ಮಾಡಿಸಿಕೊಳ್ಳುತ್ತಿದ್ದೇವೆಂದುಕೊಳ್ಳಿ. ಆತನು ಎಲ್ಲವೇಳೆಯಲ್ಲಿ ಆ ಬಂದಿಖಾನೆ ಬಿಟ್ಟು ಹೊರಬೀಳಬೇಕೆಂದು ಯೋಚನೆ ಮಾಡುತ್ತಿರುತ್ತಾನೆ. ಯಾವಾಗ ಸಮಯ ಅನುಕೂಲಿಸಿದರು, ಆಗ ಆ

ಬಂದಿಖಾನೆಯಿಂದ ತಪ್ಪಿಸಿಕೊಳ್ಳುವನು. ಹಾಗೆ ಶಕ್ತಿವಂತರಾದ ದೇವತೆಗಳನ್ನು ವಶ ಮಾಡಿಕೊಂಡರು, ಆ ದೇವತೆಗಳು ಅವನ ಮಂತ್ರಗಳಿಗೆ ಕಟ್ಟುಬಿದ್ದು ಅವನು ಹೇಳಿದ ಕೆಲಸಗಳು ಮಾಡುತ್ತಿರುತ್ತಾರೆ, ಆದರೆ ಆ ದೇವತೆಗಳು ಇವನಿಂದ ಯಾವಾಗ ತಪ್ಪಿಸಿಕೊಳ್ಳೋಣಾ? ಎಂದು ಆಲೋಚಿಸುತ್ತಲೇ ಇರುತ್ತಾರೆ. ಯಾವಾಗಾದರೂ ಸಾಧ್ಯವಾದರೆ, ಅಂದರೆ ಆ ಮಂತ್ರಕ್ಕಿರುವ ಆಚಾರಗಳನ್ನು ಮಾಂತ್ರಿಕನು ತಪ್ಪಿದ ಸಮಯದಲ್ಲಿ ಆ ದೇವತೆಗಳು ಮಾಂತ್ರಿಕನ ಮೇಲೆ ಅವರ ಪ್ರಭಾವ ತೋರಿಸಿ, ಅವನನ್ನು ಮರಣಿಸುವಂತೆ ಮಾಡಿ, ತಪ್ಪಿಸಿಕೊಂಡು ಇಷ್ಟಬಂದಂತೆ ಹೋಗುತ್ತಿರುತ್ತಾರೆ. ಕೆಲವು ದೇವತೆಗಳು ಮಾಂತ್ರಿಕನನ್ನು ಸಾಯಿಸದೆ ಅವನ ಕಾಲನ್ನೊ, ಕೈಯನ್ನೊ ಅಥವಾ ಸ್ವರವನ್ನೊ ಇಲ್ಲದಂತೆ ಮಾಡಿ ಹೋಗುತ್ತಿರುತ್ತಾರೆ. ಮಾಂತ್ರಿಕನನ್ನು ಸುಮ್ಮನೆ ಬಿಡದೆ ಹಾಗೆ ಏಕೆ ಮಾಡಿಹೋಗುತ್ತಿದ್ದಾರೆ ಎಂದರೆ! ಅವನು ಇಷ್ಟು ದಿನ ನನ್ನನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ನನ್ನಿಂದ ಕೆಲಸಗಳು ಮಾಡಿಸಿದ್ದಾನಲ್ಲ! ಅನ್ನುವ ಕೋಪ ಬಂದಿರುವುದರಿಂದಲೂ, ಮತ್ತು ಸುಮ್ಮನೆ ಬಿಟ್ಟುಹೋದರು ಮತ್ತೆ ನನ್ನನ್ನು ಮಂತ್ರಸಾಧನೆಯಿಂದ ತನ್ನ ಸ್ವಾಧೀನ ಮಾಡಿಕೊಳ್ಳುತ್ತಾನೆಂಬ ಭಯದಿಂದಂದಲೂ, ಅವನು ಮತ್ತೆ ಮಂತ್ರಸಾಧನೆ ಮಾಡದಂತಿರುವ ಹಾಗೆ ಆ ದೇವತೆಗಳು ಅವನನ್ನು ಮರಣಿಸುವಂತೆಯೊ, ಅಥವಾ ಅವಯವಲೋಪ ಆಗುವಂತೆಯೊ ಮಾಡಿ ಹೋಗುತ್ತಿದ್ದಾರೆ. ಆದ್ದರಿಂದ ದೇವತೆಗಳನ್ನು ವಶ ಮಾಡಿಕೊಳ್ಳುವುದು ಎನ್ನುವುದು ಬಹಳ ಕೆಲಸಕ್ಕೆ ಬಾರದ ಕೆಲಸ. ಅದರ ಮೂಲಕ ಕೊನೆಗೆ ನಷ್ಟವೇ ಸಂಭವಿಸುತ್ತದೆಂದು ತಿಳಿಯುತ್ತಿದೆ.

ಮಂತ್ರಗಳನ್ನು ಕಲಿತಿರುವುದರಿಂದ ತಾತ್ಕಾಲಿಕವಾಗಿ ಫಲಿತವಿರುತ್ತದೆ. ಆದರೆ ಪುನಃ ಅವುಗಳ ಮೂಲಕ ನಷ್ಟಗಳು ಬಹಳ ಇರುತ್ತವೆ. ಮಂತ್ರಗಳಿಂದ ಸ್ಥೂಲಕಣ್ಣುಗಳಿಗೆ ಕಾಣಿಸುವಂತೆ ಚೇಳುಗಳನ್ನು, ಹಾವುಗಳನ್ನು, ಇನ್ನೂ ಕೆಲವು ವಸ್ತುಗಳನ್ನು ತಯಾರು ಮಾಡಬಹುದು. ಆದರೆ ಅವು ಎಲ್ಲವೂ ಕೆಲವು ನಿಮಿಷಗಳು ಅಥವಾ ಕೆಲವು ಗಂಟೆಗಳ ಕಾಲ ಇರುವವೇ, ಅದಕ್ಕಿಂತ ಮೀರಿ

ಇರುವುದಿಲ್ಲ. ಮತ್ತೆ ಅವು ಅದೃಶ್ಯವಾಗುತ್ತವೆ. ಈ ಕಾಲದಲ್ಲಿ ದೊಡ್ಡ ಮಂತ್ರಗಳನ್ನು ಸಾಧಿಸುವ ಮಾಂತ್ರಿಕರು ಇಲ್ಲದಿದ್ದರೂ ಚಿಕ್ಕ ಚಿಕ್ಕ ಮಂತ್ರಗಳನ್ನು ಕಲಿತವರು ಕೆಲವರು ಅಲ್ಲಲ್ಲಿ ಇದ್ದಾರೆ. ಎಷ್ಟೋ ಚಿಕ್ಕ ಮಂತ್ರಗಳನ್ನು ಬಹುಕಷ್ಟದಿಂದ ಕಲಿತು ನಮಗಿಂತ ದೊಡ್ಡವರಿಲ್ಲ ಎಂಬುವವರು ಸಹ ಇದ್ದಾರೆ. ಕ್ಷುದ್ರದೇವತೆಗಳನ್ನು ವಶ ಮಾಡಿಕೊಂಡು ಅವುಗಳ ಮೂಲಕ ನಮ್ಮ ಕಣ್ಣಿಗೆ ಕಾಣದಿರುವ ವಸ್ತುಗಳನ್ನು ಇಂತಹ ಕಡೆ ಇವೆಯೆಂದು ಹೇಳುತ್ತಿದ್ದಾರೆ. ಅಷ್ಟುಮಾತ್ರಕ್ಕೆ ಅವರು ಜ್ಞಾನನೇತ್ರರಾ? ಎಷ್ಟು ಮಾತ್ರ ಅಲ್ಲ ಆಗಲಾರರು. ಕರ್ಣಪಿಶಾಚಿಯನ್ನು ಕೇಳಿ ಎಲ್ಲೋ ನಡೆದ ವಿಷಯಗಳನ್ನು ಅದರ ಮೂಲಕ ತಿಳಿದುಕೊಂಡು, ಅಲ್ಲಿ ಹೀಗೆ ನಡೆದಿದೆ ಎಂದು ಹೇಳುತ್ತಿದ್ದಾರೆ. ಅಷ್ಟುಮಾತ್ರಕ್ಕೆ ಅವರು ಜ್ಯೋತಿಷ್ಯರಾ? ಯಾವ ಮಾತ್ರ ಅಲ್ಲ, ಆಗಲಾರರು. ಮಂತ್ರಪ್ರಯೋಗ (ಮಾಟ) ಮಾಡಿ ಒಬ್ಬ ವ್ಯಕ್ತಿಯನ್ನು ಮರಣಿಸುವಂತೆಯೋ, ಇಲ್ಲವೆ ಅಂಗವೈಕಲ್ಯ ವಾಗುವಂತೆಯೋ ಮಾಡಿ, ನಾನು ಹೇಗೆ ಮಾಡಬೇಕೆಂದರೆ, ಹಾಗೆ ಮಾಡುತ್ತೇ ನೆಂದು ದೊಡ್ಡಶಾಪ ಇಡುವ ಮಹರ್ಷಿಯಂತೆ ತನಗೆ ತಾನು ಗರ್ವಪಡುತ್ತಿದ್ದಾನೆ. ಹಾಗೆ ಮಾಡಿದಷ್ಟು ಮಾತ್ರಕ್ಕೆ ಆ ಮಾಂತ್ರಿಕನು ಮಹರ್ಷಿಯಾಗುತ್ತಾನಾ? ಎಂದಿಗೂ ಆಗುವುದಿಲ್ಲ, ಆಗಲಾರನು.

ಮಂತ್ರಗಳನ್ನು ಕಲಿತು ಅವುಗಳನ್ನು ಸಿದ್ಧಿ ಹೊಂದಿದವರು ಅವರ ಫಲಿತವನ್ನು ಯೋಗಾಭ್ಯಾಸಪರರಿಗೆ ತೋರಿಸಿದಾಗ, ಅದನ್ನು ನೋಡಿದ ಸ್ವಲ್ಪಜನ ಯೋಗಾಭ್ಯಾಸಕರು ಅಜ್ಞಾನವಶದಲ್ಲಿ ಮಂತ್ರಗಳ ಪ್ರಭಾವ ತಿಳಿದುಕೊಳ್ಳದೆ, ನಾವು ಎಷ್ಟು ದಿನಗಳು ಯೋಗ ಮಾಡಿದರು ಇವರು ಸೃಷ್ಟಿಸಿದ ಮಾದರಿಯಂತೆ ಒಂದು ಚಿಕ್ಕ ಚೇಳನ್ನಾದರು ಸೃಷ್ಟಿಸಲಾರದೆ ಹೋದೆವಲ್ಲ! ಇವನು ನಮಗಿಂತ ದೊಡ್ಡವನು. ನಮ್ಮ ಮಾರ್ಗಕ್ಕಿಂತ ಇವನ ಮಾರ್ಗವೇ ದೊಡ್ಡದೆಂದು ಅವರು ಮಾಂತ್ರಿಕನನ್ನು ಆಶ್ರಯಿಸುತ್ತಿದ್ದಾರೆ. ಜ್ಞಾನದೀಪಕಾಂತಿಯಿಂದ ಯೋಗಕ್ಕೂ ಮಂತ್ರಗಳಿಗಿರುವ ವ್ಯತ್ಯಾಸಗಳು ತಿಳಿದುಕೊಂಡವರು ಹಾಗೆ ಮಾಡುವುದಿಲ್ಲ. ಏಕೆಂದರೆ ಮಂತ್ರಗಳು ವಿವಿಧ ಆಚಾರಗಳಿಂದಲೂ, ಜಂತುಬಲಿಗಳಿಂದಲೂ,

ಶೋಚನೀಯವಾದ ನೈವೇದ್ಯಗಳಿಂದಲೂ ಅನೇಕ ನಿಯಮಗಳಿಂದ ಕೂಡಿಕೊಂಡಿವೆ. ಯೋಗ ಹಾಗೆ ಆಚಾರ ನಿಯಮಗಳಿಲ್ಲದೆ, ಜಂತುಬಲಿಗಳು, ವಿವಿಧ ನೈವೇದ್ಯಗಳು ಇಲ್ಲದೆ, ಮಂತ್ರಯುಕ್ತವಾದುದಲ್ಲದೆ, ಹೊರಗಿನ ವಸ್ತುಗಳಿಗೆ ಯಾವುದಕ್ಕೂ ಸಂಬಂಧವಿಲ್ಲದೆ ಇದೆ. ಮಂತ್ರಗಳಿಂದ ದೇವತೆಗಳು ವಶವಾಗುತ್ತಾರಾಗಲಿ ಮಾಂತ್ರಿಕನ ಮೇಲೆ ದ್ವೇಷಹೊಂದಿರುತ್ತಾರೆ. ಯೋಗದಿಂದ ದೇವತೆಗಳು ವಶವಾಗುವುದಿಲ್ಲ ಆದರೆ ದೇವತೆಗಳು ಸಹ ಯೋಗಿ ಹತ್ತಿರ ಭಕ್ತಿ ಭಾವವನ್ನು ಹೊಂದಿ ವಿನಯ ವಿಧೇಯತೆಗಳಿಂದ ನಡೆದುಕೊಳ್ಳುತ್ತಾರೆ. ಎಂತಹ ಮಂತ್ರ ಪ್ರಯೋಗವಾದರು ಯೋಗಿಯನ್ನು ಏನು ಮಾಡಲಾರದು. ಮಂತ್ರಬಲ ಒಳ್ಳೆಯದು ಅಲ್ಲವೆಂದು ಹೇಳಿದ ಯೋಗಿಗಳ ಮೇಲೆ ಮಾಂತ್ರಿಕರು ದ್ವೇಷಹೊಂದಿ, ಮಂತ್ರಪ್ರಯೋಗ ಮಾಡಿ ಅವರ ಪ್ರಯೋಗಗಳು ಫಲಿಸದೆ ಭಯಪಡುತ್ತಿದ್ದಾರೆ. ಮಾಂತ್ರಿಕರ ಮಂತ್ರಶಕ್ತಿಯನ್ನು ಮೀರಿರುವುದು ಯೋಗಶಕ್ತಿ. ಆದ್ದರಿಂದ ಮಂತ್ರಶಕ್ತಿ ಯೋಗಶಕ್ತಿ ಇರುವ ಯೋಗಿಗಳನ್ನು ಏನು ಮಾಡಲಾರದು. ಮಾಂತ್ರಿಕರ ಪ್ರಯೋಗಗಳು ಯೋಗಿಗಳ ಬಳಿ ನೆರವೇರುವುದಿಲ್ಲ. ಯೋಗಿಗಳು ಸಂಕಲ್ಪಿಸಿದ ಪಕ್ಷದಲ್ಲಿ ಮಾಂತ್ರಿಕರಲ್ಲಿರುವ ಮಂತ್ರಶಕ್ತಿ ಎಲ್ಲವೂ ಪಟಾಪಂಚ ಲಾಗಿಹೋಗುತ್ತದೆ. ನಂತರ ಅವರು ಮಂತ್ರಗಳಲ್ಲಿ ನಿರ್ಭಲರಾಗಿ ಯಾವ ಕೆಲಸವನ್ನು ನೆರವೇರಿಸಲಾರದೆ ಹೋಗುತ್ತಾರೆ. ಮಾಂತ್ರಿಕರಿಗೆ ವಶವಾಗಿರುವ ದೇವತೆಗಳು ಯೋಗಿಗಳನ್ನು ಹಿಂಸಿಸಲಾರರು. ಒಂದುವೇಳೆ ಯೋಗಿಗಳನ್ನು ಬಾಧೆ ಇಡುವುದಕ್ಕೆ ಮಾಂತ್ರಿಕರ ಪ್ರೇರಣೆಯಿಂದ ಆ ದೇವತೆಗಳು ಬಂದ ಪಕ್ಷದಲ್ಲಿ, ಅಗ್ನಿಗುಂಡದ ಹತ್ತಿರಕ್ಕೆ ಬಂದ ಮಿಡತೆಗಳು ಬೂದಿಯಾಗಿ ಹೋದಂತೆ, ಯೋಗಿಗಳ ಹತ್ತಿರವಿರುವ ಜ್ಞಾನಾಗ್ನಿಗೆ ಭಸ್ಮವಾಗಿಹೋಗುತ್ತಾರೆ. ಇಲ್ಲದಿದ್ದರೆ ಹತ್ತಿರಕ್ಕೆ ಬಂದ ಮಾತ್ರಕ್ಕೆ ಜ್ಞಾನಾಗ್ನಿಯ ಬಿಸಿಗೆ ತಡೆಯಲಾರದೆ ಓಡಿಹೋಗುತ್ತಾರೆ. ಪೂರ್ವದಲ್ಲಿ ಮಂತ್ರಯುಕ್ತವಾದ ಅಸ್ತ್ರಗಳು ಸಹ ಯೋಗಿಗಳನ್ನು ಏನು ಮಾಡಲಾರದೆ ಹೋಗಿವೆ. ಎಲ್ಲದಕ್ಕಿಂತ ಹೆಚ್ಚು ಪ್ರಭಾವ ಹೊಂದಿದ ಬ್ರಹ್ಮಾಸ್ತ್ರವನ್ನು ವಶಿಷ್ಠನ ಮೇಲೆ ಪ್ರಯೋಗಿಸಿದಾಗ ಅದು ಯೋಗಿಯಾದ ವಶಿಷ್ಠನನ್ನು ಏನು ಮಾಡಲಾರದೆ ಆತನಲ್ಲಿಯೇ ಲೀನವಾಗಿಹೋಗಿದೆಯಂತೆ. ಪರಸ್ಪರ ಶ್ರೀರಾಮನು

ಆಂಜನೇಯನು ಯಯಾತಿರಾಜನಿಗೋಸ್ಕರ ಯುದ್ಧಕ್ಕೆ ಸಿದ್ಧವಾದಾಗ, ಶ್ರೀರಾಮನು ಪ್ರಯೋಗಿಸಿದ ತಿರುಗಿಲ್ಲದ ಅಸ್ತ್ರ ಆಂಜನೇಯನನ್ನು ಏನು ಮಾಡಲಾರದೆ ಆತನಲ್ಲಿರುವ ಯೋಗಶಕ್ತಿಗೆ ಕಟ್ಟುಬಿದ್ದು ಆತನ ಕೊರಳಲ್ಲಿ ಹೂವಿನಹಾರವಾಗಿ ಬಿದ್ದಿದೆಯಂತೆ. ಒಂದುಸಲ ಬೋಯಿ ವೇಶಧಾರಿಯಾಗಿರುವ ಮಹಾಯೋಗಿಯಾದ ಈಶ್ವರನ ಮೇಲೆ ಅರ್ಜುನನು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರೂ, ಅವು ಈಶ್ವರನನ್ನು ಏನು ಮಾಡಲಾರದೆಹೋಗಿವೆಯಂತೆ. ಎಲ್ಲಾ ಶಕ್ತಿಗಳಿಗು ಮೀರಿರುವುದು ಜ್ಞಾನಶಕ್ತಿ ಆದ್ದರಿಂದ ಅದರ ಮುಂದೆ ಯಾವ ಶಕ್ತಿ ಕೆಲಸಮಾಡುವುದಿಲ್ಲ. ಜ್ಞಾನಶಕ್ತಿಗಿಂತ ಪವಿತ್ರವಾದುದು, ಅದಕ್ಕೆ ಸಾಟಿಯಾದುದು ಯಾವ ಶಕ್ತಿಯು ಪ್ರಪಂಚದಲ್ಲಿ ಇಲ್ಲ. ಆದ್ದರಿಂದಲೇ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಭಗವಂತನು **'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'** 'ಜ್ಞಾನಕ್ಕೆ ಈ ಜಗದಲ್ಲಿ ಸಾಟಿಯಾದುದು ಇಲ್ಲ ಅದಕ್ಕಿಂತ ಪವಿತ್ರವಾದುದು ಇಲ್ಲವೆಂದು' ಹೇಳಿದ್ದಾನೆ. ಆದ್ದರಿಂದ ಮಂತ್ರ, ಯಂತ್ರ, ತಂತ್ರಗಳು ಗಜಕರ್ಣ, ಗೋಕರ್ಣ, ಇಂದ್ರಜಾಲ ಮಹೇಂದ್ರಜಾಲ, ವಿದ್ಯೆಗಳು, ಮತ್ತು ಯಕ್ಷ, ರಾಕ್ಷಸ, ಕಿನ್ನರ, ಕಿಂಪುರುಷ, ಗರುಡ, ಗಂಧರ್ವ, ನಾಗ, ಭೂತ, ಪ್ರೇತ ಪಿಶಾಚಿಗಳೆಲ್ಲವೂ ಜ್ಞಾನಕ್ಕಿಂತ ಹೀನ. ಎಲ್ಲವುದಕ್ಕಿಂತ ಅಗ್ರಸ್ಥಾನ ವಹಿಸಿರುವುದು ಪರಮಾತ್ಮಜ್ಞಾನ. ಆತ್ಮ ಜ್ಞಾನವನ್ನು ಹೊಂದಿದವನು ಲೋಕದಲ್ಲಿ ಯಾವ ಶಕ್ತಿಗೂ ಭಯಪಡುವುದಿಲ್ಲ. ಇತರರನ್ನು ಭಯ ಇಡುವುದಿಲ್ಲ. ಭಯ, ಮನೋವ್ಯಾಕುಲವಿಲ್ಲದೆ ನಿಶ್ಚಲನಾಗಿರುತ್ತಾನೆ. ಅಂತಹವನು ಪರಮಾತ್ಮನಿಗೆ ಬಹಳ ಪ್ರೀತಿಪಾತ್ರನಾಗಿರುತ್ತಾನೆ. ಆದ್ದರಿಂದ ಗೀತಾಶಾಸ್ತ್ರದಲ್ಲಿ ಭಕ್ತಿ ಯೋಗದಲ್ಲಿ ಭಗವಂತನು **"ಯಸ್ಮಾನ್ನೋ ದ್ವಿಜತೇ ಲೋಕೋ ಲೋಕಾನ್ನೋ ದ್ವಿಜತೇ ಚಯಃ ಹರ್ಷಾಮರ್ಷ ಭಯೋದ್ವೇಗೈರ್ಮುಕ್ತೋ ಯಸ್ಸಚಮೇ ಪ್ರಿಯಃ" 'ಜಗತ್ತಿನಿಂದ ಎಂಥವನಿಗೆ ಭಯವಿಲ್ಲವೋ, ಜಗತ್ತಿಗೆ ಯಾವನಿಂದ ಭಯ ಉಂಟಾಗುವು ದಿಲ್ಲವೋ ಅವನು ಸಂತೋಷವನ್ನು, ಕೋಪವನ್ನು ಮನೋವ್ಯಾಕುಲವನ್ನು, ಭಯವನ್ನು ಹೊಂದುವುದಿಲ್ಲ. ಆತನೇ ನನಗೆ ಪ್ರಿಯನು'** ಎಂದು ಹೇಳಿದ್ದಾನೆ.

ಆದ್ದರಿಂದ ಜ್ಞಾನಿ ಆದವನು ಮಂತ್ರತಂತ್ರಗಳನ್ನು ಆಶ್ರಯಿಸದೆ ಯೋಗಶಕ್ತಿಯನ್ನೇ ಸಂಪಾದಿಸಿಕೊಳ್ಳುತ್ತಾನೆ.

ಈ ದಿನ ದೇಶದಲ್ಲಿ ಕೆಲವರು ಮಂತ್ರಗಳನ್ನಾಶ್ರಯಿಸಿ, ಕ್ಷುದ್ರದೇವತೆ ಗಳನ್ನು ಆರಾಧಿಸುತ್ತಾ, ನಿಜವಾದ ಭಕ್ತರೆಂದುಕೊಂಡು, ನಮಗಿಂತ ಜ್ಞಾನಿಗಳಿಲ್ಲವೆಂದು ಭ್ರಮೆಪಡುತ್ತಿದ್ದಾರೆ. ಮಂತ್ರಗಳಿಗು ಯೋಗಕ್ಕು ಇರುವ ವ್ಯತ್ಯಾಸವೇನೋ ತಿಳಿದುಕೊಂಡರೆ, ಯಾವುದು ಒಳ್ಳೆಯದೋ ನಿಜವಾಗಲು ತಿಳಿಯುತ್ತದೆ. ಕೆಲವರು ಮಾಂತ್ರಿಕರು ಮಂತ್ರಪ್ರಭಾವದಿಂದ ಯೋಗಿಗಳ ಮೇಲೆ ದ್ವೇಷಹೊಂದಿ ಅವರನ್ನೇ ಹೇಳನಮಾಡುತ್ತಿದ್ದಾರೆ. ಯೋಗಿಗಳು ಸಾಮಾನ್ಯವಾಗಿ ಯಾರು ಏನಂದುಕೊಂಡರು ಸುಮ್ಮನಿರುತ್ತಾರೆ. ಒಂದುವೇಳೆ ಯೋಗಿಗಳಿಗೆ ಕೋಪ ಬಂದಿದೆಯೋ, ಅವರು ಜ್ಞಾನನೇತ್ರವನ್ನು ಕೆಂಪಗೆ ಮಾಡಿದರೆ ಮಾಂತ್ರಿಕರ ಮಂತ್ರಶಕ್ತಿ ಭಸ್ಮವಾಗಿಹೋಗುತ್ತದೆ. ನಂತರ ನಷ್ಟ ಮತ್ತು ಕಷ್ಟ ಮಾಂತ್ರಿಕರಿಗೆ ಇರುತ್ತದೆ. ಪೂರ್ವದಲ್ಲಿ ಯೋಗಿಗಳ ಮೇಲೆ ಮಂತ್ರಗಳಿಂದ ದಂಡಯಾತ್ರೆ ಮಾಡಿದವರು, ಮಂತ್ರಭ್ರಷ್ಟರಾಗಿ ಮರುಜನ್ಮದಲ್ಲಿ ಎಷ್ಟೋ ಕಷ್ಟಗಳನ್ನನು ಭವಿಸಿದ್ದಾರೆ. ಆದ್ದರಿಂದ ಮಾಂತ್ರಿಕರು ಯೋಗಿಗಳನ್ನು ಹೇಳನ ಮಾಡದೆ ಇರಬೇಕು. ಮಾಂತ್ರಿಕರು ಸಹ ಯಾವಾಗಲೋ ಒಂದುಸಲ ತಮಗೆ ನಷ್ಟತರುವ ಮಂತ್ರಗಳನ್ನು ಬಿಟ್ಟು, ಪರಮಾತ್ಮನನ್ನಾಶ್ರಯಿಸಿ, ದೈವಸಾಧನೆ ಮಾಡಿದರು ಎಷ್ಟೋ ಚೆನ್ನಾಗಿರುತ್ತದೆ ಎಂದು ನಾನು ತಿಳಿಸುತ್ತಿದ್ದೇನೆ. ಮಂತ್ರಸಾಧನೆಗಿಂತ ಯೋಗಸಾಧನೆ ಪವಿತ್ರವಾದುದು. ಮಂತ್ರಸಾಧನೆ ಮೂಲಕ ಪ್ರಪಂಚ ಕಾರ್ಯಗಳನ್ನು, ಪ್ರಪಂಚ ಗೌರವಗಳನ್ನು ಪಡೆಯಬಹುದು. ಆದರೆ ಮೋಕ್ಷವನ್ನು ಮಾತ್ರ ಸಂಪಾದಿಸಿಕೊಳ್ಳಲಾರರು. ಆದ್ದರಿಂದ ಮಂತ್ರಗಳ ವಿಷಯ ತಿಳಿದವರು ಮಂತ್ರಗಳ ಸುದ್ದಿಗೆ ಹೋಗದೆ, ಮಂತ್ರ ಕಲಿಸುವ ಗುರುಗಳನಾಶ್ರಯಿಸದೆ, ಯೋಗಮಾರ್ಗವನ್ನು ಅನ್ವೇಷಿಸುತ್ತಾ, ಪರಮಾತ್ಮ ಬೋಧನೆ ಹೇಳುವ ಗುರುಗಳನ್ನಾಶ್ರಯಿಸಿ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಕೋರುತ್ತಿದ್ದೇವೆ.

# ಗ್ರಹಗಳು – ವಿಗ್ರಹಗಳು

ಹುಟ್ಟಿದ ಪ್ರತಿಜೀವಿ ತಪ್ಪದೆ ಮರಣಿಸಬೇಕಾಗಿದ್ದೇ. ಮರಣಿಸುವ ಸ್ಥಿತಿಯನ್ನು ಮೃತ್ಯು ಅನ್ನುತ್ತಿದ್ದೇವೆ. ಮೃತ್ಯು ಕರ್ಮವನ್ನು ಅನುಸರಿಸಿ ಎರಡು ವಿಧಗಳಾಗಿ ಇದೆ. ಅವು 1) ಕಾಲಮೃತ್ಯು 2) ಅಕಾಲಮೃತ್ಯು. **ಕಾಲಮೃತ್ಯು ಅಂದರೆ ಜೀವಿಗೆ ಇರಬೇಕಾದ ಆಯುಸ್ಸು ಎಲ್ಲವೂ ಮುಗಿದುಹೋದ ನಂತರ ಬರುವುದು. ಅಕಾಲಮೃತ್ಯು ಅಂದರೆ ಜೀವಿಗೆ ಇರಬೇಕಾದ ಆಯಸ್ಸು ಎಲ್ಲವೂ ಮುಗಿದುಹೋಗುವ ಮೊದಲೇ ಸಂಭವಿಸುವುದು.** ಕಾಲಮೃತ್ಯುವಿನಲ್ಲಿ ಜೀವಿಯು ಸ್ಥೂಲ, ಸೂಕ್ಷ್ಮ ಶರೀರಗಳನ್ನು ಬಿಟ್ಟುಹೋಗುತ್ತಾನೆ. ಅಕಾಲಮೃತ್ಯುವಿನಲ್ಲಿ ಜೀವಿಯು ಸ್ಥೂಲಶರೀರ ಮಾತ್ರ ಬಿಟ್ಟು, ಸೂಕ್ಷ್ಮ ಶರೀರವನ್ನು ಧರಿಸಿರುತ್ತಾನೆ. ಅಕಾಲ ಮೃತ್ಯುವಿನಿಂದ ಮರಣಿಸಿದವರು ಕಾಲಮೃತ್ಯು ಸಂಭವಿಸುವವರೆಗೂ ಇದ್ದು, ಕಾಲಮೃತ್ಯು ಸಂಭವಿಸಿದ ತಕ್ಷಣ ಅಲ್ಲಿಯವರೆಗೂ ಇರುವ ಸೂಕ್ಷ್ಮಶರೀರವನ್ನು ಸಹ ಬಿಟ್ಟು ಬೇರೆ ಶರೀರವನ್ನು ಧರಿಸುತ್ತಿದ್ದಾರೆ. ಆದ್ದರಿಂದಲೇ ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ **'ದೇಹಿ ದೇಹವನ್ನು ಧರಿಸಿ ಅದರಲ್ಲಿ ಕ್ರಮವಾಗಿ ಬಾಲ್ಯ, ಯೌವನ, ಕೌಮಾರ್ಯ, ವೃದ್ಧಾಪ್ಯ ಹಾಗೇ ಮೃತ್ಯುವನ್ನು ಹೊಂದುತ್ತಿದ್ದಾನೆ. ಮೃತ್ಯುವನ್ನು ಹೊಂದಿದ ತಕ್ಷಣ ಮತ್ತೆ ಹೊಸ ಶರೀರವನ್ನು ಧರಿಸುತ್ತಿದ್ದಾನೆ. ಎಂದು ಪರಮಾತ್ಮ ತಿಳಿಸಿದ್ದಾನೆ.'**

ಬಹಳಜನರಿಗೆ ಅಕಾಲಮೃತ್ಯು ಏಕೆ ಇದೆ? ಅಕಾಲ ಮೃತ್ಯು ಹೊಂದಿದ ನಂತರ ಜೀವಿಯ ರೂಪ ಹೇಗಿರುತ್ತದೆ? ಅಕಾಲ ಮೃತ್ಯು ಹೊಂದಿದ ನಂತರ ಕಾಲಮೃತ್ಯು ಸಂಭವಿಸುವವರೆಗೂ ಜೀವಿಯು ಏನು ಮಾಡುತ್ತಿರುತ್ತಾನೆ? ಅನ್ನುವ ಎಷ್ಟೋ ಅನುಮಾನಗಳು ಹೊರಬೀಳುತ್ತವೆ. ಅವರು ಕೇಳುವ ಪ್ರಶ್ನೆಗಳಿಗೆ, ಕೇಳಲಾರದ ಪ್ರಶ್ನೆಗಳಿಗೆ ನನ್ನ ಸಮಾಧಾನ ಏನೆಂದರೆ! ಜೀವಿಯು ಪಾಪಪುಣ್ಯಗಳನ್ನು ಸಂಪಾದಿಸಿಕೊಳ್ಳುತ್ತಿದ್ದಾನಲ್ಲ! ಅವುಗಳನ್ನೇ ತಾನೆ ನಾವು ಕರ್ಮ ಎನ್ನುತ್ತಿರುವುದು. ಕರ್ಮ ಎರಡು ವಿಧಗಳಾಗಿ ಇದೆ. ಒಂದು ಮಾನಸಿಕ ಕರ್ಮ, ಎರಡನೆಯದು ಶಾರೀರಕ ಕರ್ಮ. ಮಾನಸಿಕ ಕರ್ಮ ಎಂದರೆ ಜೀವಿಯು ಶರೀರದಿಂದ ಅಲ್ಲದೆ ಮನಸ್ಸಿನಿಂದ ಸಂಪಾದಿಸಿಕೊಂಡಿರುವುದು.

ಮತ್ತು ಮನಸ್ಸಿನಿಂದಲೇ ಅನುಭವಿಸುವುದು. ಶಾರೀರಕ ಕರ್ಮ ಎಂದರೆ ಮನಸ್ಸಿನಿಂದಲೇ ಅಲ್ಲದೆ ಜೀವಿಯು ಶರೀರದಿಂದಲೂ ಸಹ ಮಾಡಿಕೊಂಡಿರುವುದು, ಮತ್ತು ಶರೀರದಿಂದಲೇ ಅನುಭವಿಸುವುದು. ಇದನ್ನೇ ಇನ್ನೂ ವಿವರವಾಗಿ ತಿಳಿದುಕೊಂಡರೆ ಮಾನಸಿಕ ಕರ್ಮ ಎಂದರೆ ಜೀವಿಯು ಸೂಕ್ಷ್ಮಶರೀರದ ಮೂಲಕ ಅನುಭವಿಸುವುದೆಂದು, ಶಾರೀರಿಕ ಕರ್ಮ ಎಂದರೆ ಜೀವಿಯು ಸ್ಥೂಲ ಶರೀರದ ಮುಖಾಂತರ ಅನುಭವಿಸುತ್ತಿರುವುದೆಂದು ತಿಳಿಯುತ್ತಿದೆ. ಈ ಎರಡು ಕರ್ಮಗಳು ಸುಮಾರು ಸಮಾನವಾಗಿರುವವನು ಎರಡನ್ನು ಅನುಭವಿಸುತ್ತಾ ಹೋಗಿ ಪ್ರಾರಬ್ಧದಲ್ಲಿ ಅವು ಮುಗಿದುಹೋದ ತಕ್ಷಣ ಕಾಲಮೃತ್ಯುವನ್ನು ಹೊಂದುತ್ತಿದ್ದಾನೆ. ಹಾಗಲ್ಲದೆ ಶಾರೀರಿಕ ಕರ್ಮ ಕಡಿಮೆ ಇದ್ದು ಮಾನಸಿಕಕರ್ಮ ಹೆಚ್ಚಾಗಿದ್ದರು, ಪ್ರಾರಬ್ಧದಲ್ಲಿ ಶಾರೀರಕಕರ್ಮ ಮೊದಲೇ ಮುಗಿದುಹೋಗಿ ಮಾನಸಿಕ ಕರ್ಮ ಒಂದು ಮಾತ್ರ ಉಳಿಯುತ್ತದೆ. ಶಾರೀರಕಕರ್ಮ ಯಾವಾಗ ಮುಗಿದುಹೋಗುತ್ತಿದೆಯೋ ಇನ್ನು ಸ್ಥೂಲ ದೇಹದಿಂದ ಕೆಲಸವಿಲ್ಲ ಆದ್ದರಿಂದ ಅಕಾಲಮೃತ್ಯು ಸಂಭವಿಸುತ್ತಿದೆ. ಅಕಾಲ ಮೃತ್ಯುವಿನಲ್ಲಿ ಉಳಿಯುವುದು ಸೂಕ್ಷ್ಮಶರೀರ. ಅದರಿಂದಲೇ ಮಾನಸಿಕಕರ್ಮ ಎಲ್ಲವೂ ಅನುಭವಿಸಲ್ಪಡುತ್ತಿದೆ. ಪಾಪಪುಣ್ಯಗಳು (ಕರ್ಮ) ಶಾರೀರಕ, ಮಾನಸಿಕ ಎಂದು ಎರಡು ವಿಧಗಳಾಗಿ ಇದೆ. ಆದ್ದರಿಂದ ಕಾಲಮೃತ್ಯು, ಅಕಾಲಮೃತ್ಯು ಎಂದು ಎರಡು ವಿಧಗಳ ಮೃತ್ಯುಗಳನ್ನು ಪರಮಾತ್ಮ ಪ್ರಪಂಚದಲ್ಲಿ ಇಟ್ಟಿದ್ದಾನೆ.

ಜೀವಿಯು ಸ್ಥೂಲ ಶರೀರದಲ್ಲಿ ಇರುವಾಗ ಬದುಕಿದ್ದಾನೆ ಅನ್ನುತ್ತಾರೆ. ಸ್ಥೂಲ ಶರೀರ ಬಿಟ್ಟುಹೋದ ತಕ್ಷಣ ಮರಣಿಸಿದ್ದಾನೆಂದು ಅನ್ನುತ್ತಾರೆ. ಆದರೆ ಆ ಮರಣ ಕಾಲಮರಣವೇ? ಅಕಾಲಮರಣವೇ? ಎಂದು ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಹಾಗೆ ನಾವು ಎಷ್ಟೋಜನ ಮರಣಿಸುವುದು ನೋಡುತ್ತಿದ್ದೇವೆ. ಜೀವಿಯು ಕಾಲಮರಣ ಹೊಂದಿದ್ದಾನಾ, ಅಕಾಲ ಮರಣ ಹೊಂದಿದ್ದಾನಾ ಎಂದು ಗುರ್ತಿಸಲಾರದೆ ಹೋಗುತ್ತಿದ್ದೇವೆ. ಜೀವಿಯು ಅಕಾಲಮೃತ್ಯುವಿನಿಂದ ಮರಣಿಸಿದ ನಂತರ, ಸೂಕ್ಷ್ಮಶರೀರ ಮಾತ್ರ ಉಳಿಯುತ್ತಿದೆಯಲ್ಲ! ಅದರ

ರೂಪ ಹೇಗಿರುತ್ತದೆ ಎಂದರೆ ಮೊದಲು ಯಾವ ಸ್ಥೂಲ ಶರೀರದಿಂದ ಕೂಡಿಕೊಂಡು ಸೂಕ್ಷ್ಮಶರೀರ ಇರುತ್ತದೋ ಅದರ ರೂಪವನ್ನೇ ಸೂಕ್ಷ್ಮಶರೀರ ಸಹ ಹೊಂದಿರುತ್ತದೆ. ಆದರೆ ಸೂಕ್ಷ್ಮಶರೀರಕ್ಕೆ ಮತ್ತೊಂದು ಹೆಸರು ಇದೆ. ಅದನ್ನೇ **'ಗ್ರಹ'** ಎಂದು ಅನ್ನುತ್ತಾರೆ. ಗ್ರಹ ಅನ್ನುವುದನ್ನು ಸ್ವಲ್ಪಜನ ದೆವ್ವ ಎಂದು ಸಹ ಅನ್ನುತ್ತಾರೆ. ಇನ್ನು ಸ್ವಲ್ಪಜನ ಭೂತ ಎಂದುಸಹ ಅನ್ನುತ್ತಾರೆ. ದೆವ್ವ, ಭೂತ, ಗ್ರಹ ಎಂದು ಸೂಕ್ಷ್ಮಶರೀರವನ್ನೇ ಅನ್ನುತ್ತಾರೆ. ಜೀವಿಯು ಒಂದುಸಲ ಅಕಾಲಮೃತ್ಯು ಮೂಲಕ ತನಗಿರುವ ಸ್ಥೂಲಶರೀರವನ್ನು ಬಿಟ್ಟ ನಂತರ ಅದರಲ್ಲಿ ಎಂದಿಗೂ ಪ್ರವೇಶಿಸುವುದಿಲ್ಲ. ಹಾಗೆ ಮೃತಿಹೊಂದಿದ ಯಾವ ಸ್ಥೂಲ ದೇಹದಲ್ಲಿಯು ಪ್ರವೇಶಿಸುವುದಿಲ್ಲ. ಆದರೆ ಬದುಕಿರುವ ಯಾವ ಜೀವಿ ಶರೀರದಲ್ಲಿಯಾದರೂ ಪ್ರವೇಶಿಸುತ್ತಾನೆ. ಆದ್ದರಿಂದಲೇ ಸತ್ತವರು ಬಂದು ಬದುಕಿರುವವರಲ್ಲಿ ಪ್ರವೇಶಿಸಿ ಮಾತನಾಡುವುದು ಪ್ರತ್ಯಕ್ಷವಾಗಿ ಅಲ್ಲಲ್ಲಿ ನೋಡುತ್ತಲೇ ಇದ್ದೇವೆ. ಇಲ್ಲಿ ಸ್ವಲ್ಪಜನರಿಗೆ "ಬದುಕಿರುವವರ ಶರೀರದಲ್ಲಿ ಸೂಕ್ಷ್ಮಶರೀರ ಇರುತ್ತದೆ ತಾನೆ! ಮತ್ತೊಂದು ಸೂಕ್ಷ್ಮಶರೀರ ಹೇಗೆ ಪ್ರವೇಶಿಸುತ್ತದೆ? ಮೊದಲಿನಿಂದ ಆ ಶರೀರದಲ್ಲಿರುವ ಸೂಕ್ಷ್ಮಶರೀರ ಆ ಸಮಯದಲ್ಲಿ ಎಲ್ಲಿ ಹೋಗುತ್ತದೆ?" ಅನ್ನುವ ಅನುಮಾನ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಸೂಕ್ಷ್ಮಶರೀರ ಬದುಕಿರುವ ಶರೀರದೊಳಗೆ ಅವಲೀಲವಾಗಿ ಪ್ರವೇಶಿಸುತ್ತದೆ. ಹೇಗೆಂದರೆ ಸೂರ್ಯಕಿರಣ ಗಾಜಿನ ಕನ್ನಡಿಯಲ್ಲಿ ತೂರಿದಂತೆ ಸೂಕ್ಷ್ಮಶರೀರವೂ ಸಹ ಸ್ಥೂಲದೇಹದಲ್ಲಿ ತೂರುತ್ತದೆ. ಆದರೆ ಜೀವ ಶರೀರದಲ್ಲಿ ಸೂಕ್ಷ್ಮಶರೀರಯಿದೆಯಲ್ಲ! ಅಂದರು ಅದು ಮತ್ತೊಂದು ಸೂಕ್ಷ್ಮಶರೀರವು ತನ್ನ ಸ್ಥೂಲ ಶರೀರದೊಳಗೆ ಬಂದಾಗ ನಿದ್ರಾವಸ್ಥೆಯೊಳಗೆ ಹೋಗುತ್ತದೆ. ಆದ್ದರಿಂದ ಬೇರೆ ಗ್ರಹ (ಸೂಕ್ಷ್ಮಶರೀರ) ತನ್ನಲ್ಲಿ ಪ್ರವೇಶಿಸಿ ಏನು ಮಾಡಿರುವುದು ಜೀವಿಗೆ ತಿಳಿಯದು. ಕುದುರೆಯನ್ನೇರಿ ಸವಾರಿ ತನ್ನ ಇಷ್ಟಪ್ರಕಾರ ಕುದುರೆಯನ್ನು ನಡೆಸಿದಂತೆ ಸ್ಥೂಲದೇಹದೊಳಗೆ ಯಾವ ಸೂಕ್ಷ್ಮಶರೀರ ಸೇರಿದರು ಆ ಸೂಕ್ಷ್ಮಶರೀರದ ಪ್ರಕಾರವೇ ಸ್ಥೂಲ ನಡೆದುಕೊಳ್ಳುತ್ತದೆ. ಯಾವ ವಿಧವಾಗಿ ಅಂದರೆ, ವಿಳ್ಳೆದೆಲೆ ಜಗಿಯುವುದಕ್ಕೆ ಅಭ್ಯಾಸ ಇಲ್ಲದವರಲ್ಲಿ ಬೇರೆ ಗ್ರಹ

(ಸೂಕ್ಷ್ಮಶರೀರ) ಪ್ರವೇಶಿಸಿದರು ಆ ಗ್ರಹಕ್ಕೆ ತಾಂಬೂಲದ ಅಭ್ಯಾಸ ಇದ್ದರೆ, ಆ ಸಮಯದಲ್ಲಿ ತಾಂಬೂಲ ಹಾಕಿಕೊಳ್ಳುತ್ತದೆ. ಮತ್ತು ತಮಿಳು ಭಾಷೆಬಾರದ ಒಬ್ಬನಲ್ಲಿ ತಮಿಳುಭಾಷೆ ಮಾತನಾಡುವ ಗ್ರಹ ಪ್ರವೇಶಿಸಿದರೆ ಆ ಸಮಯದಲ್ಲಿ ತಮಿಳುಭಾಷೆಯನ್ನೇ ಮಾತನಾಡುತ್ತದೆ. ಹಾಗೇ ಹಾಡುಗಳು ಬಾರದವನಿಗೆ ಹಾಡುಗಳು ಹಾಡುವ ಗ್ರಹ ಹಿಡಿದರು ಆ ಸಮಯದಲ್ಲಿ ಹಾಡುಗಳು ಹಾಡುತ್ತಿದ್ದಾನೆ. ಈ ವಿಧವಾಗಿ ಸೂಕ್ಷ್ಮಶರೀರ ಯಾವ ಅಭ್ಯಾಸಗಳು, ಯಾವ ಗುಣಗಳು ಇವೆಯೋ, ಅದು ಪ್ರವೇಶಿಸಿದ ಸ್ಥೂಲದೇಹದಲ್ಲಿ ಸಹ ಅವುಗಳೇ ಕಾಣಿಸುತ್ತಿರುತ್ತವೆ.

ಪ್ರಪಂಚದಲ್ಲಿ ಎಷ್ಟೋಜನ ಅಕಾಲಮೃತ್ಯು ಮೂಲಕ ಗ್ರಹಗಳಾಗಿ ಬದಲಾಗಿದ್ದಾರೆ. ಬದಲಾದವರೆಲ್ಲ ಇತರರಲ್ಲಿ ಪ್ರವೇಶಿಸುವುದಿಲ್ಲ. ಸ್ವಲ್ಪ ಜನ ಮಾತ್ರ ಇತರರಲ್ಲಿ ಪ್ರವೇಶಿಸುತ್ತಿರುತ್ತಾರೆ. ಆದರೆ ಇನ್ನೊಂದು ರಹಸ್ಯ ಏನೆಂದರೆ ಎಷ್ಟೋ ಜಾತಿಗಳ ಜೀವರಾಶಿಗಳ ಸ್ಥೂಲಶರೀರಗಳು ಬೇರೆಯಾದರೂ, ಜೀವಿಗಳು ಮಾತ್ರ ಒಂದೇ ಅಲ್ಲವೆ! ಆದ್ದರಿಂದ ಗ್ರಹಗಳು (ಸೂಕ್ಷ್ಮಶರೀರಗಳು) ತಮ್ಮ ಜಾತಿ ಶರೀರಗಳಲ್ಲಿಯೇ ಅಲ್ಲದೆ ಇತರ ಜಾತಿ ಶರೀರಗಳಲ್ಲಿಯೂ ಸಹ ಪ್ರವೇಶಿಸುತ್ತಿವೆ. ಮಾನವ ಶರೀರದೊಳಗೆ ಮಾನವ ಗ್ರಹಗಳು ಪ್ರವೇಶಿಸುತ್ತಿವೆ. ಮತ್ತು ಹಾವುಗಳ ಗ್ರಹಗಳು ಮತ್ತು ವಿವಿಧ ಜಾತಿ ಜೀವಿಗಳ ಗ್ರಹಗಳು ಸಹ ಪ್ರವೇಶಿಸುವುದು ಸಂಭವಿಸುತ್ತಿದೆ. ಮನುಷ್ಯನಲ್ಲಿ ಮನುಷ್ಯ ಗ್ರಹ ಪ್ರವೇಶಿಸಿದರು, ಮನುಷ್ಯ ಪ್ರವರ್ತಿಸಿದಂತೆ ಪ್ರವರ್ತಿಸುತ್ತದೆ. ಮಾನವನು ಮಾತನಾಡಿದಂತೆ ಮಾತನಾಡುತ್ತದೆ. ಮನುಷ್ಯನಲ್ಲಿ ಹಾವಿನಜಾತಿ ಗ್ರಹ ಪ್ರವೇಶಿಸಿದಾಗ ಹಾವು ಸರಿದಾಡಿದಂತೆ ಸರಿದಾಡುತ್ತದೆ, ಹಾವು ಬುಸಗುಟ್ಟಿದಂತೆ ಬುಸಗುಟ್ಟುತ್ತದೆ, ಯಾವ ಭಾಷೆ ಮಾತನಾಡಲಾರದೆ ಹೋಗುತ್ತದೆ. ಇದರಿಂದ ನೋಡಿದರೂ, ಒಂದು ಮಾನವ ಸೂಕ್ಷ್ಮಶರೀರಗಳೇ ಅಲ್ಲದೆ ಎಷ್ಟೋ ವಿಧಗಳ ಜೀವರಾಶಿ ಗಳೊಂದರ ಸೂಕ್ಷ್ಮ ಶರೀರಗಳು ಪ್ರಪಂಚದಲ್ಲಿ ಇರುವಂತೆ ತಿಳಿಯುತ್ತಿದೆ. ಸೂಕ್ಷ್ಮ ದೇಹಗಳು ಧರಿಸಿರುವ ಜೀವರಾಶಿಗಳೆಲ್ಲವನ್ನು ಜ್ಞಾನದೃಷ್ಟಿಯಿಂದ

ನೋಡಿದರೆ ಎರಡನೆ ಪ್ರಪಂಚವಾ ಎನ್ನುವಂತೆ ತಿಳಿಯುತ್ತಿದೆ. ಮಾನವರಿಗೆ ಇದರ ವಿಷಯ ತಿಳಿದರೂ, ತಿಳಿಯದೆ ಹೋದರು ಸ್ಥೂಲಕಣ್ಣಿಗೆ ಕಾಣಿಸದ ಪ್ರಪಂಚವು ಇದ್ದೇ ಇದೆ. ಅದರಲ್ಲಿ ಸಹ ಇಲ್ಲಿ ಸರ್ವ ಜೀವರಾಶಿಗಳು, ಮಾನವರು ಪಾಪಪುಣ್ಯಗಳ ಫಲಿತಗಳಾದ ಸುಖದುಃಖಗಳು ಅನುಭವಿಸಿದಂತೆ ಅನುಭವಿಸುತ್ತಿದ್ದಾರೆ. ಈ ಪ್ರಪಂಚದಲ್ಲಿ ನಾವೆಲ್ಲರು ಕಷ್ಟಪಟ್ಟಂತೆ ಗ್ರಹಗಳು ಸಹ ಕಷ್ಟಪಡುತ್ತಿವೆ. ನಾವೆಲ್ಲರೂ ಒಬ್ಬರಿಗೊಬ್ಬರು ಪರಸ್ಪರ ಸಂಬಂಧ ಹೊಂದಿರುವಂತೆ ಅವುಗಳು (ಗ್ರಹಗಳು) ಪರಸ್ಪರ ಸಂಬಂಧ ಹೊಂದಿವೆ. ನಾವು ಒಬ್ಬರಿಗೊಬ್ಬರು ಮಾತನಾಡಿಕೊಂಡಂತೆ ಅವುಗಳು (ಗ್ರಹಗಳು) ಒಬ್ಬರಿಗೊಬ್ಬರಿಗೆ ಮಾತನಾಡಿಕೊಳ್ಳುತ್ತಿವೆ. ಯಾವ ಜಾತಿಗೆ ಯಾವ ಪ್ರವರ್ತನೆ ಇರುತ್ತದೋ, ಆ ಜಾತಿಗೆ ಆ ಪ್ರವರ್ತನೆಯೇ ಇರುತ್ತದೆ. ಸೂಕ್ಷ್ಮಶರೀರದಲ್ಲಿ ಬುದ್ಧಿ, ಮನಸ್ಸು, ಅಹಂಕಾರ ಇವೆ. ಆದ್ದರಿಂದ ಮಾನವರಿಗೆ ಇರುವ ಗುಣಗಳೇ ಮಾನವಗ್ರಹಗಳಿಗೂ ಸಹ ಇರುತ್ತವೆ. ಸೂಕ್ಷ್ಮಶರೀರಗಳ ಮಯವಾದ ಎರಡನೇ ಪ್ರಪಂಚ ನಮ್ಮ ಕಣ್ಣುಗಳಿಗೆ ಕಾಣಿಸುವುದಿಲ್ಲ. ಸೂಕ್ಷ್ಮಶರೀರಗಳು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ ಆದರೆ ಸೂಕ್ಷ್ಮಶರೀರಗಳ ನೋಟಕ್ಕೆ ಸೂಕ್ಷ್ಮಶರೀರಗಳೇ ಅಲ್ಲದೆ ಸ್ಥೂಲಶರೀರಗಳು ಎಲ್ಲವೂ ಕಾಣಿಸುತ್ತಾ ಇರುತ್ತವೆ. ಅಂದರೆ ಅವುಗಳನ್ನು ನಾವು ನೋಡದಿದ್ದರು ನಮ್ಮನ್ನು ಗ್ರಹಗಳು ನೋಡುತ್ತಿವೆ.

ಸ್ವಲ್ಪ ಮಂದಿ ನಾವು ಗ್ರಹಗಳನ್ನು ನೋಡಿದ್ದೇವೆ ಎಂದು ವಾದಿಸುತ್ತಿದ್ದಾರೆ. ಅದಕ್ಕೆ ನನ್ನ ಸಮಾಧಾನ ಏನೆಂದರೆ! ಹಗಲಿನಲ್ಲಿ ಗ್ರಹಗಳು ಸಾಧಾರಣವಾಗಿ ಯಾರಿಗೂ ಕಾಣಿಸುವುದಿಲ್ಲ ರಾತ್ರಿಸಮಯ ಕಾಣಿಸುವುದಕ್ಕೆ ಅವಕಾಶ ಇದೆ. ಅದು ಹೇಗೆಂದರೆ ರಾತ್ರಿಸಮಯ ಸಹ ಜಾಗ್ರತಾವಸ್ಥೆ ಚೆನ್ನಾಗಿರುವವರಿಗೆ ಎಷ್ಟು ಮಾತ್ರ ಕಾಣಿಸುವುದಿಲ್ಲ. ಜಾಗ್ರತಾವಸ್ಥೆ ಚೆನ್ನಾಗಿರದೆ ಜಾಗ್ರತೆಯಲ್ಲಿಯೇ ನಿದ್ರಾವಸ್ಥೆ ಹೊಂದಿದವರಿಗೆ, ಅಂದರೆ ದಾರಿಯಲ್ಲಿ ನಡೆಯುತ್ತಿರುವಾಗಾಗಲಿ ನಿದ್ರೆಮತ್ತಿನಲ್ಲಿ ಇರುವವರಿಗೆ ಸ್ಥೂಲಶರೀರ ಪೂರ್ತಿಯಾಗಿ ಜಾಗ್ರತೆಯಲ್ಲಿ ಇರುವುದಿಲ್ಲ. ಆದ್ದರಿಂದ ಅವರ ಸೂಕ್ಷ್ಮಶರೀರದ ನೋಟಕ್ಕೆ ಗ್ರಹಗಳು

ಕಾಣಿಸಬಹುದು. ಅದೂ ಪೂರ್ತಿರೂಪ ಕಾಣಿಸುವುದಿಲ್ಲ. ಇಂತಹ ಜಾತಿ ಎಂದು ಮಾತ್ರ ತಿಳಿಯುತ್ತದೆ. ಆದ್ದರಿಂದಲೇ ನಿದ್ರೆ ಹೆಚ್ಚಾಗಿರುವ ಮನುಷ್ಯರು ರಾತ್ರಿಸಮಯ ಹೊರಗೆ ಸಂಚಾರ ಮಾಡಿದಾಗ ಅವರಿಗೆ ಗ್ರಹಗಳು ಕಾಣಿಸುತ್ತಿವೆ. ಅವು ಮಾನವ ಗ್ರಹಗಳೆ ಅಲ್ಲದೆ ಇತರ ಜಾತಿಗ್ರಹಗಳು ಸಹ ಕಾಣಿಸುತ್ತವೆ. ಆದ್ದರಿಂದ ಕೆಲವರು ನನಗೆ ದೆವ್ವ ನಾಯಿಯಂತೆ ಕಾಣಿಸಿದೆ ಎಂದು, ನನಗೆ ಎಮ್ಮೆಕೋಣದಂತೆ ಕಾಣಿಸಿದೆ, ನನಗೆ ಟಗರಿನಂತೆ ಕಾಣಿಸಿದೆ ಎಂದು ವಿಧ ವಿಧಗಳಾಗಿ ಹೇಳುತ್ತಿರುತ್ತಾರೆ. ಹೇಗೆ ಕಾಣಿಸಿದರೂ ಸ್ಥೂಲದೃಷ್ಟಿಗೆ ಯಾವ ಕಾರಣಕ್ಕು ಇರುವುದಿಲ್ಲ. ಸೂಕ್ಷ್ಮಶರೀರ ನೋಟಕ್ಕೆ ಸ್ವಲ್ಪ ಕಾಣಿಸಿರಬಹುದು.

ಜೀವಿಯು ಅಕಾಲಮೃತ್ಯುವನ್ನು ಹೊಂದಿ ಸೂಕ್ಷ್ಮಶರೀರದಿಂದ ಎಷ್ಟೋಕಾಲ ಇರಬೇಕಾಗಿ ಬರುತ್ತದಲ್ಲ! ಅಲ್ಲಿಯವರೆಗೂ ಎಲ್ಲಿ ನಿವಾಸ ಮಾಡುತ್ತಿದ್ದಾರೆ. ಸ್ವಲ್ಪಜನ ಸ್ಮಶಾನಗಳಲ್ಲಿಯೇ ನಿವಾಸ ಮಾಡುತ್ತಿದ್ದಾರೆ. ಸ್ವಲ್ಪಜನ ಹಾಳುಬಿದ್ದ ಮನೆಗಳಲ್ಲಿ ನಿವಾಸ ಮಾಡುತ್ತಿದ್ದಾರೆ. ಮತ್ತೆ ಸ್ವಲ್ಪಜನ ಹುಣಿಸೆಮರ, ಬನ್ನಿಮರಗಳು, ಜಾಲಿಮರ, ಆಲದಮರದಲ್ಲಿ, ಅತ್ತಿಮರದಲ್ಲಿ ನಿವಾಸ ಇರುತ್ತಾರೆ. ಸ್ವಲ್ಪಜನ ಸತ್ತಕಡೆಯೇ ಇರುತ್ತಿದ್ದಾರೆ. ನಮಗೆ ಹಗಲು ಎಚ್ಚರ, ರಾತ್ರಿ ನಿದ್ರೆ ಇರುವಂತೆ ಸೂಕ್ಷ್ಮಶರೀರಗಳಿಗೆ ರಾತ್ರಿ ಎಚ್ಚರವಿದ್ದು, ಹಗಲು ನಿದ್ರೆ ಇದೆ. ಆದ್ದರಿಂದ ಗ್ರಹಗಳು ರಾತ್ರಿ ಸಮಯ ಹೆಚ್ಚಾಗಿ ಸಂಚಾರ ಮಾಡುತ್ತಿರುತ್ತವೆ. ನಮಗೆ ಹಸಿವು ಇರುವಂತೆ ಸೂಕ್ಷ್ಮಶರೀರಗಳಿಗೆ ಸಹ ಹಸಿವು ಇದೆ. ನಾವು ಹಸಿವಿಗೋಸ್ಕರ ಅನೇಕ ಅವಸ್ಥೆಗಳು ಬಿದ್ದಂತೆ ಸೂಕ್ಷ್ಮಶರೀರಗಳು ಸಹ ಹಸಿವು ತೀರಿಸಿಕೊಳ್ಳುವುದಕ್ಕೆ ಅನೇಕ ಅವಸ್ಥೆಗಳು ಬೀಳುತ್ತಿವೆ. ನಾವು ಭುಜಿಸುವ ಆಹಾರವೇ ಗ್ರಹಗಳು ಭುಜಿಸುತ್ತಿವೆ. ನಮಗೆ ತಿಳಿಯದೆಯೇ ನಮ್ಮ ಆಹಾರವನ್ನು, ಧಾನ್ಯವನ್ನು ಗ್ರಹಗಳು ತೆಗೆದುಕೊಂಡು ಹೋಗುತ್ತವೆ. ಹಾಗೆ ತೆಗೆದುಕೊಂಡು ಹೋಗುವುದು ಯಾರೂ ಗ್ರಹಿಸಲಾರರು. ಆದರೆ ಪೂರ್ವದಲ್ಲಿ ಜ್ಞಾನದೃಷ್ಟಿ ಇರುವ ಹಿರಿಯರು ಗ್ರಹಗಳ ಸ್ಥಿತಿಗತಿಗಳನ್ನು ತಿಳಿದುಕೊಂಡವರಾಗಿ ಧಾನ್ಯವನ್ನು ಕಣವಾಗಿ ಮಾಡಿ ಕುಪ್ಪೆ (ರಾಶಿ) ಯಾಗಿ ಹಾಕಿದ ಸಮಯದಲ್ಲಿ ಗ್ರಹಗಳು

ಭಯಪಟ್ಟು ರಾಶಿ ಹತ್ತಿರಕ್ಕೆ ಬಾರದಂತಿರುವುದಕ್ಕೆ ಕತ್ತಿಯನ್ನೊ, ಭರ್ಚಿಯನ್ನೊ, ಕುಡುಗೋಲನ್ನೊ, ತೆಂಗಿನ ಕಾಯನ್ನೊ ಯಾವುದೋ ಒಂದನ್ನು ಆ ಧಾನ್ಯದ ರಾಶಿಮೇಲೆ ಇಡುತ್ತಿದ್ದರು ಮತ್ತು ರಾಶಿಸುತ್ತಾ ಗೆರೆ ಹಾಕುತ್ತಿದ್ದರು. ಆ ಕೆಲಸವನ್ನು ಸ್ವಲ್ಪಜನ ಕೆಲವು ಪ್ರಾಂತಗಳಲ್ಲಿ ಈಗಲೂ ಸಹ ಮಾಡುತ್ತಿದ್ದಾರೆ. ಆದರೆ ಏಕೆ ಮಾಡುತ್ತಿರುವುದು ಮಾತ್ರ ಗೊತ್ತಿಲ್ಲ. ಧಾನ್ಯವನ್ನು ರಾಶಿ ಹಾಕಿದಾಗಲೇ ಗ್ರಹಗಳು ಆ ರಾಶಿಯಲ್ಲಿನ ಧಾನ್ಯವನ್ನು ಅದೃಶ್ಯ ರೂಪ ಮಾಡಿಕೊಂಡು ತೆಗೆದುಕೊಂಡು ಹೋಗುವುದಕ್ಕೆ ಹೆಚ್ಚು ಅವಕಾಶವಿದೆ. ಆದ್ದರಿಂದ ಯಾರಾದರೂ ಕಣವನ್ನು ಮಾಡುವ ವೇಳೆ ಧಾನ್ಯದ ಮೇಲೆ ಯಾವುದೋ ಒಂದು ಇಡದೆ ಹೋದರೆ ನೂರುಚೀಲಗಳು ಆಗುತ್ತವೆಂದುಕೊಂಡ ಧಾನ್ಯ ಅಳೆಯುವಷ್ಟರಲ್ಲಿ 80 ಚೀಲಗಳಿಗೆ ಇಳಿಯುತ್ತದೆ. ಹೀಗೆ ಅನೇಕ ಕಡೆ ನಡೆಯುತ್ತಿರುತ್ತದೆ. ಗ್ರಹಗಳು ನಿವಾಸ ಮಾಡುವ ಗೃಹಗಳಲ್ಲಿ ಸಂಸಾರ ವೃದ್ಧಿ ಇಲ್ಲದಂತೆ ಹೋಗುವುದಕ್ಕೂ ಸಹ ಕಾರಣ ಇದೇ. ಕೆಲವು ಹೊಲಗಳಲ್ಲಿ ಸಹ ಚೆನ್ನಾಗಿ ಕಾಳುಗಳಿರುವ ತೆನೆಗಳನ್ನೇ ಗ್ರಹಗಳು ಮಾಯ ಮಾಡಬಲ್ಲವು. ಆದ್ದರಿಂದ ಅವು ಹಾಗೆ ಮಾಡದಂತಿರುವುದಕ್ಕೆ ಪೂರ್ವದಲ್ಲಿ ಹಿರಿಯರು ಹೊಲದಲ್ಲಿ **'ಪೊಲಿ' (ಬಲಿ )** ಎನ್ನುವ ಹೆಸರಿನಿಂದ ಕೋಳಿಯನ್ನೋ ಅಥವಾ ಕುರಿಯನ್ನೋ ಕೊಯ್ದು ಗ್ರಹಗಳಿಗೆ ಊಟದ ಏರ್ಪಾಟು ಮಾಡುತ್ತಿದ್ದರು. ಆ ಊಟವನ್ನು ಆರಗಿಸಿದ ಗ್ರಹಗಳು ಅವರ ಮೇಲೆ ದಯತೋರಿಸಿ ಅವರ ಹೊಲದೊಳಗೆ ಬರದಂತೆ ಹೋಗುತ್ತಿದ್ದವು. ಈ ಕಾಲದಲ್ಲಿ ಕೆಲವು ಸ್ಥಳಗಳಲ್ಲಿ ಈಗಲೂ ಬಲಿ ಮಾಡುತ್ತಿದ್ದಾರೆ. ಆದರೆ ಅದು ಏಕೊ ಯಾರಿಗೂ ತಿಳಿದಿಲ್ಲ. ಬಲಿ ಗ್ರಹಗಳಿಗೆ ಊಟವೆಂದು ಮಾತ್ರ ಬಹಳಜನರಿಗೆ ತಿಳಿದಿಲ್ಲ. ತಿಳಿದರು ತಿಳಿಯದೆ ಹೋದರು ಬಲಿ ಮಾತ್ರ ಗ್ರಹಗಳಿಗೆ ಊಟವೆ. ಈ ವಿಷಯ ತಿಳಿಯದೆ ಬಲಿ ಮಾಡದ ಹೊಲಗಳಲ್ಲಿ, ಮತ್ತು ಪೊದೆಗಳಲ್ಲಿ ಉಳಿತ ಕಡಿಮೆ ಬರುತ್ತಿರುತ್ತದೆ. ಇಷ್ಟೇ ಅಲ್ಲದೆ ಅನ್ನದ ರಾಶಿ ಹತ್ತಿರ ಸಹ ಹೀಗೆ ನಡೆಯುತ್ತಿರುತ್ತದೆ. ಕುರಿಗಳನ್ನು ಕೊಯ್ದು ಮಾಂಸ ಕುಪ್ಪೆಮಾಡುವ ಸ್ಥಳಗಳಲ್ಲಿ ಸಹ ಗ್ರಹಗಳು ಕಳ್ಳತನ ಮಾಡುತ್ತಿರುತ್ತವೆ. ಕೆಲವು ಕಡೆ ಮೊದಲು ತೂಕ ಮಾಡಿದ ಮಾಂಸವನ್ನು ಮತ್ತೆ ತೂಕ ಮಾಡಿದರೆ

ಬಹಳ ತೂಕ ಕಡಿಮೆ ಇರುತ್ತದೆ. ಕಾರಣ ಗ್ರಹಗಳು ತೆಗೆದುಕೊಂಡು ಹೋಗಿರುತ್ತವೆ. ಈ ವಿಧವಾಗಿ ಅದೃಶ್ಯರೂಪದಲ್ಲಿರುವ ಸೂಕ್ಷ್ಮಶರೀರಗಳು ತಮ್ಮ ಆಹಾರವನ್ನು ಸಂಪಾದಿಸಿಕೊಳ್ಳುತ್ತಿವೆ.

ಗ್ರಹಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಬೇಕೆಂದರೆ ನಮ್ಮಂತೆ ರೈಲು ಬಸ್ಸುಗಳಲ್ಲಿ ಪ್ರಯಾಣ ಮಾಡುತ್ತಿವೆ. ಅವುಗಳನ್ನು ಟಿಕೆಟ್‌ಗಳು ಕೇಳುವವರು ಯಾರು ಇಲ್ಲ. ಹೆಣ್ಣು ಗಂಡು ವ್ಯತ್ಯಾಸಗಳು ಸೂಕ್ಷ್ಮ ಶರೀರಗಳು ಹೊಂದಿವೆಯಲ್ಲ! ಆದ್ದರಿಂದ ನಮ್ಮಂತೆ ಸೂಕ್ಷ್ಮಶರೀರಗಳು ಸ್ತ್ರೀ ಪುರುಷ ಸಂಯೋಗಗಳು ಮಾಡುತ್ತಿವೆ. ಗ್ರಹಗಳಾಗಿ ಬದಲಾದವರು ಬದುಕಿರುವವರನ್ನು ಸಂಯೋಗಿಸಬೇಕೆಂಬ ಕೋರಿಕೆ ಹೊಂದಿರುವವರು ಬದುಕಿರುವವರನ್ನು ಸಂಯೋಗ ಮಾಡುತ್ತಿದ್ದಾರೆ. ಆದರೆ ಹೇಗೆ ಎನ್ನುವುದು ಸಾಮಾನ್ಯವಾಗಿ ಯಾರಿಗೂ ತಿಳಿದಿಲ್ಲ. ಗ್ರಹಗಳಾಗಿರುವವರು ಅವರಲ್ಲಿಯೇ ಅವರು ಒಬ್ಬರಿಗೊಬ್ಬರು ಹೊಡೆದುಕೊಳ್ಳುತ್ತಿದ್ದಾರೆ ಮತ್ತು ಬೈಯ್ದುಕೊಳ್ಳುತ್ತಿದ್ದಾರೆ. ಒಟ್ಟಿನಲ್ಲಿ ಜೀವನವೆಲ್ಲವೂ ನಮಗಿರುವಂತೆ ಇರುತ್ತದೆ. ಇದು ಎಲ್ಲವೂ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಆದ್ದರಿಂದ ಸ್ವಲ್ಪಜನ ನಂಬದೆಹೋಗಬಹುದು. ನಂಬದವರಿಗೆ ಅಕಾಲಮೃತ್ಯು ಬಂದರೆ ಆಗಲಾದರೂ ಹೇಳಿರುವುದೆಲ್ಲವೂ ನಿಜವೆಂದು ತಿಳಿದುಕೊಳ್ಳುತ್ತಾರೆ.

ಗ್ರಹಗಳು ಎಂದರೆ ಯಾರೋ ಅಲ್ಲ ನಮ್ಮಲ್ಲಿರುವ ಜೀವಾತ್ಮಗಳೇ. ಗ್ರಹಗಳಿಗೆ ಅಜ್ಞಾನಿಗಳು ಬಯಪಡುತ್ತಾರೆ. ಅವು ಅವರನ್ನೇ ಪೀಡಿಸುತ್ತವೆ. ಜ್ಞಾನಿಗಳು ಮಾತ್ರ ಭಯಪಡುವುದಿಲ್ಲ ಅವು ಅವರನ್ನು ಭಯ ಪಡಿಸುವುದಿಲ್ಲ, ಬಾಧಿಸುವುದಿಲ್ಲ. ಅಜ್ಞಾನಿಗಳ ಶರೀರದಲ್ಲಿ ಪ್ರವೇಶಿಸಿದಂತೆ ಜ್ಞಾನಿಗಳ ಶರೀರದೊಳಗೆ ಪ್ರವೇಶಿಸುವುದಿಲ್ಲ. ಏಕೆಂದರೆ ಉರಿಯುತ್ತಿರುವ ಅಗ್ನಿಗುಂಡದಲ್ಲಿ ನಾವು ನಿಲ್ಲುತ್ತೀವಾ? ಅಥವಾ ಹೆಜ್ಜೆಯಾದರು ಇಡುತ್ತೀವಾ? ಹಾಗೆ ಗ್ರಹಗಳು ಜ್ಞಾನಾಗ್ನಿ ಇರುವ ಶರೀರಗಳಲ್ಲಿ ಪ್ರವೇಶಿಸುವುದಿಲ್ಲ. ಒಂದುವೇಳೆ ಹತ್ತಿರಕ್ಕೆ ಬಂದರು ಜ್ಞಾನಾಗ್ನಿಯ ಬಿಸಿಗೆ ನಿಲ್ಲಲಾರದೆ ದೂರವಾಗಿಹೋಗುತ್ತವೆ. ಮತ್ತು

ಜ್ಞಾನವಂತರಾದ ಯೋಗಿಗಳಿಗೆ ಗ್ರಹಗಳು ಭಯಪಡುತ್ತವೆ. ಆದ್ದರಿಂದಲೇ ಯೇಸುಪ್ರಭುವನ್ನು ನೋಡಿ ಕೆಲವು ಗ್ರಹಗಳು ಓಡಿಹೋಗಿವೆ. ಜ್ಞಾನವಂತರಿಗೆ ಗ್ರಹಗಳು ಬಹಳ ಕಡೆ ಆಧೀನಕ್ಕೆ ಒಳಪಟ್ಟಿವೆ. ಜ್ಞಾನಿಗಳಲ್ಲದೆ ಅಜ್ಞಾನಿಗಳಾದವರು ಜ್ಞಾನ ತಿಳಿದವರನ್ನು ಹೇಳನ ಮಾಡಿ ನಾವು ದೊಡ್ಡ ವಿದ್ಯೆಗಳು ಓದಿದ್ದೇವಲ್ಲ! ನಮ್ಮ ವಿದ್ಯೆಗಳಲ್ಲಿ ದೆವ್ವಗಳು ಇರುವಂತೆ ಬರೆಯಲಿಲ್ಲವೆ ಎಂದು ಅಂದುಕೊಳ್ಳುವ ವರು ಸಹ ಇದ್ದಾರೆ. ಪ್ರಾಪಂಚಿಕ ವಿದ್ಯೆಗಳು ಓದಿದರೆ ಕಣ್ಣಿಗೆ ಕಾಣಿಸುವುದು ತಿಳಿಯುತ್ತದೆ. ಆದರೆ ಪರಮಾತ್ಮ ವಿದ್ಯೆ ಓದಿದರೆ ಕಣ್ಣಿಗೆ ಕಾಣದಿರುವುದು ಸಹ ತಿಳಿಯುತ್ತದೆ. ಅಜ್ಞಾನದಲ್ಲಿ ಇರುವವರನ್ನು ಗ್ರಹಗಳು ಅನೇಕ ವಿಧಗಳಾಗಿ ಹಿಂಸಿಸುತ್ತಿವೆ. ಕೆಲವು ಬಾಧೆಗಳು ಗ್ರಹಗಳಿಂದಲೇ ಸಂಭವಿಸುತ್ತಿವೆ ಎಂದು ಬಹಳಜನರಿಗೆ ತಿಳಿದಿಲ್ಲ. ಆ ಬಾಧೆಗಳು ಹೇಗಿರುತ್ತವೆ ಎಂದರೆ, ಸ್ವಲ್ಪಜನರಿಗೆ ಶರೀರದಲ್ಲಿ ಗ್ರಹಗಳು ಪ್ರವೇಶಿಸಿ ಹೊಟ್ಟೆಯಲ್ಲಿ ಹೆಚ್ಚಾಗಿ ನೋವು ಬರುವಂತೆ ಮಾಡುತ್ತಿವೆ. ಈ ಹೊಟ್ಟೆನೋವಿಗೆ ಔಷಧಿಗಳು ಸ್ವಲ್ಪವೂ ಕೆಲಸ ಮಾಡುವುದಿಲ್ಲ. ಔಷಧಿಗಳು ಕೆಲಸಮಾಡದಿರಲು ಎಕ್ಸ್‌ರೇ ತೆಗೆಸಿದರೂ ಆ ಫಿಲ್ಮ್‌ನಲ್ಲಿ ಯಾವ ದೋಷ ಕಾಣಿಸುವುದಿಲ್ಲ. ಸ್ವಲ್ಪಜನರಿಗೆ ಗ್ರಹಗಳು ಪ್ರವೇಶಿಸಿ ಎದೆಯಲ್ಲಿ ನೋವು ಬರುವಂತೆ ಮಾಡುತ್ತಿವೆ. ಸ್ವಲ್ಪಜನರಿಗೆ ತಲೆನೋವು ಬರುವಂತೆ ಮಾಡುತ್ತಿವೆ. ಮತ್ತೆಕೆಲವು ಜನರಿಗೆ ಸಿಕ್ಕಿ ಶಲ್ಯ ವಾಗಿಹೋಗುವಂತೆ ಮಾಡುತ್ತಿವೆ. ಕೆಲವುಜನ ಸ್ತ್ರೀಯರಿಗೆ ಋತುಸ್ರಾವ ಹೆಚ್ಚಾಗುವಂತೆ ಮಾಡುತ್ತಿವೆ. ಮತ್ತು ಮೂರ್ಛೆಗಳು ಬರುವಂತೆ ಅಪಸ್ಮಾರಕವಾಗಿ ಕರೆದರು ಮಾತನಾಡದಂತೆ ಕೆಲವರನ್ನು ಮಾಡುತ್ತಿವೆ. ಕೆಲವರಿಗೆ ಒಂದು ಕಾಲು, ಒಂದು ಕೈ ಸಚ್ಚುಬರುವಂತೆ (ಬಲಹೀನ) ಮಾಡುತ್ತಿವೆ. ಈ ವಿಧವಾಗಿ ಗ್ರಹಗಳು ಮಾನವರನ್ನು ಬಾಧಿಸುತ್ತಿವೆ. ಒಬ್ಬ ಮಾನವರಿಗೇ ಅಲ್ಲದೆ ಇತರ ಜಾತಿಗಳಿಗೂ ಸಹ ಗ್ರಹ ಬಾಧೆಗಳು ಇರುತ್ತವೆ. ಗ್ರಹ ಬಾಧೆಗಳು ತಪ್ಪಿಸಿಕೊಳ್ಳಬೇಕೆಂದರೆ ಯಾರಾದರೂ ಭಕ್ತಿ ಮಾರ್ಗ ಅನುಸರಿಸಬೇಕಾಗಿದ್ದೇ. ಹಾಗಲ್ಲದೆ ಮಂತ್ರ ಯಂತ್ರಗಳಿಂದ ತಪ್ಪಿಸಿಕೊಳ್ಳೋಣ ಎಂದರೆ ಸ್ವಲ್ಪಕಾಲ ತಪ್ಪಿಸಿಕೊಳ್ಳುತ್ತಾರೇನೋ ಆದರೆ ಎಂದಿಗೂ ತಪ್ಪಿಸಿಕೊಳ್ಳ ಲಾರರು. ಜ್ಞಾನಶಕ್ತಿಯನ್ನು ಮೀರಿದ ಶಕ್ತಿಯಿಲ್ಲ. ಆದ್ದರಿಂದ ಜ್ಞಾನದಿಂದಲೇ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

ಈಗಾಗಲೇ ಗ್ರಹಗಳು ಎಂದರೆ ಏನು? ಅವುಗಳ ಸ್ಥಿತಿ ಗತಿಗಳು ಏನು? ಎಂದು ಆಮೂಲಾಗ್ರವಾಗಿ ತಿಳಿದಿದೆ. ಇನ್ನು ವಿಗ್ರಹಗಳನ್ನು ಕುರಿತು ತಿಳಿದುಕೊಳ್ಳೋಣ. ಮಾನವನ ಸೂಕ್ಷ್ಮಶರೀರವನ್ನು **ಗ್ರಹ** ಅನ್ನುತ್ತಿದ್ದೇವಲ್ಲ! ಹಾಗೆ ಒಂದು ಪ್ರತಿಮೆಯಲ್ಲಿ ಇರುವ ಸೂಕ್ಷ್ಮಶರೀರವನ್ನು **ವಿಗ್ರಹ** ಎಂದು ಅನ್ನುತ್ತಿದ್ದೇವೆ. ಮಾನವನಿಗೆ ಸೂಕ್ಷ್ಮಶರೀರ ಸ್ಥೂಲಶರೀರದಲ್ಲಿ ಅಡಕವಾಗಿದೆ. ಮೇಲಕ್ಕೆ ಮಾನವನ ಸ್ಥೂಲದೇಹವು ಕಾಣಿಸುತ್ತದೆ ಆದರೆ ಸೂಕ್ಷ್ಮದೇಹ ಕಾಣಿಸುವುದಿಲ್ಲ. ಆ ವಿಧವಾಗಿಯೇ ಗುಡಿಯಲ್ಲಿರುವ ದೇವರಿಗೆ ಸ್ಥೂಲದೇಹ ಪ್ರತಿಮೆ, ಸೂಕ್ಷ್ಮದೇಹ ವಿಗ್ರಹ. ಪ್ರತಿಮೆಯಲ್ಲಿ ವಿಗ್ರಹ ಅಡಕವಾಗಿದೆ. ಮೇಲಕ್ಕೆ ಆ ದೇವರ ಪ್ರತಿಮೆ ಆಕಾರ ಕಾಣಿಸುತ್ತದೆ ಆದರೆ ಸೂಕ್ಷ್ಮಶರೀರ (ವಿಗ್ರಹ) ಆಕಾರ ಕಾಣಿಸುವುದಿಲ್ಲ. ಹುಟ್ಟಿದ ಪ್ರತಿ ಮಾನವನಿಗು ಸೂಕ್ಷ್ಮಶರೀರ ಇರುವಂತೆ ಪ್ರತಿಷ್ಠಿಸಿದ ಪ್ರತಿ ಪ್ರತಿಮೆಗೂ ವಿಗ್ರಹ ಇರುತ್ತದೆ. ಮಾನವನಿಗೆ ಸೂಕ್ಷ್ಮಶರೀರ ಹೋಗಿ ಸ್ಥೂಲಕಳೇಬರ ಉಳಿದಂತೆ, ಪ್ರತಿಮೆಯಲ್ಲಿ ವಿಗ್ರಹಹೋದರು ಸ್ಥೂಲದೇಹವಾದ ಪ್ರತಿಮೆ ಮಾತ್ರ ಉಳಿದಿರುತ್ತದೆ. ಅಂದರೆ ಮರಣಿಸಿದ ಮಾನವಕಳೇಬರ, ವಿಗ್ರಹವಿಲ್ಲದ ಪ್ರತಿಮೆ ಎರಡು ಒಂದೇ ಎಂಬ ಮಾತು. ಮಾನವನ ಸೂಕ್ಷ್ಮದೇಹ ಮತ್ತು ಸ್ಥೂಲದೇಹದ ಆಕಾರವನ್ನೇ ಹೊಂದಿರುತ್ತದೆ. ಹಾಗೆ ಪ್ರತಿಮೆ ಆಕಾರವನ್ನೇ ವಿಗ್ರಹ ಹೊಂದಿರುತ್ತದೆ. ಆದರೆ ಗ್ರಹಗಳಿಗೂ ವಿಗ್ರಹಗಳಿಗೂ ಕೆಲವು ವಿಷಯಗಳಲ್ಲಿ ಬಹಳ ವ್ಯತ್ಯಾಸ ಇದೆ. ಅವುಗಳನ್ನು ಕುರಿತು ವಿವರಿಸುತ್ತೇನೆ ಕೇಳಿರಿ.

1) ಗ್ರಹ ಒಂದುಸಲ ತನ್ನ ಸ್ಥೂಲದೇಹವನ್ನು ಬಿಟ್ಟು ಹೊರಗೆ ಬಂದರೆ ಮತ್ತೆ ಅದರಲ್ಲಿ ಪ್ರವೇಶಿಸುವುದಿಲ್ಲ. ವಿಗ್ರಹ ತನ್ನ ಸ್ಥೂಲಶರೀರವನ್ನು ಬಿಟ್ಟು ಹೊರಗೆ ಬಂದು ಮತ್ತೆ ಪ್ರವೇಶಿಸುತ್ತದೆ. 2) ಗ್ರಹ ಇತರರ ಪದಾರ್ಥಗಳನ್ನು ಕಳ್ಳತನ ಮಾಡುತ್ತದೆ. ವಿಗ್ರಹ ಆ ವಿಧವಾಗಿ ಕಳ್ಳತನ ಮಾಡುವುದಿಲ್ಲ. 3) ಗ್ರಹ ಇತರರನ್ನು ರೋಗರೂಪದಲ್ಲಿ ಬಾಧಿಸುತ್ತದೆ. ವಿಗ್ರಹಗಳು ಸಹ ಸ್ವಲ್ಪಜನರನ್ನು ಬಾಧಿಸುತ್ತವೆ, ಮತ್ತೆ ಕೆಲವರನ್ನು ಬಾಧೆಗಳಿಂದ ವಿಮುಕ್ತರನ್ನಾಗಿ ಮಾಡುತ್ತವೆ.

4) ಗ್ರಹಗಳು ಕೆಲವು ಜ್ಞಾನಶಕ್ತಿ ಹೊಂದಿರುತ್ತವೆ. ಕೆಲವು ಮಾತ್ರ ಜ್ಞಾನಶಕ್ತಿ ಇಲ್ಲದವಾಗಿರುತ್ತವೆ. ವಿಗ್ರಹಗಳು ಎಲ್ಲವೂ ಜ್ಞಾನಶಕ್ತಿ ಇರುವವಾಗಿರುತ್ತವೆ. ಆದರೆ ಸ್ವಲ್ಪದರಿಂದ ಬಹಳದವರೆಗೂ ಹಂತ ಹಂತವಾಗಿ ಶಕ್ತಿ ಇರುವವಾಗಿರುತ್ತವೆ. 5) ಗ್ರಹಗಳು ನೀತಿನಿಜಾಯಿತಿ ಇಲ್ಲದಂತೆ ಪ್ರವರ್ತಿಸುತ್ತವೆ. ವಿಗ್ರಹಗಳು ಆ ವಿಧವಾಗಿ ಪ್ರವರ್ತಿಸುವುದಿಲ್ಲ. ಗ್ರಹಗಳಿಗೆ ವಿಗ್ರಹಗಳಿಗೆ ಕೆಲವು ಭೇದಗಳಿವೆ ಆದ್ದರಿಂದ ಗ್ರಹಗಳನ್ನು ಚಿಕ್ಕ ದೆವ್ವಗಳೆಂದು ಹೇಳಬಹುದು.

ಮಾಡಿದ ಕರ್ಮ ಜೀವಿಯ ಕರ್ಮಚಕ್ರದ ಮುಖಾಂತರ ಬಂದು, ಬೇರೆ ತಾಯಿ ಗರ್ಭದಲ್ಲಿ ಜನ್ಮಿಸಿದ ಶಿಶು ಶರೀರದೊಳಗೆ ಸೇರಿ. ಶಿಶು ಶರೀರಕ್ಕೆ ಪ್ರಾಣ ಬಂದಂತೆ, ಶಿಲ್ಪಾಚಾರ್ಯನಿಂದ ತಯಾರಾದ ಪ್ರತಿಮೆಯೊಳಗೆ ಕರ್ಮದಿಂದ ಒಬ್ಬ ಜೀವಿಯು ಪ್ರವೇಶಿಸಿ ಪ್ರತಿಮೆಗೆ ಪ್ರಾಣ ಬರುತ್ತಿದೆ. ಹಾಗೆ ಸೇರಿದ ಜೀವಿಗೆ ಸ್ಥೂಲಶರೀರ ಪ್ರತಿಮೆ, ಸೂಕ್ಷ್ಮಶರೀರ ವಿಗ್ರಹ, ಈ ವಿಧವಾಗಿ ಪ್ರತಿಮೆ ಪ್ರಾಣವನ್ನು ಹೊಂದಿರುತ್ತದೆ. ಮಾನವ ಶರೀರದಂತೆ ಪ್ರತಿಮೆ ಶರೀರ ಚಲಿಸುವುದಿಲ್ಲ. ಮಾನವನ ಸೂಕ್ಷ್ಮಶರೀರ ಸಂಚರಿಸಿದಂತೆ, ಪ್ರತಿಮೆಯ ಸೂಕ್ಷ್ಮಶರೀರ ಸಂಚರಿಸುತ್ತದೆ. ಸರ್ವ ಜೀವರಾಶಿಗಳಲ್ಲಿ, ಭೋಗಿಗಳಲ್ಲಿ, ಪಾಪಿಗಳಲ್ಲಿ, ಪ್ರಾಣಿಗಳಲ್ಲಿ ಮತ್ತು ಗುಡಿಯಲ್ಲಿನ ದೇವರಲ್ಲಿ ಎಲ್ಲಾ ಜೀವಿಗಳಲ್ಲಿ ಸಮಾನವಾಗಿರುವುದು ಆತ್ಮ. ದೇವರ ಪ್ರತಿಮೆಯಲ್ಲಿ ಜೀವಿಯು ಸೇರುವುದಕ್ಕೆ ಒಳ್ಳೆಯಕರ್ಮ ಎಷ್ಟೋ ಅಗತ್ಯ. ಒಳ್ಳೆಯ ಕರ್ಮ ಇರುವವರು ಕರ್ಮಾನುಸಾರ ವಾಗಿ ದೈವಪ್ರತಿಮೆಗಳಲ್ಲಿ ಜೀವಿಗಳಾಗಿ ಸೇರಿ, ಅದರಲ್ಲಿ ಯೋಗ ಆಚರಿಸಿ ದೈವಶಕ್ತಿ ಹೆಚ್ಚಾಗಿ ಪಡೆದವರಾಗಿ, ಅವರಿಗಿರುವ ಕರ್ಮ ತೊಲಗುತ್ತಲೇ ಪರಮಾತ್ಮನಲ್ಲಿ ಐಕ್ಯವಾಗುತ್ತಿದ್ದಾರೆ. ಸ್ವಲ್ಪಜನ ಹಾಗಲ್ಲದೆ ದೈವಪ್ರತಿಮೆಗಳಲ್ಲಿ ಜೀವಿಯಾಗಿ ಸೇರಿದರೂ ಸರಿಯಾಗಿ ಯೋಗವಾಚರಿಸದೆ ಪ್ರಪಂಚ ಮಾಯೆ ಯಲ್ಲಿ ಮುಳುಗುತ್ತಿದ್ದಾರೆ. ಇಲ್ಲಿ ಗುಡಿಯಲ್ಲಿನ ದೇವತೆಗಳು ದೊಡ್ಡವರೆಂದು ನಂಬಿಕೊಂಡಿರುವವರಿಗೆ ನಾನು ಹೇಳುವುದು ಅರ್ಥ ಆಗದಿರುವುದೇ ಅಲ್ಲದೆ, ಇದು ಎಲ್ಲವೂ ತಿಳಿಸುವ ನನ್ನನ್ನು ಸಹ ಅಪಾರ್ಥ ಮಾಡಿಕೊಳ್ಳುತ್ತಾರೇನೊ!

ದಯಮಾಡಿ ವಿಗ್ರಹಗಳನ್ನು ಅರ್ಥ ಮಾಡಿಕೊಂಡರು ಮಾಡಿಕೊಳ್ಳದೆ ಹೋದರೂ, ನನ್ನನ್ನು ಮಾತ್ರ ಅಪಾರ್ಥ ಮಾಡಿಕೊಳ್ಳದೆ ಮುಂದಕ್ಕೆ ನಿಮ್ಮ ದೃಷ್ಠಿಯನ್ನು ಹರಿಸಬೇಕೆಂದು ಕೋರುತ್ತಿದ್ದೇನೆ.

ಭಗವದ್ಗೀತೆ ಶಾಸ್ತ್ರದಲ್ಲಿ ವಿಜ್ಞಾನ ಯೋಗದಲ್ಲಿ **‘ಪ್ರಕೃತಿ ಸಂಬಂಧಗಳಾದ ಪಾಪಗಳಿಂದ ಕೋರಿಕೆಗಳಲ್ಲಿ ಮುಳುಗಿ ಅಜ್ಞಾನಿಗಳಾಗುತ್ತಾ, ನನ್ನನ್ನು ಪೂಜಿಸದೆ ಅನ್ಯದೇವತಾರಾಧನೆ ಮಾನವರು ಮಾಡುತ್ತಿದ್ದಾರೆ. ಯಾರು ಯಾವ ವಿಧವಾದ ಶ್ರದ್ಧೆಯಿಂದ ದೇವತೆಗಳನ್ನು ಪೂಜಿಸುತ್ತಾನೋ, ಅವನಿಗೆ ಆ ದೇವತೆ ಮೇಲೆ ನಂಬಿಕೆ ಇರುವಂತೆ ಮಾಡಿ ಆ ದೇವತೆಯನ್ನೇ ಶ್ರದ್ಧೆಯಿಂದ ಪೂಜಿಸುವಂತೆ ಮಾಡುತ್ತೇನೆ. ಅವನು ಆ ದೇವತೆಯನ್ನೇ ನಂಬಿಕೊಂಡು ಶ್ರದ್ಧೆಯಿಂದ ಆರಾಧಿಸುತ್ತಿರು ವಾಗ, ಆರಾಧನೆ ಫಲಿತವಾಗಿ ಅವರಿಗೆ ಕೋರಿಕೊಂಡ ಕೋರಿಕೆಗಳನ್ನು ನೆರವೇರಿಸುತ್ತೇನೆ.’** ಎಂದು ಪರಮಾತ್ಮ ತಿಳಿಸಿದ್ದಾನೆ. ಇದರಿಂದ ಗುಡಿಯಲ್ಲಿನ ದೇವರುಗಳು ಏನು ಮಾಡಲಾರರು. ಗುಡಿಯಲ್ಲಿನ ದೇವರುಗಳ ಅಂತರಾತ್ಮನಾದ ಪರಮಾತ್ಮನೇ ಎಲ್ಲವೂ ಮಾಡುತ್ತಿದ್ದಾನೆಂದು ತಿಳಿಯುತ್ತಿದೆ. ನಮಗೆ ಏನು ಮಾಡಿದರು ಪರಮಾತ್ಮನೇ ಮಾಡಬೇಕು. ಪ್ರಪಂಚದಲ್ಲಿನ ಪ್ರಜೆಗಳಿಗೆ, ದೇವಾಲಯಗಳಲ್ಲಿನ ದೇವತೆಗಳಿಗೆ, ಅಂಡ, ಪಿಂಡ, ಬ್ರಹ್ಮಾಂಡಕ್ಕೆ ಅಧಿಪತಿ ಪರಮಾತ್ಮನೇ. ಪರಮಾತ್ಮನನ್ನು ನಂಬಿ ಸ್ವಲ್ಪ ಜ್ಞಾನಶಕ್ತಿಯನ್ನು ಸಂಪಾದಿಸಿ ಕೊಂಡವರು ಸಹ ಪ್ರತಿಮೆಗಳಲ್ಲಿ ವಿಗ್ರಹಗಳಾಗಿ ಬದಲಾಗಿ ಪುಣ್ಯವಶದಿಂದ ಅನೇಕ ಪೂಜೆಗಳನ್ನು, ನೈವೇದ್ಯಗಳನ್ನು ಸ್ವೀಕರಿಸುತ್ತಿದ್ದಾರೆ.

ದೈವ ಪ್ರತಿಮೆಗಳಲ್ಲಿ ಇರುವ ಜೀವಿಗಳು ದೆವ್ವಗಳು ಆವಹಿಸಿದಂತೆ ಇತರ ಮನುಷ್ಯರ ಶರೀರಗಳನ್ನು ಆವರಿಸಿ, ನಮಗೆ ಇಂತಹ ಪೂಜೆಗಳು ಮಾಡಿರೆಂದು ಹೇಳುತ್ತಿದ್ದಾರೆ. ಮತ್ತು ತನ್ನ ಎದುರುಗಡೆ ಇಂತಹ ವಸ್ತುವನ್ನು ಕಾಣಿಕೆಯಾಗಿ ಕೊಡುತ್ತೇನೆಂದು ಹೇಳಿ ಕೊಡದೆ ಇರುವವನನ್ನು ಸಹ ಇತರರಲ್ಲಿ ಆವರಿಸಿ ನನ್ನ ಕಾಣಿಕೆಯನ್ನು ಕೊಡು ಎಂದು ಕೇಳುತ್ತಿದ್ದಾರೆ. ಇನ್ನೂ ನನಗೆ ಪೂಜೆಗಳು ಸಕ್ರಮವಾಗಿ ಮಾಡುತ್ತಿಲ್ಲ ನಿಮ್ಮನ್ನು ಏನು ಮಾಡುತ್ತೇನೋ ನೋಡಿರಿ

ಎಂದು ಬೆದರಿಸುವವರು ಸಹ ಇದ್ದಾರೆ. ಇವರೆಲ್ಲರೂ ಪ್ರತಿಮೆಗಳಲ್ಲಿ ಇದ್ದೂ ಮಾಯೆಯಲ್ಲಿ ಬಿದ್ದಿದ್ದಾರೆಂದು ತಿಳಿಯುತ್ತಿದೆ. ಸ್ವಲ್ಪಜನ ಪ್ರತಿಮೆಗಳಲ್ಲಿನ ಜೀವಿಗಳು ತಮಗೆ ಪೂಜೆಗಳು ಮಾಡಿದರೂ, ಮಾಡದೆಹೋದರೂ, ಬೈದರೂ, ಹೊಗಳಿದರೂ ಏನು ಅಂದುಕೊಳ್ಳದೆ ಮೌನವಾಗಿದ್ದು ಯೋಗ ಮಾಡುತ್ತಿದ್ದಾರೆ.

ಒಂದೇ ಹೆಸರನ್ನು ಇಟ್ಟುಕೊಂಡಿರುವ ಮಾನವರು ಎಷ್ಟೋ ಜನ ಇರುವಂತೆ, ಒಂದೇ ಹೆಸರು ಇಡಲಾದ ದೇವತಾ ಪ್ರತಿಮೆಗಳು ಎಷ್ಟೋ ಇವೆ. ಎಲ್ಲಣ್ಣ ಎಂಬ ಹೆಸರು ಹೊಂದಿದ ಮನುಷ್ಯರು ಎಷ್ಟೋಜನ ಇರುವಂತೆ, ಶ್ರೀರಾಮ ಎನ್ನುವ ಹೆಸರು ಇರುವ ಪ್ರತಿಮೆಗಳು ಎಷ್ಟೋ ಇವೆ. ಒಂದೇ ಹೆಸರಾದ ಎಲ್ಲಣ್ಣ ಎನ್ನುವವರೆಲ್ಲರೂ ಒಂದೇ ವಿಧವಾಗಿ ಇರುವುದಿಲ್ಲ. ಒಂದೇ ಹೆಸರು ಹೊಂದಿದ ಒಬ್ಬ ಎಲ್ಲಣ್ಣನಿಗೂ ಇನ್ನೊಬ್ಬ ಎಲ್ಲಣ್ಣನಿಗೂ ರೂಪದಲ್ಲಿಯೂ, ಗುಣಗಳಲ್ಲಿಯೂ ವ್ಯತ್ಯಾಸ ಇರುವಂತೆ, ಒಂದೇ ಹೆಸರು ಇಡಲಾದ ರಾಮಪ್ರತಿಮೆಗಳೆಲ್ಲವೂ ಒಂದೇ ವಿಧವಾಗಿ ಇರುವುದಿಲ್ಲ. ಒಂದು ರಾಮ ಪ್ರತಿಮೆಗೂ ಇನ್ನೊಂದು ರಾಮ ಪ್ರತಿಮೆಗು ಪುಣ್ಯದಲ್ಲಿಯೂ, ಆಕಾರದಲ್ಲಿಯೂ, ಜ್ಞಾನಶಕ್ತಿಯಲ್ಲಿಯೂ, ಗುಣಗಳಲ್ಲಿಯೂ ವ್ಯತ್ಯಾಸ ಇರುತ್ತದೆ. ಆದ್ದರಿಂದಲೇ ದೇಶದಲ್ಲಿರುವ ಒಂದೇ ಹೆಸರಿರುವ ಪ್ರತಿಮೆಗಳಿಗೆ ಬೇರೆಬೇರೆ ವಿಧಗಳಾಗಿ ಪೂಜೆಗಳು ನಡೆಯುತ್ತಿರುತ್ತವೆ. ಆಂಜನೇಯಸ್ವಾಮಿ ಎನ್ನುವ ಹೆಸರಿರುವ ಪ್ರತಿಮೆಗಳು ದೇಶದಲ್ಲಿ ಎಷ್ಟೋ ಇವೆ. ಆದರೆ ಪ್ರತಿಮೆಯಲ್ಲಿನ ಜೀವಿಗಳು ಒಂದೇ ಶಕ್ತಿ ಹೊಂದಿರುವುದಿಲ್ಲ. ಮತ್ತು ಒಂದೇ ಪುಣ್ಯ ಹೊಂದಿರುವುದಿಲ್ಲ. ಆದ್ದರಿಂದ ಅನೇಕ ವಿಧ ಆಂಜನೇಯರಿಗೆ ಅನೇಕ ವಿಧಗಳಾಗಿ ಪೂಜೆಗಳು ನಡೆಯುತ್ತಿರುತ್ತವೆ. ಒಂದು ಗುಡಿಯಲ್ಲಿನ ಆಂಜನೇಯನಿಗೆ ನಿತ್ಯಪೂಜೆಗಳು ನಡೆಯುತ್ತಿವೆ. ಮತ್ತೊಂದು ಗುಡಿಯಲ್ಲಿ ಆಂಜನೇಯನಿಗೆ ಏನು ನಡೆಯ ದಂತಿರುತ್ತದೆ. ಎಲ್ಲರೂ ಆಂಜನೇಯಸ್ವಾಮಿ ಎನ್ನುವ ಹೆಸರು ಹೊಂದಿದ್ದರೂ, ಶತ್ರುಗಳಾದ ಗ್ರಹಗಳು ಗುಡಿಯಲ್ಲಿ ಪ್ರವೇಶಿಸಿದರು ಸ್ವಲ್ಪಜನ ಆಂಜನೇಯ ಸ್ವಾಮಿಗಳು ಅವುಗಳನ್ನು ಏನು ಮಾಡಲಾರದೆ ಹೋಗುತ್ತಿದ್ದಾರೆ. ಸ್ವಲ್ಪಜನ

ಆಂಜನೇಯಸ್ವಾಮಿಗಳು ಗ್ರಹಗಳಜೊತೆ ಮಾತನಾಡಿ ತಾವೇ ಸೋತುಹೋಗುತ್ತಿದ್ದಾರೆ. ಸ್ವಲ್ಪಜನ ವಿಶೇಷ ಬಲ ಹೊಂದಿದವರಾಗಿ ಗ್ರಹಗಳನ್ನು ಹೊಡೆದೋಡಿಸುತ್ತಿದ್ದಾರೆ. ಮಾನವರಲ್ಲಿ ಗ್ರಹಗಳು ಆವರಿಸಿದವರು ಬಲ ಹೆಚ್ಚಾಗಿರುವ ಆಂಜನೇಯಸ್ವಾಮಿ ಪ್ರತಿಮೆಗಳ ಹತ್ತಿರಕ್ಕೆ ಹೋಗಿ ಶರಣು ಬೇಡಿದರು ಆ ಸ್ವಾಮಿಗಳು ಆ ಗ್ರಹಗಳನ್ನು ಬಾಧಿಸಿ ಇನ್ನು ಮೇಲೆ ಎಂದಿಗೂ ಅವರ ಹತ್ತಿರಕ್ಕೆ ಹೋಗದಂತೆ ಮಾಡುತ್ತಿದ್ದಾರೆ. ಇವು ಎಲ್ಲವೂ ನಾವು ಕೆಲವು ಸ್ಥಳಗಳಲ್ಲಿ ದೃಷ್ಠಾಂತವಾಗಿ ನೋಡುತ್ತಲೇ ಇದ್ದೇವೆ. ಗ್ರಹಗಳಾದ ಮಾನವರಿಗೆ ವಿಗ್ರಹವಾದ ಆಂಜನೇಯಸ್ವಾಮಿಗೆ ಪ್ರತಿದಿನ ಸಾಯಂಕಾಲ ಘರ್ಷಣೆ **ಅನಂತಪುರ ಜಿಲ್ಲೆ ಗುಂತಕಲ್ಲು ಹತ್ತಿರವಿರುವ ಕಸಾಪುರದಲ್ಲಿ** ನಡೆಯುತ್ತಿರುತ್ತದೆ. ತಿಳಿಯದವರು ಅಲ್ಲಿಗೆ ಹೋಗಿ ಗಮನಿಸಬಹುದು.

ಯೋಗಶಕ್ತಿ ಹೊಂದಿದ ಮನುಷ್ಯರಿಗೆ ವಿಗ್ರಹಗಳು ಸಹ ಮಾತು ಕೇಳುತ್ತವೆ. ಏಕೆಂದರೆ ದೈವಶಕ್ತಿ ವಿಗ್ರಹಗಳಿಗಿಂತ ಯೋಗಿಗಳಲ್ಲಿ ಅಧಿಕವಾಗಿರುತ್ತವೆ. ಆದ್ದರಿಂದ ವಿಗ್ರಹಗಳು ಎಲ್ಲರ ಬಳಿ ಪ್ರವರ್ತಿಸಿದಂತೆ ಪ್ರವರ್ತಿಸದೆ ಯೋಗಿಗಳು ತಮ್ಮ ಹತ್ತಿರಕ್ಕೆ ಬಂದಾಗ ವಿನಯ ವಿಧೇಯತೆಗಳಿಂದ ಇರುತ್ತವೆ. ಒಂದು ದೇವಾಲಯದಲ್ಲಿ ಯೋಗಿ ಮಲಗಿರುವಾಗ ಪ್ರತಿದಿನ ಒಬ್ಬರನ್ನು ಆವರಿಸಿ ಮಾತನಾಡಿ ಪೂಜೆಗಳು ಸ್ವೀಕರಿಸುವ ಆ ದೇವಾಲಯದ ದೇವತೆ ಆ ದಿನ ಎಷ್ಟು ಪೂಜೆಗಳು ಮಾಡಿದರೂ ಆವರಿಸಿ ಮಾತನಾಡಲಿಲ್ಲ. ಏಕೆಂದರೆ ತಾನು ಮಾಡುವ ಕೆಲಸ ಯೋಗಿ ನೋಡಿ ಕೋಪಮಾಡಿಕೊಳ್ಳುತ್ತಾನೇನೋ ಎಂದು. ಇಲ್ಲಿ ಸಹ ಯೋಗಿಗೆ ವಿಗ್ರಹ ಭಯಪಟ್ಟಿದೆ ಎಂದು ತಿಳಿಯುತ್ತಿದೆ. ಆದ್ದರಿಂದಲೇ ತಿಳಿದ ಯೋಗಿಗಳು ಕೆಲವರು ಯಾವ ದೇವಾಲಯಕ್ಕೆ ಹೋಗುವುದಿಲ್ಲ. ಮತ್ತು ಜಾತ್ರೆಗಳು ನಡೆಯುವ ಸ್ಥಳಕ್ಕೆ, ಫೀರ್ಲ ಹಬ್ಬಗಳಲ್ಲಿ ಫೀರ್ಲ ಹತ್ತಿರಕ್ಕೆ, ದೇವತೆಗಳು ಮೈಮೇಲೆ ಬಂದು ಮಾತನಾಡುತ್ತಾರೆಂಬ ಸ್ಥಳಕ್ಕೆ ಹೋಗುವುದಿಲ್ಲ. ಒಂದುವೇಳೆ ಹೋದರು ಜ್ಞಾನಾಗ್ನಿ ಶಾಖಕ್ಕೆ ಆ ಗ್ರಹಗಳು ಬಾಧೆಪಡಬೇಕಾಗಿರುತ್ತದೆ.

ಓ ಮಾನವಗಳಿರಾ! ದೇವಾಲಯದಲ್ಲಿನ ದೇವತೆಗಳಲ್ಲಿ ಸಹ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ತಿಳಿದುಕೊಳ್ಳುವುದಕ್ಕೆ ಯೋಗಿಯಾದ ಗುರುವನ್ನು ಆಶ್ರಯಿಸಿ, ಆತನು ಕೊಡುವ ಬೋಧನೆಗಳೆಂಬ ಅಮೃತವನ್ನು ಕುಡಿದು ಮೃತ್ಯುಂಜಯನಾಗು. ಆಗಿಲ್ಲದಿದ್ದರೆ ಸಾಯುವುದು ಹುಟ್ಟುವುದು, ಕಷ್ಟಸುಖಗಳು ಅನುಭವಿಸುವುದು ತಪ್ಪುವುದಿಲ್ಲ. ಘೋರವಾದ ಬಾಧೆಗಳು ಬಂದಾಗ ಪರಮಾತ್ಮನನ್ನು ಜ್ಞಾಪಕ ಮಾಡಿಕೊಂಡರೆ ಪರಮಾತ್ಮ ದಯತೋರಿ ಸುವವನು ಅಲ್ಲ. ಕರ್ಮದಿಂದ ತಪ್ಪಿಸಿಕೊಳ್ಳಬೇಕೆಂದರೆ ಜ್ಞಾನ ಮುಖ್ಯ. ಆದ್ದರಿಂದಲೇ ಗೀತಾಶಾಸ್ತ್ರದಲ್ಲಿ ಜ್ಞಾನಯೋಗದಲ್ಲಿ **'ಕರ್ಮವನ್ನು ಸುಡುವುದಕ್ಕೆ ಜ್ಞಾನವೆಂಬ ಅಗ್ನಿ ಬೇಕು'** ಜ್ಞಾನ ಬೇಕೆಂದರು ಜ್ಞಾನಧನ ಇರುವವರ ಹತ್ತಿರಕ್ಕೆ ಹೋಗಿ ಕೇಳಿಕೊಳ್ಳಬೇಕು ಎಂದು ಭಗವಂತನಂದಿದ್ದಾನೆ. ಆದ್ದರಿಂದ ಪ್ರತಿಯೊಬ್ಬರು ಜ್ಞಾನವನ್ನು ಸಂಪಾದಿಸಿಕೊಳ್ಳುವುದಕ್ಕೆ ಪ್ರಾರಂಭ ಮಾಡಬೇಕು. ಮೊದಲು ದೇವಾಲಯಗಳಲ್ಲಿ ಪೂಜೆಗಳು ಮಾಡುತ್ತಾ, ಕೋರಿಕೆಗಳು ಕೋರದೆ, ದೇವಾಲಯಗಳ ಬಾಹ್ಯರ್ಥಗಳೆಲ್ಲವನ್ನು ತಿಳಿದುಕೊಂಡು, ಅದರ ನಂತರ ಗುರು ಹತ್ತಿರ ಉಪದೇಶಹೊಂದಿ ಯೋಗಸಾಧನೆ ಮಾಡುತ್ತಾ ಯೋಗಶಕ್ತಿ ಸಂಪಾದಿಸಿಕೊಂಡು, ಯೋಗಶಕ್ತಿ ಪರಿಪೂರ್ಣ ಸ್ಥಿತಿ ಹೊಂದುತ್ತಲೇ ಆತ್ಮನಲ್ಲಿ ಐಕ್ಯವಾಗಬೇಕು.

ದೇವಾಲಯಗಳಲ್ಲಿನ ದೇವತಾ ಪ್ರತಿಮೆಗಳಲ್ಲಿ ಸಹ ಪರಮಾತ್ಮ ಇದ್ದಾನೆಂದು ಯಥಾರ್ಥ ತಿಳಿದುಕೊಂಡ ಜ್ಞಾನಿಗಳಾಗಲಿ, ಅಜ್ಞಾನಿಗಳಾಗಲಿ ಮಾಡುವ ಪೂಜೆಗಳಲ್ಲಿ ಭೋಕ್ತ ಪರಮಾತ್ಮನೇ, ಎಲ್ಲಾ ಪೂಜೆಗಳು ಆತನಿಗೆ ಸೇರುತ್ತವೆಂದು ತಿಳಿದುಕೊಳ್ಳಬೇಕು. ಆದ್ದರಿಂದಲೇ ಗೀತಾಶಾಸ್ತ್ರದಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಪರಮಾತ್ಮ **'ಶ್ರದ್ಧೆಹೊಂದಿ ಯಾರು ಅನ್ಯದೇವತೆಗಳನ್ನು ಆರಾಧಿಸುತ್ತಾನೋ ಆತನು ಸಹ ತನಗೆ ತಿಳಿಯದೇ ನನ್ನನ್ನೇ ಆರಾಧಿಸಿ ದವನಾಗುತ್ತಿದ್ದಾನೆ'** ಎಂದು ಹೇಳಿದ್ದಾನೆ.

ಯಾರಾದರೆ ಪರಮಾತ್ಮ ಎಲ್ಲಾ ಜೀವಿಗಳಲ್ಲಿರುವಂತೆ ಎಲ್ಲಾ ದೇವತಾಪ್ರತಿಮೆಗಳಲ್ಲಿ ಸಹ ಇದೆಯೆಂದು, ನಮ್ಮ ಪೂಜೆಗಳೆಲ್ಲವೂ ಪರಮಾತ್ಮನಿಗೆ ಸೇರುತ್ತವೆಂಬ ಯಥಾರ್ಥ ತಿಳಿದುಕೊಂಡಿದ್ದಾನೋ ಅವನಿಗೆ ಪರಮಾತ್ಮಪ್ರಾಪ್ತಿ ಉಂಟಾಗುತ್ತದೆ. ಹಾಗಲ್ಲದೆ ದೈವ ಪ್ರತಿಮೆಗಳಲ್ಲಿರುವ ಅಂತರ್ಯಾಮಿಯಾದ ಪರಮಾತ್ಮನನ್ನು ತಿಳಿದುಕೊಳ್ಳದವರು ಪೂಜೆಗಳು ಮಾಡುತ್ತಿದ್ದರು, ಅದರಿಂದ ಪುಣ್ಯಬಂದು ಆ ಪುಣ್ಯದಿಂದ ಸುಖ ಉಂಟಾಗುತ್ತದೆ. ಆ ಪುಣ್ಯ ಮುಗಿದುಹೋದ ತಕ್ಷಣ ಸುಖವೂ ಸಹ ಮುಗಿದುಹೋಗುತ್ತದೆ. ಆದ್ದರಿಂದ ಪ್ರತಿಮೆಗಳಲ್ಲಿರುವ ಅಂತರ್ಯಾಮಿಯಾದ ಪರಮಾತ್ಮನನ್ನು ಗುರುತಿಸಲಾರದವರು ಸುಖವನ್ನು ಪಡೆಯುತ್ತಾರೆ. ಆದರೆ ಆ ಸುಖ ಮುಗಿದುಹೋದ ನಂತರ ಅವರಿಗೆ ಕಷ್ಟಗಳು ಸಹ ಸಂಭವಿಸುತ್ತವೆ. ಆದ್ದರಿಂದ ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಪರಮಾತ್ಮ **'ಸರ್ವ ದೇವತೆಗಳಿಗೆ ಮಾಡುವ ಯಜ್ಞಗಳಲ್ಲಿ ಭೋಕ್ತನು ನಾನು ಮತ್ತು ಪ್ರಭುವು ನಾನು'** ನನ್ನನ್ನು ಯಥಾರ್ಥರೀತಿ ಕಾಣದವರಿಗೆಲ್ಲ ಸುಖ ಹೊಂದಿದ ನಂತರ ಆ ಸುಖಗಳಿಂದ ತಪ್ಪಿಹೋಗುವುದು ಸಹ ಸಂಭವಿಸುತ್ತದೆ ಎಂದು ಹೇಳಿದ್ದಾನೆ. ಆದ್ದರಿಂದ ಯಾರಾದರು ಗ್ರಹಗಳು ಎಂದರೆ ಏನು? ವಿಗ್ರಹಗಳು ಎಂದರೆ ಏನು? ಎಂದು ವಿಶಧೀಕರಿಸಿ ತಿಳಿದು ಕೊಂಡರೂ, ಗ್ರಹಗಳಲ್ಲಿಯೂ, ವಿಗ್ರಹಗಳಲ್ಲಿಯೂ ಇರುವ ಪರಮಾತ್ಮ ಇರುವಿಕೆಯನ್ನು ತಿಳಿದುಕೊಂಡರೂ ಆತನಿಗಿಂತ ಜ್ಞಾನಿ ಇನ್ನೊಬ್ಬನಿಲ್ಲವೆಂದು ಹೇಳಬಹುದು. ಅಂತಹ ಜ್ಞಾನಿಯ ಭಾವವೆಲ್ಲವೂ ಪರಮಾತ್ಮನನ್ನೇ ಆಶ್ರಯಿಸಿರುತ್ತದೆ. ಆದ್ದರಿಂದ ಅವನು ಪರಮಾತ್ಮನನ್ನೇ ಸೇರುತ್ತಾನೆ.

# ಮಹರ್ಷಿ – ಆನಂದ

ಭೂಮಿ ಮೇಲೆ ಎಷ್ಟೋ ಮನುಜರಿದ್ದಾರೆ. ಅವರಲ್ಲಿ ಮಾನ್ಯರು ಕೆಲವರಾದರೆ ಸಾಮಾನ್ಯರು ಲೆಕ್ಕವಿಲ್ಲದಷ್ಟು ಜನ ಇದ್ದಾರೆ. ಹುಟ್ಟಿದಾಗ ಎಲ್ಲರೂ ಸಾಮಾನ್ಯರಾದರೆ ಬೆಳೆದು ದೊಡ್ಡವರಾದಂತೆಲ್ಲ ಎಷ್ಟೋಜನ ಸಾಮಾನ್ಯರಾಗಿ ಉಳಿದುಹೋಗಿ, ಕೆಲವರು ಮಾತ್ರ ಮಾನ್ಯರಾಗಿ (ಪೂಜಿಸಲ್ಪಡುವವರಾಗಿ) ತಯಾರಾಗುತ್ತಿದ್ದಾರೆ. ಕೇವಲ ಜ್ಞಾನಮಾರ್ಗದಲ್ಲಿ ಇರುವವರು ಮಾತ್ರವೇ ಮಾನ್ಯರಾಗಿ ತಯಾರಾಗುವುದು ಗುರುತಿಸಲಾದ ವಿಷಯ. ಹಣ ಇರುವವನೇ ಮಾನ್ಯನೆಂದು ಕೆಲವರ ಉದ್ದೇಶದಲ್ಲಿ ಇದ್ದರೂ ಕೇವಲ ಅದು ಭ್ರಮೆ ಮಾತ್ರವೆ ಆಗುತ್ತದೆ. ಪೂರ್ತಿಯಾಗಿ ಮಾನ್ಯರು ಜ್ಞಾನಮಾರ್ಗದಲ್ಲಿ ಇರುವವರು ಸ್ವಲ್ಪ ಜ್ಞಾನಶಕ್ತಿ ಪರರಾಗಿ ಇರುವುದರಿಂದ ಅವರನ್ನು ಮಾನ್ಯರಾಗಿ ಗುರುತಿಸುವುದು ನಡೆಯುತ್ತಿದೆ.

ಆತ್ಮ ಧರ್ಮಗಳನ್ನು ತಿಳಿದವರಾಗಿ ಅವುಗಳನ್ನು ಆಚರಿಸುವವರಲ್ಲಿ ಜ್ಞಾನಾಗ್ನಿ ಎನ್ನುವ ಶಕ್ತಿ ಒಂದು ಉದ್ಭವಿಸಿರುತ್ತದೆ. ಅಂತಹ ಜ್ಞಾನಾಗ್ನಿ ಉದ್ಭವಿಸಿ ದವರನ್ನು ಯೋಗಿಗಳೆಂದು ಅನ್ನುತ್ತಾರೆ. ಆತ್ಮ ಧರ್ಮಗಳನ್ನು ಆಚರಿಸುವುದನ್ನೇ ಯೋಗವೆನ್ನುತ್ತಿದ್ದೇವೆ. ಹಾಗೆ ಆಚರಿಸುವವನನ್ನು ಯೋಗಿ ಎನ್ನುತ್ತೇವೆ. ಅಂತಹ ಆತ್ಮಧರ್ಮ ಆಚರಣೆ ಹೊಂದಿದವರು ಕೆಲವರು ಭೂಮಿ ಮೇಲೆ ಇರಬಹುದು. ಅಂತಹದರಲ್ಲಿ ಅವರಲ್ಲಿ ಯಾರು ದೊಡ್ಡವರು. ಯಾರು ಚಿಕ್ಕವರು ಯಾರು ಎಂಥವರೆಂಬುವುದು ಸಹ ನಾವು ತಪ್ಪದೆ ತಿಳಿದುಕೊಳ್ಳಬೇಕು. ಉದಾಹರಣೆಗೆ ಶಾಲೆಗೆ ಹೋಗುವವರೆಲ್ಲರೂ ವಿದ್ಯಾರ್ಥಿಗಳೆ, ವಿದ್ಯಾರ್ಥಿಗಳೆಂಬ ಹೆಸರು ಹೊಂದಿದ ಮಾತ್ರಕ್ಕೆ ಓದುಗಳಲ್ಲಿ ಅವರೆಲ್ಲರೂ ಒಂದೇ ತರಗತಿಗೆ ಸೇರಿದವರು ಅಲ್ಲ ಅಲ್ಲವೆ! ಹಾಗೆಯೇ ಆತ್ಮಧರ್ಮಗಳು ತಿಳಿದು ಆಚರಿಸಿದವರೆಲ್ಲರೂ ಯೋಗಿಗಳೆ ಆದಷ್ಟು ಮಾತ್ರಕ್ಕೆ ಯೋಗಿಗಳೆಲ್ಲರೂ ಸಮಾನ ಅಲ್ಲ. ಯೋಗಿಗಳಲ್ಲಿ ಸಹ ಚಿಕ್ಕ ದೊಡ್ಡ ಯೋಗಿಗಳಿರುವುದು ಸಹಜ. ಆದ್ದರಿಂದ ಪೂರ್ವದಲ್ಲಿ ತಿಳಿದ ಹಿರಿಯರು ಯೋಗಿಗಳಲ್ಲಿ ಸಹ ತರಗತಿಗಳು ನಿರ್ಣಯಿಸಿದಂತೆ ಅವರ ಸಾಮರ್ಥ್ಯಗಳನ್ನು ಗುರುತಿಸಿ ಹೆಸರುಗಳನ್ನು ಇಟ್ಟಿದ್ದಾರೆ.

ಯೋಗಿಗಳಲ್ಲಿ ನಾಲ್ಕು ತರಗತಿಗಳನ್ನು ಪೂರ್ವದಲ್ಲಿ ಹಿರಿಯರು ವಿಭಜಿಸಿ ಹೆಸರುಗಳು ಇಟ್ಟಂತೆ ತಿಳಿಯುತ್ತಿದೆ. ದೇವರಲ್ಲಿ ಐಕ್ಯವಾಗುವುದಕ್ಕೆ ಪ್ರಯತ್ನಿಸುವವರು ಯೋಗಿಗಳಲ್ಲಿರುವ ನಾಲ್ಕು ತರಗತಿಗಳು ದಾಟಬೇಕಾಗಿರುತ್ತದೆ. ನಾಲ್ಕು ತರಗತಿಗಳು ದಾಟಿದ ನಂತರವೇ ಮೋಕ್ಷವೆಂಬುದನ್ನು ಪಡೆಯುತ್ತಾನೆ. ನಾಲ್ಕು ತರಗತಿಗಳಲ್ಲಿ ಇರುವವರ ಹೆಸರುಗಳು ಹೀಗೆ ಇವೆ. 1) ಮಹರ್ಷಿ 2) ರಾಜರ್ಷಿ 3) ದೇವರ್ಷಿ 4) ಬ್ರಹ್ಮರ್ಷಿ. ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಒಂದು ಸಂಪೂರ್ಣಶಕ್ತಿ ಅಗತ್ಯ. ಆ ಸಂಪೂರ್ಣಶಕ್ತಿಯಲ್ಲಿ ಕಾಲ್ಭಾಗ (1/4) ಶಕ್ತಿಯನ್ನು ಸಂಪಾದಿಸಿಕೊಂಡ ಯೋಗಿಯನ್ನು ಮಹರ್ಷಿ ಎಂದು ಕರೆಯುತ್ತೇವೆ. ಅರ್ಧ (1/2) ಭಾಗ ಶಕ್ತಿಯನ್ನು ಸಂಪಾದಿಸಿಕೊಂಡ ಯೋಗಿಯನ್ನು ರಾಜರ್ಷಿ ಎಂದು ಕರೆಯುತ್ತೇವೆ. ಮುಕ್ಕಾಲು (3/4) ಭಾಗ ಶಕ್ತಿಯನ್ನು ಸಂಪಾದಿಸಿಕೊಂಡ ಯೋಗಿಯನ್ನು ದೇವರ್ಷಿ ಎಂದು ಕರೆಯುತ್ತೇವೆ. ಆ ವಿಧವಾಗಿಯೇ ಮೂಕ್ಕಾಲಿ (ಎಪ್ಪತ್ತೈದ) ನಿಂದ ಪೂರ್ತಿವರೆಗು ಶಕ್ತಿಯನ್ನು ಸಂಪಾದಿಸಿಕೊಂಡ ಯೋಗಿಯನ್ನು ಬ್ರಹ್ಮರ್ಷಿ ಎಂದು ಸಹ ಕರೆಯುತ್ತಿದ್ದೇವೆ.

ಈಗ ಕೆಲವು ಸಂಶಯಗಳು ಕೆಲವರಿಗೆ ಬರಬಹುದು. ಅವು ಏನೆಂದರೆ! ಒಂದು ಸಂಪಾದಿಸಿಕೊಂಡ ಶಕ್ತಿ ಕಣ್ಣಿಗೆ ಕಾಣಿಸುವುದಾ? ಎರಡು ಆ ಸಂಪಾದಿಸಲ್ಪಟ್ಟ ಶಕ್ತಿ ಇಪ್ಪತ್ತೈದು (1/4), ಎಂದು ಅರ್ಥ ಹೇಗೆ ತಿಳಿಯುತ್ತದೆ? ಹೀಗೆ ಎಷ್ಟೋ ಸಂಶಯಗಳಿಗೆ ಸಮಾಧಾನಗಳು ಸಹ ಹುಡುಕಬೇಕಾಗಿರುತ್ತದೆ. ಅವುಗಳಿಗೆ ನಮ್ಮ ಉತ್ತರ ಏನೆಂದರೆ! ಯೋಗಿ ಸಂಪಾದಿಸಿಕೊಂಡ ಯೋಗಶಕ್ತಿ ಕಣ್ಣಿಗೆ ಕಾಣಿಸುವುದು ಅಲ್ಲ. ಆದ್ದರಿಂದ ಇದು ಇಷ್ಟು ಇದೆ ಎಂದು ತಿಳಿಯುವುದಿಲ್ಲ. ಆದ್ದರಿಂದ ಎಂತಹ ಯೋಗಿಗಾದರು ತನ್ನ ಬೆಲೆ ತನಗೆ ತಿಳಿಯುವುದಿಲ್ಲ. ಅದರಿಂದಲೇ ಗತಕಾಲದಲ್ಲಿ ಬ್ರಹ್ಮರ್ಷಿ ಆಗಬೇಕೆಂದುಕೊಂಡ ವಿಶ್ವಾಮಿತ್ರನಿಗೆ ನೀನು ಬ್ರಹ್ಮರ್ಷಿಯಾಗಿದ್ದೀಯಾ ಎಂದು ಎದುರಿಗಿನ ವ್ಯಕ್ತಿ ಹೇಳುವವರೆಗೂ ತನ್ನ ಸ್ಥಾನ ತನಗೆ ತಿಳಿಯಲಿಲ್ಲ. ಒಬ್ಬ ಯೋಗಿಯೊಂದರ ಶಕ್ತಿಯ ದೊಡ್ಡತನ ಮತ್ತೊಬ್ಬ ಯೋಗಿಗೆ ಮಾತ್ರವೇ ತಿಳಿಯುತ್ತದೆ. ಅದು

ಕೇವಲ ಒಂದು ಬ್ರಹ್ಮರ್ಷಿ ಸ್ಥಾನದಲ್ಲಿರುವ ಯೋಗಿ ಮಾತ್ರ ಎದುರಿಗಿನ ಯೋಗಿ ಎಷ್ಟು ಶಕ್ತಿ ಇರುವವನೆಂಬುದು ಗುರುತಿಸುತ್ತಾನೆ. ಆದ್ದರಿಂದ ವಿಶ್ವಾಮಿತ್ರನು ಬ್ರಹ್ಮರ್ಷಿಯಾದ ವಿಷಯ ಮತ್ತೊಬ್ಬ ಬ್ರಹ್ಮರ್ಷಿಯಾದ ವಶಿಷ್ಠನು ಮಾತ್ರ ಗುರ್ತಿಸಿದ್ದಾನೆ. ಇದರಿಂದ ಒಬ್ಬ ಯೋಗಿ ತನ್ನಲ್ಲಿ ಯಾವ ಸ್ಥಾನಕ್ಕೆ ತಕ್ಕ ಶಕ್ತಿ ಇದೆಯೆಂಬ ವಿಷಯವನ್ನು (ತಾನು ಮಹರ್ಷಿಯಾ ಅಥವಾ ರಾಜರ್ಷಿಯಾ ಅಥವಾ ದೇವರ್ಷಿಯಾ ಹಾಗೆ ಬ್ರಹ್ಮರ್ಷಿಯಾ ಎನ್ನುವ ವಿಷಯವನ್ನು) ತನಗೆ ತಾನೆ ಗುರುತಿಸಿಕೊಳ್ಳುವುದಿಲ್ಲವೆಂದು ತಿಳಿಯುತ್ತಿದೆ. ಒಬ್ಬ ಬ್ರಹ್ಮರ್ಷಿಮಾತ್ರ ಎದುರಿಗಿನ ಯೋಗಿ ಶಕ್ತಿಯನ್ನು ಗ್ರಹಿಸಿ ಇಷ್ಟು ಇದೆ! ಈ ಸ್ಥಾನಕ್ಕೆ ತಕ್ಕವನೆಂದು ಹೇಳಬಲ್ಲನು.

ಪೂರ್ವಕಾಲದಲ್ಲಿ ಮನುಷ್ಯರು ಮಹರ್ಷಿಗಳ ತರಗತಿಗಳು ಇವು ಇವೆಯೆಂದು, ಇವರು ಇಂತಹ ಮಹರ್ಷಿ ಎಂದು ಚೆನ್ನಾಗಿ ತಿಳಿದಿರುತ್ತಿದ್ದರು. ಈಗಿನ ಪ್ರಪಂಚದಲ್ಲಿನ ಮನುಷ್ಯರಿಗೆ ಮಹರ್ಷಿಗಳೆಂಬ ಮಾತಿಗೆ ಅರ್ಥವೇನೆಂದು ಸಹ ತಿಳಿಯದಂತೆ ಹೋಗಿದೆ. ಅವುಗಳಿಂದ ನಮಗೇನು ಕೆಲಸ ಎನ್ನುವವರು ತಯಾರಾಗಿದ್ದಾರೆ. ಪ್ರಜೆಗಳನ್ನು ಜ್ಞಾನಪರರಾಗಿ ಬದಲಾಯಿಸಬೇಕಾದ ಸ್ವಾಮಿಗಳು, ಪೀಠಾಧಿಪತಿಗಳು ಸಹಾ ಕಥೆಗಳನ್ನು ಹೇಳುತ್ತಾ ಕಾಲವನ್ನು ಕಳೆಯುತ್ತಿದ್ದಾರೆ. ಆದ್ದರಿಂದ ಪೂರ್ವವಿರುವ ಭಾವಗಳು ಈಗ ತಿಳಿಯದಂತೆ ಹೋಗಿವೆ. ಈಗ ನಾವು ಮಹರ್ಷಿ ಎನ್ನುವ ಮಾತಿಗೆ ಪೂರ್ವವಿರುವ ಅರ್ಥವೇನೊ ತಿಳಿದುಕೊಳ್ಳೋಣ. **ಹರ್ಷ ಎಂದರೆ ಸಂತೋಷ. ಹರ್ಷಿ ಎಂದರೆ ಸಂತೋಷಿಸುವವನೆಂದು ಅರ್ಥ**. ಮಹಾ ಅಂದರೆ ದೊಡ್ಡದೆಂದು, ಮಹರ್ಷಿ ಎಂದರೆ ಬಹುದೊಡ್ಡ ಸಂತೋಷಿ ಎಂದು ಅರ್ಥ. ಒಬ್ಬ ಯೋಗಿಯನ್ನು ದೊಡ್ಡ ಸಂತೋಷಿ (ಮಹರ್ಷಿ) ಅನ್ನುವುದೇಕೆ? ಎಂದು ಕೇಳಿದರೆ ಅದಕ್ಕೆ ಉತ್ತರವಾಗಿ ಯೋಗಿ ಆತ್ಮಾನುಭೂತಿಯನ್ನು ಅನುಭವಿಸುವನೆಂದು ಹೇಳುತ್ತೇವೆ. ಆತ್ಮಾನುಭೂತಿ ಎಂಥದೆಂದು ಕೇಳಿದರು ಅದು ಮಾತುಗಳಿಗೆ ಸಿಗದ ಅನುಭವ. ಅದನ್ನು ಕುರಿತು ಹೊರಗಿನವರಿಗೆ ಹೇಳಬೇಕೆಂದರೆ ಅದು ಒಂದು ಆನಂದವೆಂದು

ವರ್ಣಿಸಿದ್ದಾರೆ. ಅನುಭವಗಳಲ್ಲಿ ದೊಡ್ಡದು ಆನಂದವೇ ತಾನೆ! ಆದ್ದರಿಂದ ಆತ್ಮಾನುಭೂತಿಯನ್ನು ಆನಂದವಾಗಿ ವರ್ಣಿಸಿದ್ದಾರೆ. ಆದರೆ ಅದು ಆನಂದ ಸಹ ಅಲ್ಲ. ಆದರೂ ಅದನ್ನು ವರ್ಣಿಸುವುದಕ್ಕೆ ಕೈಲಾಗದೆ ಆನಂದವೆಂದು, ಬ್ರಹ್ಮಾನಂದವೆಂದು ಹಿರಿಯರು ಹೇಳಿದ್ದಾರೆ. ಯೋಗವೆಂಬುದನ್ನು ಆನಂದವೆಂದು ವರ್ಣಿಸಿದವರು ಯೋಗವನ್ನು ಅನುಭವಿಸುವವನನ್ನು ಆನಂದ ಎಂದು ಸಹ ವರ್ಣಿಸಿದ್ದಾರೆ. ಈ ಕಾಲದಲ್ಲಿ ಸಹ ಬಹುಶಃ ಸ್ವಾಮಿಗಳಾದವರೆಲ್ಲರೂ ಆನಂದ ಎನ್ನುವ ಹೆಸರಿನಿಂದಲೇ ಇದ್ದಾರೆಂದುಕೊಳ್ಳೋಣ ಆದರೂ ಯಾರು ಎಷ್ಟು ಆನಂದವೋ ಇಪ್ಪತ್ತೈದನೆ ಆನಂದವೋ, ಮುಕ್ಕಾಲು ಆನಂದವೋ ಯಾರಿಗೂ ತಿಳಿದಿಲ್ಲ. ಈ ಕಾಲದ ಆನಂದರು ಪರಂಪರೆಯಾಗಿ ಹೆಸರು ಇಟ್ಟುಕೊಂಡು ಆನಂದರಾಗಿದ್ದಾರೆ, ಆದರೆ ಪೂರ್ವಕಾಲ ಮಾದಿರಿಯಂತೆ ಇಪ್ಪತ್ತೈದು, ಎಪ್ಪತ್ತೈದು ತರಗತಿಗಳಿವೆ ಎಂದು ತಿಳಿದು ಇಟ್ಟುಕೊಂಡ ಹೆಸರುಗಳು ಅಲ್ಲ. ಹಾಗೆ ತಿಳಿದಿದ್ದರೆ ಇವರೆಲ್ಲರೂ ಬರೀ ಆನಂದರು ಅಲ್ಲದೆ ರಾಜಾನಂದ, ದೇವಾನಂದ, ಬ್ರಹ್ಮಾನಂದರಾಗಿ ಬದಲಾಗಿರುತ್ತಿದ್ದರು. ಈಗ ನಾವು ಹೇಳುವವೆಲ್ಲ ಕೆಲವರಿಗೆ ಹೊಸದಾಗಿ ಕಾಣಿಸಿದರೂ ಪೂರ್ವಕಾಲದಲ್ಲಿ ಇರುವವೇ ಎಂದು ಗ್ರಹಿಸಬೇಕು. ಆನಂದ ಎಂಬ ಪದವನ್ನು ಮಹರ್ಷಿ ಎಂದು ಸಹ ಅನ್ನಬಹುದು. ಅವುಗಳ ಎರಡು ಅರ್ಥಗಳು ಒಂದೇ. ಆದ್ದರಿಂದ ಯೋಗಿಯಾದವನನ್ನು ಮಹರ್ಷಿ ಎಂದು ಹೇಳಬಹುದು. ಮಹರ್ಷಿ ಶಕ್ತಿಗಿಂತ ಹೆಚ್ಚು ಶಕ್ತಿಹೊಂದಿದ ವನನ್ನು ರಾಜರ್ಷಿ ಎನ್ನುವುದರಲ್ಲಿ ಒಂದು ಅರ್ಥವಿದೆ. ಎಲ್ಲದಕ್ಕಿಂತ ದೊಡ್ಡದನ್ನು ರಾಜ ಎನ್ನುವುದು ಸಹಜ. ಆದ್ದರಿಂದ ಮಹರ್ಷಿ ನಂತರ ದೊಡ್ಡದನ್ನು ರಾಜರ್ಷಿ ಎಂದಿದ್ದಾರೆ. ಮಾನವರಲ್ಲಿ ರಾಜನಿಗಿಂತ ದೊಡ್ಡವರು ದೇವತೆಗಳು ಆದ್ದರಿಂದ ರಾಜರ್ಷಿ ನಂತರ ದೇವರ್ಷಿ ಎಂದಿದ್ದಾರೆ. ದೇವತೆಗಳಿಗಿಂತ ಸಹ ದೊಡ್ಡದು ಪರಮಾತ್ಮ (ದೇವರು). ಅದನ್ನು ಬ್ರಹ್ಮ ಎನ್ನುವುದು ಸಹಜ ಆದ್ದರಿಂದ ಎಲ್ಲದಕ್ಕಿಂತ ಕೊನೆಯದನ್ನು ಬ್ರಹ್ಮರ್ಷಿ ಅಂದಿದ್ದಾರೆ. ಮಹರ್ಷಿ, ರಾಜರ್ಷಿ, ದೇವರ್ಷಿ ಬ್ರಹ್ಮರ್ಷಿ ಎನ್ನುವ ವರಸೆ ಪ್ರಕಾರವೇ ಆನಂದ, ರಾಜಾನಂದ, ದೇವಾನಂದ, ಬ್ರಹ್ಮಾನಂದ ಎನ್ನುವ ಪದವಿಗಳು ಇವೆ.

ಈ ಕಾಲದಲ್ಲಿ ಸಹ ಯೋಗಿಗಳಲ್ಲಿ ದೊಡ್ಡ ಶಕ್ತಿ ಇರುವವರು ಮಹರ್ಷಿಗಳ ಹತ್ತಿರದಿಂದ ರಾಜರ್ಷಿ ಬ್ರಹ್ಮರ್ಷಿಗಳ ವರೆಗೂ ಭೂಮಿ ಮೇಲೆ ಇರಬಹುದು. ಆದರೆ ಅವರಿಗೆ ಮತ್ತೊಬ್ಬನು ಹೇಳುವವರೆಗೂ ಅವರ ಅರ್ಹತೆ ಅವರಿಗೆ ತಿಳಿಯುವುದಿಲ್ಲ, ಆದ್ದರಿಂದ ನಾವು ಇಂಥವರೆಂದು ತಿಳಿಯದ ಸ್ಥಿತಿಯಲ್ಲಿ ಇರುವವರು ಸಹ ಇದ್ದಾರೆ. ಕೆಲವರು ಇದೆಲ್ಲ ನಿನಗ್ಹೇಗೆ ತಿಳಿದಿದೆ? ಈ ವಿಷಯಗಳು ಯಾರು ಎಲ್ಲಿ ಹೇಳಲಿಲ್ಲವಲ್ಲ! ಅಂಥದರಲ್ಲಿ ನೀನು ಹೇಳುವ ಮಾತುಗಳು ಸತ್ಯವೆಂದು ಹೇಗೆ ನಂಬಬೇಕೆಂದು ಪ್ರಶ್ನಿಸುವವರು ಸಹ ಇದ್ದಾರೆ. ಅದಕ್ಕೆ ನಮ್ಮ ಸಮಾಧಾನ, ನೀವು ಹೇಳಿದಂತೆ ಬಹಳಜನ ಯಾರೋ ಎಲ್ಲೋ ಹೇಳಿದ ವಿಷಯಗಳೇ ಮತ್ತೆ ಮತ್ತೆ ತಿರುಗಿಸಿ ತಿರುಗಿಸಿ ಬರೆಯುತ್ತಿರುವುದರಿಂದ ಅಂತಹ ವಿಷಯಗಳೇ ಓದುತ್ತಿರುವುದರಿಂದ, ಈ ವಿಷಯಗಳು ಹಾಗೆ ಇಲ್ಲವೇ ಎಂದು ಕೇಳುವುದರಲ್ಲಿ ತಪ್ಪಿಲ್ಲ. ಒಂದು ಗಿಡ ಸಿಹಿಯಾದ ಹಣ್ಣುಗಳು ಕಾದಂತೆ ಹೆಸರು ಹೊಂದಿದೆ ಅಂದುಕೊಳ್ಳಿ. ಆಗ ಹಣ್ಣುಗಳು ಮಾರುವವನು ತನ್ನ ಪುಟ್ಟಿಯಲ್ಲಿನ ಹಣ್ಣುಗಳು ಯಾವ ಗಿಡದವಾದರು ಇಂತಹ ಗಿಡದವೇ ಎಂದು ಆ ಸಿಹಿಯಾದ ಗಿಡದ ಹೆಸರು ಹೇಳಿ ಹಣ್ಣುಗಳು ಮಾರಾಟಮಾಡುತ್ತಿ ರುತ್ತಾನೆ. ಹಾಗೆಯೇ ಕೆಲವರು ಗತ ಕಾಲದಲ್ಲಿ ಪ್ರಜೆಗಳೆಲ್ಲರಲ್ಲಿ ಹೆಸರು ಹೊಂದಿದ ಸ್ವಾಮಿಗಳ ಹೆಸರು ಹೇಳಿಕೊಂಡು ಇವು ಅವರ ಮಾತುಗಳೆ, ಇವು ಅವರ ರಚನೆಗಳೇ ಎಂದು ಹೇಳಿಕೊಳ್ಳುತ್ತಿರುತ್ತಾರೆ. ಹಾಗೆಯೇ ಪುಸ್ತಕಗಳಲ್ಲಿ ಬರೆ ಯುತ್ತಿರುತ್ತಾರೆ. ಉದಾಹರಣೆಗೆ ನಮ್ಮ ದೇಶದಲ್ಲಿ ಕಾಳಿಕಾದೇವಿಯನ್ನು ಪೂಜಿಸಿದ ಒಬ್ಬ ಗುರು ದೊಡ್ಡ ಹೆಸರುವಾಸಿಯಾಗಿದ್ದಾನೆ. ಆತನ ಶಿಷ್ಯನು ಸಹ ಹೆಸರುವಾಸಿಯಾದವನೆ. ಅವರು ಬರೆದಿರುವವು, ಅವರು ಹೇಳಿರುವವು ಅಂದರೆ ಚೆನ್ನಾಗಿ ಕೇಳುವವರು ಓದುವವರು ಇದ್ದಾರೆ. ಅಂತಹ ವಿಷಯ ತಿಳಿದು ಈ ಕಾಲದ ಉಪನ್ಯಾಸಕರು, ರಚಯಿತರು ಅವರ ಹೆಸರು ಇಲ್ಲದಂತೆ ಯಾವು ಹೇಳಲಾರರು ಬರೆಯಲಾರರು. ಆ ಗುರುವಾಗಲಿ ಶಿಷ್ಯನಾಗಲಿ ಭಗವದ್ಗೀತೆಯನ್ನು

ಬರೆಯದಿದ್ದರೂ ಇಂತಹವರು ಬರೆದ ಭಗವದ್ಗೀತೆ ಎಂದು ಅವರ ಹೆಸರಿಟ್ಟು ಬರೆದವರು ಸಹ ಇದ್ದಾರೆ. **ಈ ವಿಧವಾಗಿಯೇ ಶಂಕರಾಚಾರ್ಯರು ಹೇಳಿದ್ದಾರೆಂದು, ರಾಮಕೃಷ್ಣ ಪರಮಹಂಸ ಹೇಳಿದ್ದಾನೆಂದು, ವಿವೇಕಾನಂದ ಹೇಳಿದ್ದಾನೆಂದು, ರಮಣಮಹರ್ಷಿ ಹೇಳಿದ್ದಾನೆಂದು ಮೊದಲಾದ ದೊಡ್ಡವರ ಹೆಸರುಗಳು ಹೇಳಿ** ಅವರು ಹೇಳಿದ ವಿಷಯಗಳೇ ಪ್ರಸ್ತಾಪಿಸುವವರೂ ಸಹ ಇದ್ದಾರೆ. ಆದರೆ ಇಲ್ಲಿ ನಾವು ಯಾರ ಹೆಸರನ್ನು ಉಪಯೋಗಿಸದಂತೆ, ಅವರು ಹೇಳಿದ ವಿಷಯಗಳು ಅಲ್ಲದೆ, ಈ ಕಾಲದಲ್ಲಿ ತಿಳಿಯದಂತೆ ಹೋಗಿವೆ, ಪೂರ್ವಕಾಲದಲ್ಲಿರುವ ವಿಷಯಗಳು ಹೇಳುತ್ತಿದ್ದೇವೆ. ಅಷ್ಟುಮಾತ್ರಕ್ಕೆ ಸತ್ಯವಲ್ಲವೆಂದು ಹೇಳುವುದಕ್ಕೆ ಅವಕಾಶ ಇಲ್ಲ. ಏಕೆಂದರೆ ನಾವು ಹೇಳುವ ವಿಷಯಗಳು ಇಂದಿಗೂ ಅರ್ಥವಿಲ್ಲದ ಆಚಾರಗಳಾಗಿ ಉಳಿದಿವೆ. ಆದ್ದರಿಂದ ಅವುಗಳೇ ನಮ್ಮ ಮಾತುಗಳಿಗೆ ಪ್ರತ್ಯಕ್ಷ ಪ್ರಮಾಣಗಳಾಗಿ ನಿಲ್ಲುತ್ತಿವೆ. ಪೂರ್ವ ಕಾಲದಲ್ಲಿ ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿಗಳು ಇದ್ದಾರೆಂಬ ವಿಷಯ ಎಲ್ಲರಿಗೂ ತಿಳಿದ ವಿಷಯವೇ ಅದು ಈದಿನ ತಿಳಿಯದ ವಿಷಯಗಳಾಗಿದ್ದು ಅವರ ಹೆಸರುಗಳು ಅರ್ಥತಿಳಿಯದಿರುವವಾಗಿ ಉಳಿದಿವೆ ಎಂದು ಸಹ ಎಲ್ಲರಿಗೂ ತಿಳಿದಿದೆ. ಆದ್ದರಿಂದ ನಾವು ಹೇಳಿದ ಮಾತುಗಳಲ್ಲಿ ಸತ್ಯವಿದೆಯೆಂದು ಕೆಲವರಾದರೂ ಗ್ರಹಿಸುತ್ತಾರೆಂದು ನಂಬುತ್ತಿದ್ದೇವೆ. ನಮ್ಮ ಹೆಸರು ಸಹ ಪ್ರಬೋಧಾನಂದ ಎಂದು ಗುರು ಇಟ್ಟಿದ್ದಾನೆ. ಆನಂದ ಎನ್ನುವುದು ನಮ್ಮ ಹೆಸರಿನಲ್ಲಿಯೂ ಸಹ ಇದೆ. ಆದರೆ ತರಗತಿಗಳ ಪ್ರಕಾರ ನಾನು ಯಾವ ಆನಂದನೋ ನನಗೆ ಗೊತ್ತಿಲ್ಲ. ಆದ್ದರಿಂದ ಬ್ರಹ್ಮರ್ಷಿಗಳು ಯಾರಾದರು ಇದ್ದು ನೀನು ಇಷ್ಟು ಆನಂದವೇ ಎಂದು ತಿಳಿಸಿದರೆ ನಾವು ಸಂತೋಷವಾಗಿ ಕೇಳುತ್ತೇವೆ. ಪ್ರಬೋಧಾನಂದನೇ ಅಲ್ಲದೆ ಯೋಗೀಶ್ವರರು ಎಂಬ ಗೌರವ ಹೊಂದಿದ ನಾವು ಯಾವ ತರಗತಿಯವರೋ ನಿಮ್ಮ ಅನುಭವದಿಂದ ಹೇಳಿರಿ.

ಪ್ರಪಂಚದಲ್ಲಿ ಪ್ರತಿಜೀವಿ ನಿರ್ಣಯಿಸಲ್ಪಟ್ಟ ವಾಯುವು (ಆಯುವು) ಪ್ರಕಾರ ಜೀವಯಾತ್ರೆ ಸಾಗಿಸಿ ಮರಣಿಸುವುದು ಸಹಜ. ಈ ಜೀವಯಾತ್ರೆ ನಿರ್ಣಿತ ವಾಯುವು ಪ್ರಕಾರ ಒಂದು ಶರೀರದಲ್ಲಿ ಸಾಗುತ್ತಿದೆ. ಶರೀರವೆಂಬ ಗಾಡಿಯಲ್ಲಿ **'ವಾಯುವು ಅಳತೆ'** ಎಲ್ಲಿ ಮುಗಿದುಹೋಗುತ್ತಿದೆಯೋ ಅಲ್ಲಿ ಶರೀರದಿಂದ ಜೀವಿಯು ಇಳಿದುಹೋಗಬೇಕಾಗಿದೆ. ಇದು ಪ್ರತಿಯೊಬ್ಬ ಜೀವಿಗೆ ನಡೆಯುತ್ತಿರುವ ವಿಷಯವೆ.

ನಾವು ಒಂದು ಊರಿಗೆ ಹೊರಟಾಗ ಆ ಊರು ಎಷ್ಟು ದೂರ ಇರುವುದು, ನಾವು ಎಲ್ಲಿ ಇಳಿಯಬೇಕು ಎಂದು ಜ್ಞಾಪಕ ಇಟ್ಟುಕೊಂಡು ಪ್ರಯಾಣಿಸುತ್ತಾ ಇರುತ್ತೇವೆ. ಗಮ್ಯ ದೂರವಾದರೆ ಅದಕ್ಕೆ ತಕ್ಕ ಖರ್ಚು ನಿಮಿತ್ತ ಎಷ್ಟು ಹಣ ಬೇಕೋ ಅಷ್ಟೇ ನಮ್ಮ ಹತ್ತಿರ ಇಟ್ಟುಕೊಳ್ಳುತ್ತೇವೆ. ಹಾಗೆ ಆ ಪ್ರಯಾಣದಲ್ಲಿ ಯಾರಜೊತೆ ಸ್ನೇಹ ಮಾಡಿದರೂ, ಇಳಿದುಹೋಗು ವವರೆಗೆ ಆ ಸ್ನೇಹವಿರುತ್ತದೆಂದು ತಿಳಿದು ಅಲ್ಲಿಯವರೆಗೆ ಪರಿಚಯ ಏರ್ಪಡಿಸಿಕೊಳ್ಳುತ್ತೇವೆ. ಇದು ಗಮ್ಯ ತಿಳಿದ ಪ್ರಯಾಣವಾದ್ದರಿಂದ ಈ ಪ್ರಯಾಣದಲ್ಲಿ ಬಂಧಗಳು ಅನುಬಂಧಗಳು ಏನು ಇಟ್ಟುಕೊಳ್ಳುವುದಿಲ್ಲ.

ಜೀವನಪ್ರಯಾಣದಲ್ಲಿ ಮರಣವೆಂಬ 'ಗಮ್ಯ' ಎಲ್ಲರಿಗೂ ಇದೆಯೆಂದು ತಿಳಿದಿದೆ. ಆದರೆ ಆ ಗಮ್ಯ ಎಷ್ಟು ದೂರವಿದೆ ಯಾರಿಗೂ ತಿಳಿದಿಲ್ಲ. ಅದು ಯಾವಾಗ ಬರುವುದು ಸಹ ಗೊತ್ತಿಲ್ಲ. 50 ಕಿ.ಮಿ ವೇಗವಿರುವ ವಾಹನದಲ್ಲಿ ಪ್ರಯಾಣಿಸಿದರು ದೆಹಲಿಗೆ ಹೋಗಬೇಕೆಂದರೆ 8 ದಿನಗಳು, ಅಮೇರಿಕಾ ಹೋಗಬೇಕೆಂದರೆ ತಿಂಗಳು ಪ್ರಯಾಣಕಾಲವೆಂದು ತಿಳಿದಾಗ ಸಾಟಿ ಪ್ರಯಾಣಿ ಕರಜೊತೆ ಅಂಟಿ ಅಂಟದ ಸ್ನೇಹವೇ ಮಾಡುತ್ತೇವೆ. ಆದರೆ ನಮ್ಮ ಶರೀರ ವಾಹನ ಪ್ರಯಾಣ **'ಇಷ್ಟು ಕಾಲವೆಂದು'** ತಿಳಿಯದಿದ್ದರೂ ನಮ್ಮ ಸಾಟಿ ಪ್ರಯಾಣಿಕರಜೊತೆ ಪೂರ್ತಿ ಬಂಧಗಳು ಏರ್ಪಡಿಸಿಕೊಳ್ಳುವುದು ನಡೆಯುತ್ತಿದೆ. ನಮ್ಮ ಪ್ರಯಾಣ ದಿನವೊ, ಅರ್ಧದಿನವೊ ತಿಳಿಯದಿರುವಾಗ ಬಂಧಗಳು

ಏರ್ಪಡಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ. ದೆಹಲಿ ಪ್ರಯಾಣ ತಪ್ಪದೆ ವಾರದಿನಗಳೆಂದು ತಿಳಿದರೂ ಸಾಟಿ ಪ್ರಯಾಣಿಕರ ಜೊತೆ ಬಂಧಗಳು ಇಟ್ಟುಕೊಳ್ಳುವುದಿಲ್ಲ. ನಮ್ಮ ದೇಹಪ್ರಯಾಣ ವಾರದಿನಗಳೆಂದು ಸಹ ನಂಬಿಕೆಯಿಲ್ಲದಿರುವಾಗ ಬಂಧಗಳು ಏರ್ಪಡಿಸಿಕೊಳ್ಳುವುದು ಜ್ಞಾನರಹಿತವೆಂದು ತಿಳಿಯಬೇಕು. ಜ್ಞಾನಸಹಿತವಾಗಿ ಯೋಚಿಸಿದರೆ ಸಾಟಿ ಪ್ರಯಾಣಿಕರಂತೆ ಎಷ್ಟೋಜನ ಶರೀರಗಳಲ್ಲಿ ಜೀವನ ಸಾಗಿಸುತ್ತಿರುವಾಗ ಯಾರ ಗಮ್ಯ ಅವರದು. ಯಾರದು ಯಾವ ಗಮ್ಯದ ವರೆಗೂ ಪ್ರಯಾಣವೊ ಅಲ್ಲಿಯವರೆಗೆ ಸಾಗಿ ನಿಂತುಹೋಗುತ್ತದೆ. ನಿನ್ನಹಿಂದೆ ಖಂಡಿತವಾಗಿ ನಿನ್ನ ಗಮ್ಯದ ವರೆಗೂ ಪ್ರಯಾಣಿಸುವವರು ಯಾರೂ ಇರುವುದಿಲ್ಲ. ಆ ವಿಷಯ ಎಲ್ಲರೂ ಒಪ್ಪಿಕೊಳ್ಳಬೇಕಾಗಿರುವುದೆ. ಆದರೆ ಇದು ಸ್ವಲ್ಪಮಟ್ಟಿಗೆ ವಾಸ್ತವವೆ. ಆದರೆ ನಮಗೆ ತಿಳಿಯದ ವಾಸ್ತವ ಮತ್ತೊಂದಿದೆ. ಅದು ಏನೆಂದರೆ ಸಹಜವಾಗಿ ಹೊರಗೆ ಕಾಣಿಸುವ ನಿನ್ನಸಾಟಿ ನಿನ್ನಸಹ ಪ್ರಯಾಣಿಕರು ನಿನ್ನ ಗಮ್ಯದವರೆಗೂ ಬಾರದಿದ್ದರೂ ನಿನಗೆ ಕಾಣಿಸದಂತೆ ನಿನ್ನಜೊತೆ ಪ್ರಯಾಣ ಮಾಡುವವರು ಇನ್ನೂ **'ಇಬ್ಬರಿದ್ದಾರೆ'** ಅವರಲ್ಲಿ ಒಬ್ಬನು ಹೆಸರಿರುವವನು ಮತ್ತೊಬ್ಬನು ಹೆಸರಿಲ್ಲದವನು. ಒಬ್ಬನಿಗೆ **'ಆತ್ಮ'** ಎಂದು ಹೆಸರಿದೆ. ಎರಡನೆಯವ ನಿಗೆ ಹೆಸರಿಲ್ಲವಾದ್ದರಿಂದ, 'ಆತ್ಮ'ಕ್ಕೆ ಪರವಾಗಿ ಇರುವವನಾದ್ದರಿಂದ, ಆತನನ್ನು **'ಪರಮಾತ್ಮ'** ಎಂದು, ಆತನನ್ನೇ **'ಈಶ್ವರನು' (ಅಧಿಪತಿ)** ಎಂದೂ, **'ಶಿವ'** ಎಂದೂ, **'ದೇವರು'** ಎಂದೂ ಅನೇಕ ವಿಧಗಳ ಗೌರವದಿಂದ ಕರೆಯುತ್ತಿದ್ದೇವೆ.

ನೀನು 'ಜೀವಾತ್ಮ'ನೆಂದು ನಿನಗೂ ಸಹ ತಿಳಿದಿದೆ. ಆದರೆ ನೀನು ಶರೀರವೆಂಬ ಗಾಡಿಯಲ್ಲಿ ಪ್ರಯಾಣಿಸುತ್ತಾ ಇದ್ದೀಯಾ ಎಂದು ಮರೆತಿದ್ದೀಯಾ. ಮತ್ತು ನಿನ್ನಜೊತೆ ಸಹ ಎಲ್ಲಕಾಲದಲ್ಲಿ ಮತ್ತೆ 'ಇಬ್ಬರು' ಇದ್ದಾರೆಂದು ಸಹ ತಿಳಿದಿಲ್ಲ. ಸ್ವಲ್ಪ ಜ್ಞಾನದೃಷ್ಟಿಯಿಂದ ಗಮನಿಸಿನೋಡಿದರೆ ನಿನ್ನ ಶರೀರದಲ್ಲಿ 'ಮೂವರು' ಪ್ರಯಾಣಿಸುತ್ತಿದ್ದಾರೆ.

ಈ ವಿಧವಾಗಿ ಎಲ್ಲಾ ಜೀವರಾಶಿಗಳ ಶರೀರದಲ್ಲಿಯೂ 'ಪ್ರಯಾಣ' ನಡೆಯುತ್ತಿದೆ. ಶರೀರದಲ್ಲಿ 'ಆತ್ಮ' ಪರಮಾತ್ಮ'ಗಳಜೊತೆ ನಿನಗೆ (ಜೀವಾತ್ಮನಿಗೆ) ಇರುವ ಬಂಧವೇನು? ಅವರಜೊತೆ ಎಷ್ಟು ಸ್ನೇಹವಾಗಿದ್ದೀಯಾ ಎಂದು ಯೋಚಿಸಿದರೆ ಜೀವಾತ್ಮ ಸ್ವಲ್ಪವೂ ಅವರಜೊತೆ ಸಂಬಂಧಗಳು ಇಟ್ಟುಕೊಳ್ಳುತ್ತಿಲ್ಲ. ಈಗ ಇದು ಓದುವವನಿಗೆ ನಿನಗಿವೆಯಾ! ಎಂದರೆ ಸ್ವಲ್ಪವೂ ಇಲ್ಲವೆಂದೇ ಹೇಳಬಹುದು. ಇರುವುದೆಲ್ಲ ನಮ್ಮ ಮುಂದೆ ಹೋಗುವವರಜೊತೆಯೊ, ನಮ್ಮ ನಂತರ ಹೋಗುವವರಜೊತೆಯೊ ಬಂಧಗಳು ಇಟ್ಟುಕೊಂಡು, ಅವರಜೊತೆಯೇ ಕಾಲವೆಲ್ಲ ಕಳೆದುಹೋಗುತ್ತಿದ್ದರೆ, ಒಳಗಿನ ಆತ್ಮ ಪರಮಾತ್ಮ ಎಂಬುವವರಜೊತೆ ಬಂಧಗಳು ಏರ್ಪಡಿಸಿಕೊಳ್ಳುವ ಸಮಯ ಸಹ ಯಾರಿಗೂ ಇಲ್ಲ. ಆದರೆ ನೀನು ಒಳಗಿರುವ ಅವರಕಡೆ ನೋಡದಿದ್ದರೂ ಅವರು ನಿನ್ನಕಡೆ ನೋಡುತ್ತಿದ್ದಾರೆ. ಅವರಜೊತೆ ಬಂಧ ಇಟ್ಟುಕೊಳ್ಳದಿದ್ದರೂ ಅವರ ಬಂಧ ಎಲ್ಲವೇಳೆಯಲ್ಲಿ ನಿನ್ನಜೊತೆ ಇದೆ. ಅವರ ಸಂಬಂಧವಿಲ್ಲದಿದ್ದರೆ ಶರೀರದಲ್ಲಿ ನಾವೊಂದು ನಿಮಿಷವೂ ಸಹ ಇರುವುದಿಲ್ಲ. ಶರೀರ ವಾಹನದಲ್ಲಿ ಜೀವಾತ್ಮ, ಆತ್ಮ ಪರಮಾತ್ಮಗಳು ಪ್ರಯಾಣಿಸುತ್ತಾ 'ಗಮ್ಯ'ಸೇರಿಕೊಳ್ಳುತ್ತಲೇ ಶರೀರ ವಾಹನದಿಂದ ಜೀವಾತ್ಮ ಇಳಿದುಹೋಗುತ್ತಾನೆ. ಆತನೊಬ್ಬನೆ ಅಲ್ಲ ಆತನಜೊತೆ ಆತ್ಮ ಸಹ ಇಳಿದುಹೋಗುತ್ತದೆ. ನಿನ್ನಜೊತೆ ಜೀವಯಾತ್ರೆ ಪ್ರಾರಂಭಿಸಿ ನಿನ್ನಜೊತೆ ಗಮ್ಯದಲ್ಲಿ ಇಳಿದುಹೋಗುವವನು ಆತ್ಮ ಒಬ್ಬನೇ. ಈ ವಿಷಯವನ್ನು ಭಗವದ್ಗೀತೆ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 8ನೇ ಶ್ಲೋಕದಲ್ಲಿ ಹೇಳಲಾಗಿದೆ.

ನಿನ್ನ ಗುರಿಯಲ್ಲಿ ನಿನ್ನಜೊತೆ ಪ್ರಯಾಣಿಸುವ ಇಬ್ಬರಲ್ಲಿ ಒಬ್ಬರು ಮಾತ್ರ ಇಳಿದುಹೋಗುತ್ತಾರೆ. ಪರಮಾತ್ಮ ಆತ್ಮಗಿಂತ ಬೇರೆಯಾಗಿದ್ದಾನೆ ಆದ್ದರಿಂದ ಪರಮಾತ್ಮ ಹಾಗೇ ಶರೀರದಲ್ಲಿ ಇರುತ್ತಾನೆ.

ಸಜೀವಯಾತ್ರೆಯಲ್ಲಿ ಜೀವಿಯು ಸುಖದುಃಖಗಳನ್ನು ಅನುಭವಿಸು ತ್ತಿರುತ್ತಾನೆ. ಆ ಸುಖದುಃಖಗಳ ಅನುಭವಗಳಿಗೆ ಬೇಕಾದ ಕಾರ್ಯಾಚರಣೆಗಳಿಗೆ

ಚೈತನ್ಯಕೊಟ್ಟು ಶರೀರವನ್ನು ಕದಲಿಸುವವನು ಎರಡನೆಯವನಾದ ಆತ್ಮ ಮೂರನೆಯವನಾದ ಪರಮಾತ್ಮನು ಸಾಕ್ಷಿಯಾಗಿ ಎಲ್ಲವನ್ನು ನೋಡುತ್ತಾ ಏನುಮಾಡದೆ ಮೌನವಾಗಿದ್ದಾನೆ. ಜೀವಿಯು ಶರೀರದಲ್ಲಿ ಇರುವಾಗಾಗಲಿ ಮತ್ತು ಇಲ್ಲದಿರುವಾಗಾಗಲಿ ಸ್ಥಿರವಾಗಿರುವವನು ಶಿವನು ಅಥವಾ ಈಶ್ವರನು ಅಥವಾ ಪರಮಾತ್ಮ ಏನು ಅಲ್ಲದ ಈ ಮೂರನೆಯವನನ್ನು ಪರಮಾತ್ಮ ಎನ್ನುವುದರಲ್ಲಿ ಅಂತರಾರ್ಥ ತಿಳಿದುಕೊಂಡಿದ್ದೇವಲ್ಲವೆ! ಹಾಗೆ ಈಶ್ವರನೆಂದು ಏಕೆ ಎನ್ನುತ್ತಿದ್ದೇವೊ ವಿವರವಾಗಿ ತಿಳಿದುಕೊಳ್ಳೋಣ.

ಅಧಿಪತಿ ಎಂದರೆ ಮೀರಿವನು, ದೊಡ್ಡವನು ಎಂದು ಉತ್ತಮನೆಂದು ಅರ್ಥವಾಗುತ್ತಿದೆ. ಹಾಗೆ ಲಕ್ಷಾಧಿಪತಿ ಅಂದರೆ ಲಕ್ಷಕ್ಕೆ ಅಧಿಪತಿ ಎಂದು, ಲಕ್ಷಕ್ಕೆ ಮೀರಿದವನೆಂದು, ಲಕ್ಷ ಇರುವವನೆಂದು ಅರ್ಥವಾಗುತ್ತದೆ. ಆ ವಿಧವಾಗಿ ಲಕ್ಷಾಧೀಶ್ವರನು, ಕೋಟೀಶ್ವರನು ಎನ್ನುವುದರಲ್ಲಿ ಲಕ್ಷಕ್ಕು ಕೋಟಿಗು, ಅಧಿಪತಿ ಎಂದು ಅವುಗಳಿಗಿಂತ ದೊಡ್ಡವನೆಂದು ತಿಳಿಯುತ್ತಿದೆ. ಈ ಪ್ರಪಂಚದಲ್ಲಿ ಲಕ್ಷ, ಕೋಟಿ, ಅದು, ಇದು ಎನ್ನದಂತೆ ಎಲ್ಲವುದಕ್ಕೂ, ಸಮಸ್ತಕ್ಕೂ ಅಧಿಪತಿಯಾದವನು 'ಪರಮಾತ್ಮ' ಒಬ್ಬನೇ. ಆದ್ದರಿಂದ ಇಂಥದಕ್ಕೆ ಈಶ್ವರ ಅನ್ನದಂತೆ ಒಟ್ಟಾರೆ ಏಕೈಕ ಪದವಾಗಿ ಈಶ್ವರ ಎನ್ನುವುದು ನಡೆದಿದೆ. ಎಲ್ಲಿಯೂ ಗುರುತಿಸಲಾಗದಿರುವುದನ್ನು, ಎಲ್ಲಕಡೆ ಇರುವುದನ್ನು, ಯಾವುದಕ್ಕು ತಿಳಿಯದಿರುವುದನ್ನು, ಬದುಕಿರುವವನಿಗು ಜ್ಞಾನಿಗಳಿಗೂ, ಯೋಗಿಗಳಿಗೂ ಸಹ ತಿಳಿಯದಿರುವುದು, ಅಗಮ್ಯಗೋಚರವಾದುದು ಆದ್ದರಿಂದ ಅದಕ್ಕೆ 'ಶಿವ' ಎಂದು ಹೆಸರಿಡಲಾಗಿದೆ. "ಶಿವಂ" ಅಂದರೆ ತಿಳಿಯದಿರುವುದೆಂದು ಅರ್ಥ. ಜ್ಞಾನಿಗಳಿಗೂ ಯೋಗಿಗಳಿಗೂ 'ಶಿವ' ಎನ್ನುವುದು ಒಂದಿದೆ ಎಂದು ತಿಳಿದಿದೆ. ಅದು ಏನು ಎಂದು ಮಾತ್ರ ತಿಳಿದಿಲ್ಲ. ಜೀವಿಯು ಜ್ಞಾನಯೋಗದಿಂದ ಶರೀರದಲ್ಲಿರುವ ಆತ್ಮವನ್ನು ತಿಳಿಯಬಹುದಾಗಲಿ 'ಶಿವವನ್ನು' ಮಾತ್ರ ತಿಳಿಯಲಾರನು. ಕರ್ಮ ಮುಗಿದು ಹೋದ ನಂತರ ಜನ್ಮವಿಲ್ಲದ ಸ್ಥಿತಿಯನ್ನು ಸೇರುವ ಯೋಗಿಗಳು ಶಿವನಲ್ಲಿ ಐಕ್ಯವಾಗಿ ಹೋಗುತ್ತಾರೆ. ಅದೇನೋ ಆಗಲೇ ತಿಳಿಯುತ್ತದೆ ಆದರೆ ಮೊದಲು ತಿಳಿಯುವುದಿಲ್ಲ.

ಶರೀರದಲ್ಲಿ ಜೀವಯಾತ್ರೆಯಲ್ಲಿ ಮರಣವೆಂಬ 'ಗಮ್ಯ'ದಲ್ಲಿ ಆತ್ಮ ಜೀವಾತ್ಮಗಳು ಶರೀರದಿಂದ ನಿಷ್ಕ್ರಮಿಸಿದಾಗ ಕೊನೆಗೆ ಶರೀರದಲ್ಲಿ ಉಳಿದುಹೋಗುವುದು 'ಶಿವ'. ಬದುಕಿರುವಾಗ ನೀಚವಾದ ಗುಣಗಳಿಂದ ಸಂಬಂಧವಿರುವ 'ಜೀವಿಯು' ಶರೀರದಲ್ಲಿ ಇಲ್ಲ. ಯಾವ ನೀಚ ಭಾವಗಳು ಅದರಲ್ಲಿ ಇಲ್ಲ. ಆಗ ಅದು ಶುದ್ಧ 'ಶಿವ' ನಿಲಯ. ಅದರಲ್ಲಿ ಪರಮಾತ್ಮ ಹೊರತು ಮತ್ತ್ಯಾರು ಇಲ್ಲ. ಆದ್ದರಿಂದ ಆ ವಿಷಯ ತಿಳಿದ ಜ್ಞಾನಿಗಳು ಯೋಗಿಗಳು ಒಬ್ಬ ವ್ಯಕ್ತಿ ಮರಣಿಸಿದರೆ ಆ ಮೃತ ಶರೀರಗಳಿಗೆ ಅಂತ್ಯಕ್ರಿಯಗಳಿಗೆ ಮೊದಲು ಮೃತ ದೇಹವನ್ನು ಪೂರ್ತಿ ಭಕ್ತಿಯಿಂದ ಪೂಜಿಸುತ್ತಿದ್ದರು. ದೈವಸಂಬಂಧಗಳಾದ ವಿಭೂತಿನಾಮಗಳಿಂದ ಅಲಂಕರಿಸಿ ಗೋವಿಂದ ನಾಮಸ್ಮರಣೆಯಿಂದ ಪೂಜಿಸಿ ಎಲ್ಲರನ್ನು ಮುಗಿಯುವಂತೆ ಹೇಳುತ್ತಿದ್ದರು. ಅಂತಹ ಸಾಂಪ್ರದಾಯ ಈಗಲೂ ಇದ್ದರೂ ಅದು ಅರ್ಥ ತಿಳಿಯದ ಆಚಾರವಾಗಿದೆ.  ಈಗ ಮುಗಿಯುವವರು ಭಕ್ತಿಯಿಂದಲ್ಲದೆ ಭಯದಿಂದ ಮುಗಿಯುತ್ತಿದ್ದಾರೆ. ಒಂದುವೇಳೆ ಮುಗಿಯದ ಪಕ್ಷದಲ್ಲಿ ಮರಣಿಸಿದವರು ಮತ್ತೆ ದೆವ್ವವಾಗಿ ಬರುತ್ತಾರೆಂದು, ಅವರ ಪೀಡೆ ಮನೆ ಸುತ್ತಾ ಇರುತ್ತದೆಂದು, ಮುಗಿದರೆ ಅವರ ಪೀಡೆ ಅಷ್ಟಕ್ಕೆ ಹೋಗುತ್ತದೆ ಎಂದು  ಮುಗಿಯುತ್ತಿದ್ದಾರೆ.

ಪೂರ್ವದಲ್ಲಿ ಹಾಗೆ ಮಾಡಲಿಲ್ಲ. ಅವರು ಪ್ರತಿಕೆಲಸ ಅರ್ಥ ತಿಳಿದು ಮಾಡುತ್ತಿದ್ದರು. ಜೀವಿಯು ಹೋದ ನಂತರ ಕೊನೆಗೆ ಉಳಿದಿರುವುದು 'ಶಿವ' ಎಂದು ಅವರಿಗೆ ತಿಳಿದಿತ್ತು. ಆದ್ದರಿಂದ ಮರಣಿಸಲ್ಪಟ್ಟ ಶರೀರವನ್ನು (ಮೃತದೇಹವನ್ನು) ಶಿವ ಎಂದು ಕರೆಯುತ್ತಿದ್ದರು. ಕಾಲಕ್ರಮೇಣ ಭಾವ ಹೋಗಿದೆ. ಕೊನೆಗೆ **'ಶಿವ' ಅನ್ನುವ ಪದ 'ಶವ'** ಆಗಿದೆ. 'ಶಿವ' ಶವ ಆದರೂ ಪೂರ್ವದಿಂದ ಇರುವ ಪೂಜೆಗಳು ಮೊದಲಾದ ಆಚರಣೆಗಳು ಹಾಗೆಯೇ ಇವೆ. ಆದ್ದರಿಂದ ಅದರ ನಿಜವಾದ ಅರ್ಥ ಈ ದಿನ ಮಾಸಿಹೋಗಿದೆ ಎಂದು ತಿಳಿಯುತ್ತಿದೆ.

ಕರ್ಮ ಸಶೇಷವಾಗಿ ಮುಗಿದುಹೋದ ಯೋಗಿಗಳು ಮರುಜನ್ಮಕ್ಕೆ ಹೋಗದೆ ಮೂರನೆ ಪುರುಷನಾದ ಪರಮಾತ್ಮದೊಳಗೆ ಐಕ್ಯವಾಗಿ ಹೋಗುತ್ತಾರೆ.

ಅಂಥವರು ಮರಣಿಸುವ ಸಮಯದಲ್ಲಿ ತಮ್ಮ ಶರೀರವನ್ನು ಬಿಟ್ಟುಹೋಗುವುದಿಲ್ಲ. ಶರೀರದಲ್ಲಿಯೇ ಇರುವ ಶಿವದೊಳಗೆ ಐಕ್ಯವಾಗಿಹೋಗುತ್ತಾರೆ. ಅಂಥವರಶರೀರವನ್ನು ಕೊನೆಯ ದಿನಗಳಲ್ಲಿ ಪೂಜೆಮಾಡುವುದಲ್ಲದೆ ಸಮಾಧಿಯಲ್ಲಿಟ್ಟು ಚಿರಕಾಲ ಪೂಜೆಗಳು ಮಾಡುವುದು ಸಹ ದೊಡ್ಡವರ ನಿರ್ಣಯವೇ. ಹಾಗೆ ಮಾಡುವುದರಿಂದ ಸಾಕ್ಷಾತ್ ಪರಮಾತ್ಮನನ್ನೇ ಆರಾಧಿಸಿದಷ್ಟು ಫಲಿತ ಇರುತ್ತದೆಂದು ಅವರಿಗೆ ತಿಳಿದಿದೆ.

ಶವದ ವಿಷಯದಲ್ಲಿ ಈಗ ನಾವು ಸ್ವಲ್ಪ ತಿಳಿದುಕೊಳ್ಳೋಣ. ಅದು ಶವವಲ್ಲ ಶಿವ ಎಂದು ನಿಜವಾಗಲು ತಿಳಿದಿದೆ. ಆದ್ದರಿಂದ ಶವವನ್ನು ಶುಭ ಸೂಚಕವಾಗಿ ಭಾವಿಸಬೇಕು. ಎಲ್ಲರಂತೆ ಪೀಡೆ, ಪಿಶಾಚಿ, ಅಂದುಕೊಳ್ಳ ಬಾರದು. ಯಾವ ಪೂಜೆ ವಿಧಾನದಲ್ಲಿ ಪಾಲ್ಗೊಳ್ಳದೆ ಹೋದರು ಪರವಾಗಿಲ್ಲ. ಶವವನ್ನು 'ಶಿವವಾಗಿ' ನೋಡಿರಿ. ಅಂತ್ಯಕ್ರಿಯೆಗಳು ಮಾಡಲಾರದವರಿಗೆ ಸಹಾಯವಾಗಿರಿ. ಮುಸ್ಲಿಮ್ ಮತದಲ್ಲಿ ಏನು ತಿಳಿಯದವರಾದರೂ ಶವವನ್ನು ನೋಡುತ್ತಲೇ ಕೆಲಸಗಳೆಲ್ಲ ಬಿಟ್ಟು ಹೋಗಿ ಪೋಟಿಬಿದ್ದು ಶವಪೆಟ್ಟಿಗೆಯನ್ನು ಹೊರುವುದು ನೋಡಿರುತ್ತೀರಾ. ಅದೇ ಕ್ರಿಶ್ಚಿಯನ್ ಮತದಲ್ಲಿ ಆದರೆ ಮತ ಗುರುವು ಬೈಬಲ್ ಓದುತ್ತಾ ಭಕ್ತಿಯಿಂದ ಅಂತ್ಯಕ್ರಿಯಗಳು ಮಾಡುವುದು ನೋಡುತ್ತಲೇ ಇದ್ದೇವೆ. ಎಲ್ಲದಕ್ಕಿಂತ ಮೊದಲು ಹುಟ್ಟಿದ ಹಿಂದೂಮತದಲ್ಲಿ ನಾಮಮಾತ್ರದ ಆಚಾರಗಳಿಂದ ಮನೆಯವರೆ ಇಷ್ಟವಿಲ್ಲದಿದ್ದರೂ ಮೃತದೇಹಕ್ಕೆ ಸ್ನಾನ ಮಾಡಿಸಿ ಬೊಟ್ಟು ಇಟ್ಟು ಕಳುಹಿಸುತ್ತಿದ್ದಾರೆ. ಭಕ್ತಿ ಜ್ಞಾನ ಸವೆದುಹೋಗುತ್ತಿದೆ. ಅರ್ಥ ತಿಳಿಯದ ಆಚಾರದಿಂದ ಪೂಜೆಮಾಡುತ್ತಾ 'ಶಿವವನ್ನು' ಶವ ಎನ್ನುತ್ತಿರುವವರೆಲ್ಲರೂ, ಶವವನ್ನು ಶಿವವಾಗಿ ನೋಡಿ ನಿಜವಾದ ಭಕ್ತಿಯಿಂದ ಮರಣಿಸಿದವನಿಗೆ ಅಲ್ಲ, ಅವನಲ್ಲಿರುವ ದೇವರಿಗೆ ಎಂಬ ಭಾವದಿಂದ ಪೂಜೆ ಮಾಡಿ ಅಂತ್ಯಕ್ರಿಯೆಗಳು ಮಾಡಬೇಕು. ಮರಣಿಸಿದವರು ಯೋಗಿ ಆದರೆ ಅಂತಹ ಶರೀರ ಸಿಗುವುದೇ ಅದೃಷ್ಟವೆಂದುಕೊಂಡು, ಪ್ರತ್ಯೇಕವಾದ ಕಡೆ ಸಮಾಧಿ ಮಾಡಿ, ನಿತ್ಯಪೂಜೆಗಳು ಮಾಡುವುದು ಬಹಳ ಒಳ್ಳೆಯದು. ಅಂತಹ ಶರೀರ

ಸಮಾಧಿ ದೈವಶಕ್ತಿ ನಿಲಯವಾಗಿರುತ್ತದೆ. ಆ ಸಮಾಧಿಗೆ ಪೂಜಿಸಿಕೊಳ್ಳುವವರ ಕರ್ಮಗಳು ಸುಟ್ಟುಹೋಗುತ್ತಿರುತ್ತವೆ.

# ಪ್ರಾಣಾಯಾಮ

ಜೀವಿಗಳ ಶರೀರದಲ್ಲಿ ಐದು ವಾಯುಗಳಿವೆ. ಅವುಗಳನ್ನು ಪಂಚ ಪ್ರಾಣಗಳೆಂದು ಎನ್ನುತ್ತಾರೆ. ಈ ಐದು ವಾಯುಗಳಿಗೂ ಐದು ಉಪವಾಯುಗಳು ಇವೆ. ಅವು ಈ ಐದು ವಾಯುಗಳಲ್ಲೇ ಒಳಗೊಂಡಿರುತ್ತವೆ. ಪಂಚ ಪ್ರಾಣಗಳೆಂದು ಹೆಸರುವಾಸಿಯಾದ ಈ ಐದು ವಾಯುವುಗಳು ಒಂದಾಗುವುದನ್ನು "ಪ್ರಾಣಾಯಾಮ" ಎಂದು ಅನ್ನುತ್ತಾರೆ. ಪ್ರಾಣಾಯಾಮ ಎರಡು ವಿಧಗಳಾಗಿ ಇದೆ. ಆ ಎರಡು ವಿಧಗಳು ಹೇಗೆ ಇವೆ ಎಂದರೆ! ಜೀವಿಗಳು ಶ್ವಾಸವನ್ನು ತೆಗೆದುಕೊಳ್ಳುವುದನ್ನು ಪೂರಕ (ಉಚ್ಛ್ವಾಸ) ವೆಂದು ಶ್ವಾಸವನ್ನು ಹೊರಗೆ ಬಿಡುವುದನ್ನು ರೇಚಕ (ನಿಚ್ಛ್ವಾಸ) ಎಂದೂ, ಒಳಗೆ ತೆಗೆದುಕೊಂಡ ಶ್ವಾಸವನ್ನು ಹೊರಗೆ ಬಿಡದಂತೆ ಒಳಗೆ ಬಂಧಿಸುವುದನ್ನು ಕುಂಭಕ ಎಂದು ಅನ್ನುತ್ತಾರೆ. ಕುಂಭಕದ ಮೂಲಕ ಶ್ವಾಸವನ್ನು ಬಂಧಿಸಿ ಒಳಗಿರುವ ವಾಯುವುಗಳೆಲ್ಲವನ್ನು ಏಕ ಮಾಡುವುದು ಒಂದು ವಿಧ ಪ್ರಾಣಾಯಾಮ. ಜೀವಿಯು ಕುಂಭಿಸಿ ಶ್ವಾಸವನ್ನು ನಿಲ್ಲಿಸದೆ ಯೋಗದಿಂದ ಶ್ವಾಸ ತನ್ನಷ್ಟಕ್ಕೆ ತಾನು ನಿಂತುಹೋಗಿ ಒಳಗಿರುವ ವಾಯುಗಳೆಲ್ಲವೂ ಏಕವಾಗುವುದನ್ನು ಮತ್ತೊಂದು ವಿಧ ಪ್ರಾಣಾಯಾಮ. ಈ ಎರಡು ವಿಧಗಳಲ್ಲಿ ಏನು ನಡೆದರು ಅದನ್ನು ಪ್ರಾಣಾಯಾಮ ಎಂದೇ ಅನ್ನುತ್ತಾರೆ. ಎರಡು ವಿಧಗಳ ಪ್ರಾಣಾಯಾಮಗಳಲ್ಲಿ ಕುಂಭಿಸಿ ಶ್ವಾಸವನ್ನು ನಿಲ್ಲಿಸುವ ಪದ್ಧತಿ ಬಹಳ ಕಷ್ಟವಾದುದು, ಮತ್ತು ಪ್ರಾಣಾಪಾಯಕರವಾದುದು. ಎರಡನೇ ಪದ್ಧತಿ ಕಷ್ಟ ಇಲ್ಲದಿರುವುದು, ಮತ್ತು ಪ್ರಾಣಾಪಾಯಕರ ಇಲ್ಲದಿರುವುದು. ಎರಡು ಪದ್ಧತಿಗಳನ್ನು ಸಂಪೂರ್ಣವಾಗಿ ತಿಳಿದುಕೊಳ್ಳೋಣ.

ಪ್ರತಿ ಮಾನವನ ಶರೀರದಲ್ಲಿ ಬ್ರಹ್ಮನಾಡಿ ಇದೆ. ಅದನ್ನೇ ಬೆನ್ನೆಲುಬಿನ (ಬೆನ್ನಾವು) ಎಂದು ಅನ್ನುತ್ತಾರೆ. ಬ್ರಹ್ಮನಾಡಿ ಮೆದುಳಿನಿಂದ ಪ್ರಾರಂಭವಾಗಿ ಬೆನ್ನಿನಲ್ಲಿರುವ ಬೆನ್ನುಮೂಳೆಯ ಮೂಖಾಂತರ ಗುದಸ್ಥಾನದ ವರೆಗೂ ವ್ಯಾಪಿಸಿದೆ. ಮೆದುಳಿನಿಂದ ಕೆಳಗಿನವರೆಗು ವ್ಯಾಪಿಸಿರುವ ಬ್ರಹ್ಮನಾಡಿಯಲ್ಲಿ ಮುಖ್ಯವಾದ ನರಾಶಯ ಕೇಂದ್ರಗಳು ಏಳು ಇವೆ. ಈ ನರಾಶಯ ಕೇಂದ್ರಗಳನ್ನೇ ಸಪ್ತಸ್ಥಾನಗಳೆಂದು, ಸಪ್ತಚಕ್ರಗಳೆಂದೂ, ಸಪ್ತ ಕಮಲಗಳೆಂದು ಯೋಗಿಗಳು ಎನ್ನುತ್ತಿದ್ದಾರೆ. ಈ ನರಾಶಯ ಕೇಂದ್ರಗಳೇ ಮಾನವನನ್ನು ಚಲಿಸುವಂತೆ ಎಲ್ಲಾ ಕೆಲಸಗಳು ಮಾಡುವಂತೆ ಮಾಡುತ್ತಿವೆ. ಮತ್ತು ಶರೀರದೊಳಗಿರುವ ಅವಯವಗಳನ್ನು, ಹೊರಗಿರುವ ಅವಯವಗಳನ್ನು ಕೆಲಸ ಮಾಡುವಂತೆ ಮಾಡುತ್ತಿವೆ. ಈ ನರಾಶಯ ಕೇಂದ್ರಗಳಿಂದ ಹೊರಟ ನರಗಳೇ ಉಸಿರಾಟಚೀಲಗಳನ್ನು ಸಂಕುಚಿಸುವಂತೆ ವಿಕಸಿಸುವಂತೆ ಮಾಡುತ್ತಿವೆ. ಉಸಿರಾಟಚೀಲಗಳು ಸಂಕುಚಿಸಿದಾಗ ಶ್ವಾಸ ಹೊರಗೆ ಹೋಗುತ್ತಿದೆ ಅದನ್ನೇ ನಿಚ್ಛ್ವಾಸ ಎಂದು ಎನ್ನುತ್ತಾರೆ. ಉಸಿರಾಟಚೀಲಗಳು ತೆರೆದುಕೊಂಡಾಗ ಶ್ವಾಸ ಒಳಗೆ ಪ್ರವೇಶಿಸುತ್ತಿದೆ. ಅದನ್ನೇ ಉಚ್ಛ್ವಾಸ ಎಂದು ಅನ್ನುತ್ತಿದ್ದಾರೆ. ಬ್ರಹ್ಮನಾಡಿಯಲ್ಲಿರುವ ನರಾಶಯ ಕೇಂದ್ರಗಳೇ ತಮ್ಮಿಂದ ಹೊರಟುಬಂದ ನರಗಳಿಂದ ಉಸಿರಾಟಚೀಲಗಳನ್ನು ಆಡಿಸುತ್ತಾ, ಜೀವಿಗೆ ಉಚ್ಛ್ವಾಸ ನಿಚ್ಛ್ವಾಸಗಳು ನಡೆಯುವಂತೆ ಮಾಡುತ್ತಿವೆ. ಜೀವಿಗೆ ಶ್ವಾಸ ಒಳಗೆಹೋಗಿ ಹೊರಗೆ ಬಂದರೆ ಒಂದು ಶ್ವಾಸ ಕಳೆದಂತಾಗುತ್ತಿದೆ. ಶ್ವಾಸವನ್ನೆ ಹಂಸ ಎಂದುಸಹ ಅನ್ನುತ್ತಾರೆ. ಹೀಗೆ ದಿನಕ್ಕೆ 21,600 ಶ್ವಾಸಗಳು ಜೀವಿಗೆ ಕಳೆಯುತ್ತಿರುತ್ತದೆ. ಈ 21,600 ಶ್ವಾಸಗಳು ಕಳೆಯುವಂತೆ ಬ್ರಹ್ಮನಾಡಿಯಲ್ಲಿರುವ ಕೇಂದ್ರಗಳೆ ಮಾಡುತ್ತಿವೆ. ಆ ಕೇಂದ್ರಗಳು ಶ್ವಾಸವನ್ನು ಹೇಗೆ ನಡೆಸುತ್ತಿವೆ ಎಂದರೆ! ಬ್ರಹ್ಮನಾಡಿಯಲ್ಲಿ ಏಳು ಕೇಂದ್ರಗಳು ಇವೆಯಲ್ಲವೆ! ಅದರಲ್ಲಿ ಎಲ್ಲವುದಕ್ಕಿಂತ ಕೆಳಗಿರುವ ಕೇಂದ್ರವನ್ನು ಆಧಾರಕಮಲ ಎಂದು ಅನ್ನುತ್ತಿದ್ದಾರೆ. ಈ ಕೇಂದ್ರ ಗುದಸ್ಥಾನಕ್ಕೆ ಸಮಾನವಾಗಿರುವ ಬೆನ್ನುಮೂಳೆಯಲ್ಲಿನ ಬ್ರಹ್ಮನಾಡಿಯಲ್ಲಿ ಇದೆ. ಆದ್ದರಿಂದ **ಆಧಾರಕಮಲ (ಆಧಾರಚಕ್ರ)** ಗುದಸ್ಥಾನದ ಹತ್ತಿರ ಇದೆಯೆಂದು ಹಿರಿಯರು ಎನ್ನುತ್ತಿದ್ದಾರೆ. ಈ ಆಧಾರಚಕ್ರವೆನ್ನುವ

ನರಾಶಯ ಕೇಂದ್ರದಿಂದ ಹೊರಬಿದ್ದ ಕೆಲವು ನರಗಳು ಪಕ್ಕದಲ್ಲಿರುವ ಸೂರ್ಯಚಂದ್ರನಾಡಿಗಳೊಂದಿಗೆ ಸೇರಿ ಉಸಿರಾಟ ಚೀಲಗಳಿಗೆ ಹೋಗಿ ಇರುತ್ತದೆ. ಸೂರ್ಯಚಂದ್ರನಾಡಿಗಳೆನ್ನುವವು ಬ್ರಹ್ಮನಾಡಿಗೆ ಎರಡು ಕಡೆ ಎರಡು ಇವೆ. ಬ್ರಹ್ಮನಾಡಿಗೆ ಬಲಗಡೆ ಇರುವ ನಾಡಿಯನ್ನು ಸೂರ್ಯನಾಡಿ ಎಂದೂ, ಎಡಗಡೆ ಇರುವ ನಾಡಿಯನ್ನು ಚಂದ್ರನಾಡಿ ಎಂದೂ, ಹಿರಿಯರು ಹೇಳುತ್ತಿರುತ್ತಾರೆ. ಇವುಗಳನ್ನೇ ಇಡ, ಪಿಂಗಳ ನಾಡಿಗಳು ಎಂದುಸಹ ಅನ್ನುತ್ತಿದ್ದಾರೆ. ಇವುಗಳನ್ನೇ ಡಾಕ್ಟರ್ಸ್ ಸಿಂಪತೆಟಿಕ್ ಸರಗಳು (Sympathetic chains) ಎಂದು ಸಹ ಅನ್ನುತ್ತಿದ್ದಾರೆ. ಕೊನೆಯದಾಗಿರುವ ಆಧಾರ ನರಾಶಯ ಕೇಂದ್ರ ತನ್ನ ನರಗಳ ಮೂಲಕ ಉಸಿರಾಟಚೀಲಗಳನ್ನು ಸೂರ್ಯೋದಯದಿಂದ ಪ್ರಾರಂಭಿಸಿ 600 ಶ್ವಾಸಗಳು ಕಳೆಯುವವರೆಗೂ ನಡೆಸುತ್ತದೆ. 600 ಶ್ವಾಸಗಳು ಕಳೆದ ತಕ್ಷಣ ತನ್ನ ಕೆಲಸವನ್ನು ಸಾಕುಮಾಡುತ್ತದೆ. ಆ ನಂತರ ಎರಡನೆ ನರಾಶಯ ಕೇಂದ್ರವಿದೆಯಲ್ಲ! ಆ ಎರಡನೆಯದರ ಹೆಸರು **ಸ್ವಾಧಿಷ್ಠಾನ ಪದ್ಮ (ಸ್ವಾಧಿಷ್ಠಾನ ಚಕ್ರ)** ಎಂದು ಅನ್ನುತ್ತಿದ್ದಾರೆ. ಈ ಕೇಂದ್ರ ಸ್ತ್ರೀಯರಿಗೆ ಯೋನಿ ಸ್ಥಾನಕ್ಕೆ ಸರಿಯಾಗಿ, ಪುರುಷರಿಗೆ ಲಿಂಗಸ್ಥಾನಕ್ಕೆ ಸಮಾನವಾಗಿರುವ ಬೆನ್ನುಮೂಳೆಯಲ್ಲಿನ ಬ್ರಹ್ಮನಾಡಿಯಲ್ಲಿ ಇದೆ. ಆದ್ದರಿಂದ ಸ್ವಾಧಿಷ್ಠಾನಚಕ್ರ ಲಿಂಗಸ್ಥಾನದ ಹತ್ತಿರ ಇದೆ ಅನ್ನುತ್ತಿದ್ದಾರೆ. ಈ ಸ್ವಾಧಿಷ್ಠಾನ ಚಕ್ರವೆನ್ನುವ ನರಾಶಯ ಕೇಂದ್ರದಿಂದ ಹೊರಟ ಕೆಲವು ನರಗಳು ಪ್ರಕ್ಕದಲ್ಲಿರುವ ಸೂರ್ಯಚಂದ್ರ ನಾಡಿಗಳಜೊತೆ ಸೇರಿ ಉಸಿರಾಟಚೀಲಗಳಿಗೆ ಹೋಗಿರುತ್ತದೆ. ಎರಡನೇ ಕೇಂದ್ರವಾದ ಈ ಸ್ವಾಧಿಷ್ಠಾನ ಕೇಂದ್ರ ತನ್ನ ನರಗಳ ಮೂಲಕ ಉಸಿರಾಟಚೀಲಗಳನ್ನು ಮೊದಲ ಕೇಂದ್ರ ಕೆಲಸ ಸಾಕುಮಾಡಿದ ಮೊದಲಿನ 6000 ಶ್ವಾಸಗಳು ಕಳೆಯುವವರೆಗೂ ನಡೆಸುತ್ತಿರುತ್ತದೆ. 6000 ಶ್ವಾಸಗಳು ಮುಗಿದುಹೋದ ತಕ್ಷಣ ತನ್ನ ಕೆಲಸವನ್ನು ವಿರಮಿಸಿಕೊಳ್ಳುತ್ತದೆ. ಆ ನಂತರ ಮೂರನೇ ನರಾಶಯ ಕೇಂದ್ರವಿದೆಯಲ್ಲ! ಆ ಕೇಂದ್ರದ ಹೆಸರು ಮಣಿಪೂರಕ ಪದ್ಮ (ಮಣಿಪೂರಕ ಚಕ್ರ) ಎಂದು ಅನ್ನುತ್ತಾರೆ. ಈ ಕೇಂದ್ರವು ನಾಭಿ (ಹೊಕ್ಕಳಿ)ಗೆ ಸಮಾನವಾಗಿರುವ ಬೆನ್ನುಮೂಳೆಯಲ್ಲಿನ ಬ್ರಹ್ಮನಾಡಿಯಲ್ಲಿ ಇದೆ. ಆದ್ದರಿಂದ

ಮಣಿಪೂರಕ ಚಕ್ರವು ನಾಭಿ ಸ್ಥಾನದ ಹತ್ತಿರವಿದೆ ಎಂದು ಅನ್ನುತ್ತಿದ್ದಾರೆ. ಈ ಮಣಿಪೂರಕ ಪದ್ಮವೆಂಬ ನರಾಶಯ ಕೇಂದ್ರದಿಂದ ಪ್ರಾರಂಭವಾದ ನರಗಳು ಕೆಲವು ಪಕ್ಕದಲ್ಲಿರುವ ಸೂರ್ಯ ಚಂದ್ರನಾಡಿಗಳಜೊತೆ ಸೇರಿ ಉಸಿರಾಟಚೀಲ ಗಳಿಗೆ ಹೋಗಿರುತ್ತದೆ. ಮಣಿಪೂರಕ ನರಕೇಂದ್ರ ತನ್ನ ನರಗಳ ಮೂಲಕ ಉಸಿರಾಟಚೀಲಗಳನ್ನು ಎರಡನೆ ಕೇಂದ್ರ ತನ್ನ ಕೆಲಸವನ್ನು ಸಾಕುಮಾಡಿಕೊಂಡ ಮೊದಲು 6000 ಶ್ವಾಸಗಳು ಮುಗಿದುಹೋಗುವವರೆಗೂ ನಡೆಸುತ್ತಿರುತ್ತದೆ. 6000 ಶ್ವಾಸಗಳು ಮುಗಿದುಹೋದ ತಕ್ಷಣ ತನ್ನ ಕೆಲಸವನ್ನು ಸಾಕುಮಾಡುತ್ತದೆ. ಆ ನಂತರ ನಾಲ್ಕನೇ ನರಾಶಯ ಕೇಂದ್ರವಿದೆಯಲ್ಲ! ಆ ನಾಲ್ಕನೆಯ ನರಾಶಯ ಕೇಂದ್ರದ ಹೆಸರು **ಅನಾಹತ ನರಾಶಯ ಕೇಂದ್ರ ಅಥವಾ ಅನಾಹತ ಪದ್ಮ (ಅನಾಹತ ಚಕ್ರ)** ಎಂದು ಅನ್ನುತ್ತಿದ್ದಾರೆ. ಈ ಕೇಂದ್ರ ಹೃದಯಕ್ಕೆ ಸರಿಯಾಗಿರುವ ಬೆನ್ನುಮೂಳೆಯಲ್ಲಿನ ಬ್ರಹ್ಮನಾಡಿಯಲ್ಲಿ ಇದೆಯೆಂದು ಅನ್ನುತ್ತಿದ್ದಾರೆ. ನಾಲ್ಕನೆ ಚಕ್ರವಾದ ಅನಾಹತ ಕೇಂದ್ರದಿಂದ ಹೊರಟ ಕೆಲವು ನರಗಳು ಪಕ್ಕದಲ್ಲಿರುವ ಸೂರ್ಯಚಂದ್ರನಾಡಿಗಳಜೊತೆ ಸೇರಿ ಉಸಿರಾಟಚೀಲ ಗಳಿಗೆ ಹೋಗಿರುತ್ತವೆ. ಅನಾಹತ ನರಕೇಂದ್ರ ತನ್ನ ನರಗಳ ಮೂಲಕ ಊಸಿರಾಟಚೀಲಗಳನ್ನು ಮೂರನೆ ಕೇಂದ್ರ ತನ್ನ ಕೆಲಸವನ್ನು ಸಾಕುಮಾಡಿಕೊಂಡ ಮೊದಲು 6000 ಶ್ವಾಸಗಳು ಮುಗಿದುಹೋಗುವವರೆಗೂ ನಡೆಸುತ್ತಿರುತ್ತದೆ. 6000 ಶ್ವಾಸಗಳು ಮುಗಿದುಹೋದ ತಕ್ಷಣ ತನ್ನ ಕೆಲಸವನ್ನು ವಿರಮಿಸಿಕೊಳ್ಳುತ್ತದೆ. ಆ ನಂತರ ಐದನೆ ನರಶಾಯ ಕೇಂದ್ರವಿದೆಯಲ್ಲ! ಆ ಐದನೆ ನರಾಶಯ ಕೇಂದ್ರದ ಹೆಸರು **ವಿಶುದ್ಧಪದ್ಮ (ವಿಶುದ್ಧಚಕ್ರ)** ಎಂದು ಅನ್ನುತ್ತಿದ್ದಾರೆ. ಈ ಕೇಂದ್ರ ಕಂಠಸ್ಥಾನಕ್ಕೆ ಸರಿಯಾಗಿರುವ ಬೆನ್ನುಮೂಳೆಯಲ್ಲಿನ ಬ್ರಹ್ಮನಾಡಿಯಲ್ಲಿ ಇದೆ. ವಿಶುದ್ಧ ಚಕ್ರದಿಂದ ಹೊರಟ ಕೆಲವು ನರಗಳು ಪಕ್ಕದಲ್ಲಿರುವ ಸೂರ್ಯ ಚಂದ್ರನಾಡಿಜೊತೆ ಸೇರಿ ಉಸಿರಾಟಚೀಲಗಳಿಗೆ ಹೋಗಿರುತ್ತದೆ. ವಿಶುದ್ಧ ನರಕೇಂದ್ರ ತನ್ನ ನರಗಳಿಂದ ಉಸಿರಾಟಚೀಲಗಳನ್ನು ನಾಲ್ಕನೆಕೇಂದ್ರದ ಕೆಲಸವನ್ನು ಸಾಕುಮಾಡಿಕೊಂಡ ಮೊದಲು 1000 ಶ್ವಾಸಗಳು ಮುಗಿದುಹೋಗುವವರೆಗೂ ನಡೆಸುತ್ತಿರುತ್ತದೆ. 1000 ಶ್ವಾಸಗಳು ಮುಗಿದುಹೋದ ತಕ್ಷಣ ತನ್ನ ಕೆಲಸವನ್ನು ವಿರಮಿಸಿಕೊಳ್ಳುತ್ತದೆ.

ಆ ನಂತರ ಆರನೇ ನರಶಾಯ ಕೇಂದ್ರವಿದೆಯಲ್ಲ! ಆ ಆರನೇ ನರಾಶಯ ಕೇಂದ್ರದ ಹೆಸರು **ಆಗ್ನೇಯ ಪದ್ಮ (ಆಗ್ನೇಯಚಕ್ರ)** ಎಂದು ಅನ್ನುತ್ತಿದ್ದಾರೆ. ಈ ಕೇಂದ್ರ ಕಣ್ಣು ಉಬ್ಬುಗಳ ಮಧ್ಯಕ್ಕೆ ಸರಿಯಾಗಿ (ಭ್ರೂಮಧ್ಯ ಸ್ಥಾನಕ್ಕೆ ಸರಿಯಾಗಿ) ತಲೆಯಲ್ಲಿರುವ ಬ್ರಹ್ನನಾಡಿಯಲ್ಲಿದೆ ಆದ್ದರಿಂದ ಆಗ್ನೇಯಚಕ್ರ ಭ್ರೂಮಧ್ಯ ಸ್ಥಾನದ ಹತ್ತಿರ ಇದೆಯೆಂದು ಅನ್ನುತ್ತಿದ್ದಾರೆ. ಆರನೆ ನರಕೇಂದ್ರವಾದ ಆಗ್ನೇಯಚಕ್ರದಿಂದ ಹೊರಟ ಕೆಲವು ನರಗಳು ಪಕ್ಕದಲ್ಲಿರುವ ಸೂರ್ಯಚಂದ್ರನಾಡಿಗಳಜೊತೆ ಸೇರಿ ಉಸಿರಾಟಚೀಲಗಳನ್ನು ಸೇರಿರುತ್ತದೆ. ಆಗ್ನೇಯ ನರಕೇಂದ್ರ ತನ್ನ ನರಗಳ ಮೂಲಕ ಉಸಿರಾಟ ಚೀಲಗಳನ್ನು ಐದನೆಚಕ್ರದ ಕೆಲಸ ಸಾಕುಮಾಡಿಕೊಂಡಿದೆ. ಮೊದಲು 1000 ಶ್ವಾಸ ಮುಗಿದುಹೋಗುವವರೆಗು ನಡೆಸುತ್ತಿದೆ. 1000 ಶ್ವಾಸಗಳು ಮುಗಿದುಹೋದ ತಕ್ಷಣ ತನ್ನಕೆಲಸವನ್ನು ನಿಲ್ಲಿಸಿಕೊಳ್ಳುತ್ತದೆ. ಆ ನಂತರ ಏಳನೆ ನರಕೇಂದ್ರವಿದೆಯಲ್ಲ! ಆ ಏಳನೇ ನರಕೇಂದ್ರದ ಹೆಸರು **ಸಹಸ್ರಾರ ಪದ್ಮ (ಸಹಸ್ರಾರಚಕ್ರ)** ಅನ್ನುತ್ತಿದ್ದಾರೆ. ಈ ಕೇಂದ್ರ ಶಿರಸ್ಸು ಮಧ್ಯ ಭಾಗದಲ್ಲಿದೆ. ಈ ಕೇಂದ್ರದಿಂದ ಹೊರಟ ಕೆಲವು ನರಗಳು ಪಕ್ಕದಲ್ಲಿರುವ ಸೂರ್ಯ ಚಂದ್ರನಾಡಿಗಳಜೊತೆ ಸೇರಿ ಉಸಿರಾಟಚೀಲಗ ಳನ್ನು ಸೇರುತ್ತಿರುತ್ತವೆ. ಏಳನೆ ನರಕೇಂದ್ರವಾದ ಸಹಸ್ರಾರಪದ್ಮ ತನ್ನ ನರಗಳ ಮೂಲಕ ಉಸಿರಾಟಚೀಲಗಳನ್ನು ಆರನೇ ಕೇಂದ್ರ ಕೆಲಸವನ್ನು ಸಾಕುಮಾಡಿ ಕೊಂಡಿದೆ ಮೊದಲು 1000 ಶ್ವಾಸಗಳು ನಡೆಯುವವರೆಗೂ ನಡೆಸುತ್ತಿರುತ್ತದೆ. 1000 ಶ್ವಾಸಗಳು ಮುಗಿದುಹೋದ ತಕ್ಷಣ ಮತ್ತೆ ಮೊದಲ ಕೇಂದ್ರವಾದ ಆಧಾರಚಕ್ರ ಉಸಿರಾಟಚೀಲಗಳನ್ನು ನಡೆಸುವುದಕ್ಕೆ ಪ್ರಾರಂಭಿಸುತ್ತದೆ. ಅದರ ನಂತರ ಎರಡನೇ ಕೇಂದ್ರ ಉಸಿರಾಟಚೀಲಗಳನ್ನು ನಡೆಸುತ್ತಿರುತ್ತದೆ. ಏಳನೇ ಕೇಂದ್ರವಾದ ತಕ್ಷಣ ಮೊದಲ ಕೇಂದ್ರ ಕೆಲಸ ಪ್ರಾರಂಭಿಸುತ್ತದೆ. ಆದ್ದರಿಂದ ಎಲ್ಲಾ ವೇಳೆಗಳಲ್ಲಿ ಶ್ವಾಸ ನಡೆಯುತ್ತಲೇ ಇದೆ. ಎಲ್ಲಾ ಚಕ್ರಗಳು ಸೇರಿ ಒಟ್ಟು 21,600 ಶ್ವಾಸಗಳನ್ನು ನಡೆಸುತ್ತಿವೆ. ಸೂರ್ಯೋದಯ ಮೊದಲುಗೊಂಡು ಎಲ್ಲಾ ಚಕ್ರಗಳು ಕೆಲಸಮಾಡುವುದಕ್ಕೆ ಮತ್ತೆ ಸೂರ್ಯೋದಯ ಬರುತ್ತಿದೆ. ಆದ್ದರಿಂದ ಒಂದು ದಿನಕ್ಕೆ 21,600 ಶ್ವಾಸಗಳು ನಡೆಯುತ್ತಿವೆ ಎಂದು ತಿಳಿಯುತ್ತಿದೆ.

ಕೆಲವು ಗ್ರಂಥಗಳಲ್ಲಿ ಒಳಗಿರುವ ಚಕ್ರಗಳಿಗೆ ಶ್ವಾಸ ಪ್ರದಕ್ಷಿಣೆಗಳು ಮಾಡಿಬರುತ್ತಿದೆ ಎಂದು ಬರೆದಿದ್ದಾರೆ. ಶ್ವಾಸ ಚಕ್ರಗಳವರೆಗೂ ಹೋಗಿ ಪ್ರದಕ್ಷಿಣೆಗಳು ಮಾಡಿ ಬರುವುದೆಂಬ ಮಾತು ಶುದ್ಧ ಅಸತ್ಯ. ಶ್ವಾಸ ಚಕ್ರಗಳಿಗೆ ಪ್ರದಕ್ಷಿಣೆಗಳು ಮಾಡಿ ಬರುತ್ತಿದೆ ಎಂದು ಡಾಕ್ಟರ್ಸ್ ಕೇಳಿದ ತಕ್ಷಣ ಈ ಮಾತು ಅಸತ್ಯ ಎನ್ನುತ್ತಿದ್ದಾರೆ. ಅದರಿಂದ ಶರೀರ ಪರಿಶೋಧಕರಾದ ಡಾಕ್ಟರ್ಸ್ ಬ್ರಹ್ಮವಿದ್ಯೆ ಎಲ್ಲವನ್ನು ಅಸತ್ಯ ಎಂದುಕೊಳ್ಳುವ ಪರಿಸ್ಥಿತಿ ಏರ್ಪಟ್ಟಿದೆ. ಈ ವಿಷಯದಲ್ಲಿ ಬ್ರಹ್ಮವಿದ್ಯೆಯಲ್ಲಿ ಪೂರ್ತಿ ಪರಿಶೋಧನೆಗಳು ಮಾಡದವರು, ಮೊದಲು ಒಬ್ಬರು ಹೇಳಿದಾಗ ಪರಂಪರೆಯಾಗಿ ಅದೇ ಮಾತನ್ನು ಎಲ್ಲರೂ ಹೇಳುತ್ತಾಹೋಗಿದ್ದಾರೆ, ಆದ್ದರಿಂದ ಶ್ವಾಸ ಎಲ್ಲಿಗೋ ಹೋಗಿ ಬರುತ್ತಿದೆ ಎಂದು ತಿಳಿಸಿದ್ದಾರೆ. ಎಲ್ಲಿಗೋ ಹೋಗಿಬರುವ ಮಾತು ಅಸತ್ಯ. ಶ್ವಾಸ ಉಸಿರಾಟಚೀಲಗಳ ವರೆಗೇ ಹೋಗಿ ಬರುತ್ತಿದೆ ಎಂದು ತಿಳಿದುಕೊಳ್ಳಬೇಕು. ಬ್ರಹ್ಮವಿದ್ಯೆಯಲ್ಲಿ ಯಾವ ಪರಿಶೋಧನೆ ಮಾಡದೆ, ಫಲಿತವನ್ನು ಕಂಡುಹಿಡಿಯದೆ ಹೋದರೂ, ಯಾರೋ ಒಬ್ಬರು ಹೇಳಿದ ಮಾತನ್ನು ಹಿಡಿದುಕೊಂಡು ಎಲ್ಲರೂ ಅದೇ ಮಾತನ್ನು ಹೇಳುತ್ತಾ ಹೋಗುತ್ತಿದ್ದಾರೆ. ಇದು ನಿಜವೆಷ್ಟು? ಸುಳ್ಳೆಷ್ಟು ಎಂದು ಸ್ವಲ್ಪವೂ ವಿಶಧೀಕರಿಸಿ ಕೊಂಡು ಸಾಧನೆ ಮೂಲಕ ತಿಳಿದುಕೊಳ್ಳುತ್ತಿಲ್ಲ. ಅಂಥವರು ಕುಂಡಲಿಶಕ್ತಿ ಹಾವಿನಂತೆ ಇದೆಯೆಂದು, ಅದು ನಿದ್ರೆಹೋಗುತ್ತಿದೆ ಎಂದು, ಸ್ಪ್ರಿಂಗ್‌ಸುತ್ತಿನ ಆಕಾರದಿಂದ ನಾಭಿಸ್ಥಾನದ ಹತ್ತಿರ ಇದೆಯೆಂದು ನಾನಾವಿಧಗಳಾಗಿ ಹೇಳುತ್ತಿದ್ದಾರೆ. ಅವರು ಹೇಳುತ್ತಿರುವುದು ನಿಜವೇನಾ ಎಂದು ಅವರಿಗೆ ತಿಳಿಯದೆ ಹೋದರು ತಿಳಿದವರು ಹೇಳಿದರೆ ಅವರಮಾತು ಕೇಳದೆ ನಿಜವಾಗಲು ನೋಡಿದವರಂತೆ ವಾದಿಸುತ್ತಿದ್ದಾರೆ. ಮಾತುಗಳು ಬಹಳಕಲಿತು ವಾದನೆಗಳಲ್ಲಿ ದೊಡ್ಡವರೆಂದು ಅನಿಸಿಕೊಂಡರೂ, ಎಷ್ಟೋ ಜನರಿಂದ ಅಭಿನಂದನೆಗಳು ಪಡೆದರೂ, ನಿಜ ತಿಳಿಯದೆ ಏನು ಪ್ರಯೋಜನವಿಲ್ಲ. ಪರಮಾತ್ಮ ನಮ್ಮ ವಾದನೆಗಳನ್ನು ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಪ್ರತಿ ವಿಷಯವನ್ನು ನೀವು ಸ್ವತಃವಾಗಿ ತಿಳಿದುಕೊಂಡರೆ ಎಷ್ಟೋ ಚೆನ್ನಾಗಿರುತ್ತದೆ. ಅವರು ಹೇಳಿದ್ದಾರೆ, ಇವರು ಹೇಳಿದ್ದಾರೆಂದು ಅವರಂತೆ ನಾವು ಹೇಳುತ್ತಾ ಹೋದರೆ, ಒಂದು

ಕುರಿ ಬಾವಿಯಲ್ಲಿ ಬಿದ್ದರೆ ಉಳಿದ ಕುರಿಗಳೆಲ್ಲ ಸಹ ಹಾಗೆ ಬಿದ್ದಂತಿರುತ್ತದೆ. ಆದ್ದರಿಂದ ಕುಂಡಲಿಶಕ್ತಿ ಎಂದರೆ ಏನು? ಅದಕ್ಕೆ ಆಕಾರವಿದೆಯಾ? ಅದಕ್ಕೆ ನಿದ್ರೆ ಎಚ್ಚರಗಳು ನಮಗಿರುವಂತೆ ಇರುತ್ತವಾ? ಅನ್ನುವ ಪ್ರಶ್ನೆಗಳಿಗೆ ಸರಿಯಾದ ಸಮಾಧಾನಗಳು ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇನೆ.

ಬ್ರಹ್ಮನಾಡಿಯಲ್ಲಿ ಒಟ್ಟು ಏಳು ಕೇಂದ್ರಗಳಿವೆಯಲ್ಲ! ಅದರಲ್ಲಿ ಏಳು ಕೇಂದ್ರಗಳು ಒಂದೊಂದು ಒಂದೊಂದು ಶಕ್ತಿಯನ್ನು ಹೊಂದಿವೆ. ಆ ಶಕ್ತಿಗಳು ಸ್ವಲ್ಪ ಜನ ದೇವತಾ ಶಕ್ತಿಗಳಿಗೆ ಸಮಾನವಾಗಿವೆ. ಆದ್ದರಿಂದ ಹಿರಿಯರು ಆಯಾಚಕ್ರಗಳಲ್ಲಿ ಆಯಾದೇವತೆಗಳಿದ್ದಾರೆಂದು ತಿಳಿಸಿದ್ದಾರೆ. ಏಳು ಕೇಂದ್ರಗಳ ಶಕ್ತಿ ಕೂಡಲಿಯನ್ನೇ **"ಕುಂಡಲಿ ಶಕ್ತಿ"** ಎಂದು ಕೆಲವರು ಹಿರಿಯರು ಹೇಳುತ್ತಿದ್ದಾರೆ. ಕೆಲವರು ಅಜ್ಞಾನವಶದಲ್ಲಿ ಕುಂಡಲಿಶಕ್ತಿ ನಿದ್ರೆಮಾಡುತ್ತಿದೆ, ಅದನ್ನು ನಿದ್ರೆಯಿಂದ ಎಬ್ಬಿಸಬೇಕೆಂದು ಅನ್ನುತ್ತಿದ್ದಾರೆ. ಏಳು ಕೇಂದ್ರಗಳ ಚೈತನ್ಯವನ್ನೇ ಕುಂಡಲಿ ಅನ್ನಲ್ಪಡುತ್ತಿದೆ. ಆ ಕುಂಡಲಿಶಕ್ತಿ ಎಲ್ಲವೇಳೆಯಲ್ಲಿ ಉಸಿರಾಟಚೀಲಗಳನ್ನು ಆಡಿಸುವ ಕೆಲಸದಲ್ಲಿ ನಿಮಗ್ನವಾಗಿ, ಮತ್ತು ಶರೀರದಲ್ಲಿ ಕೆಲವು ಕೆಲಸಗಳು ವರ್ತಿಸುವುದರಲ್ಲಿ ಲಗ್ನವಾಗಿ, ಎಲ್ಲವೇಳೆಯಲ್ಲಿ ಕೆಲಸಮಾಡುತ್ತಿರುವಾಗ ಹೇಗೆ ನಿದ್ರೆಮಾಡುತ್ತಿದೆ ಎಂದು ಹೇಳಲಾಗುತ್ತದೆ. ಏಳು ಕೇಂದ್ರಗಳ ಚೈತನ್ಯ (ಕುಂಡಲಿ) ಎಚ್ಚರದಲ್ಲಿ ಇಲ್ಲದೆ ಮರುವಿಗೆ (ನಿದ್ರೆಗೆ) ಹೋದ ಜೀವಿಯು ಮರಣಿಸುತ್ತಾನೆ. ಸ್ವಾನುಭವದಿಂದ ಪರಿಶೋಧಿಸದ ಭಕ್ತರು ಕೆಲವರು ತಪ್ಪಾಗಿ ಕುಂಡಲಿಶಕ್ತಿ ಅನ್ನುವುದನ್ನು ಮತ್ತೊಂದು ವಿಧವಾಗಿ ಹೋಲಿಸಿಕೊಂಡು ಗೊಂದಲ ಪಡುತ್ತಿದ್ದಾರೆ. ಕುಂಡಲಿಶಕ್ತಿ ಅನ್ನುವುದೇ ಬ್ರಹ್ಮನಾಡಿಯಲ್ಲಿನ ಚೈತನ್ಯಶಕ್ತಿ, ಅದೇ ಆತ್ಮಶಕ್ತಿ ಬ್ರಹ್ಮನಾಡಿ ಏಳು ಭಾಗಗಳಾಗಿ ಯೋಗವಿದ್ಯೆಯಲ್ಲಿ ವಿಭಜಿಸಲ್ಪಟ್ಟಿದೆ. ಅದರಲ್ಲಿ ಏಳು ಭಾಗಗಳವರೆಗೂ ಇರುವ ಚೈತನ್ಯಶಕ್ತಿಯನ್ನು ಕುಂಡಲಿಶಕ್ತಿ ಎಂದು ಕರೆಯುತ್ತಿದ್ದೇವೆ. ಏಳನೆ ಕೇಂದ್ರದಲ್ಲಿ ಶಕ್ತಿ ಇಲ್ಲದಿದ್ದರೂ ಆರು ಕೇಂದ್ರಗಳಲ್ಲಿ ಶಕ್ತಿ ಇಲ್ಲದಂತೆ ಹೋಗುತ್ತದೆ. ಏಳನೇ ಕೇಂದ್ರದಲ್ಲಿರುವ ಶಕ್ತಿ ಯಾವ ದೇವತಾಶಕ್ತಿಗೆ ಸಮಾನವಾದುದು ಅಲ್ಲ. ಏಳನೇ ಕೇಂದ್ರದಲ್ಲಿರುವ ಶಕ್ತಿಯನ್ನು ತಿಳಿದುಕೊಂಡವರೆ ಯೋಗಿಗಳು.

ಬ್ರಹ್ಮನಾಡಿಯಲ್ಲಿ ಹೊರಟ ಕೆಲವು ನರಗಳು ಪಕ್ಕದಲ್ಲಿರುವ ಸೂರ್ಯಚಂದ್ರನಾಡಿಗಳೊಳಗೆ ಹೋಗಿ, ಅಲ್ಲಿಂದ ಉಸಿರಾಟಚೀಲಗಳಿಗೆ ಹೋಗಿ ಉಸಿರಾಟಚೀಲಗಳನ್ನು ಆಡುವಂತೆ ಮಾಡುತ್ತಿವೆ. ಈ ವಿಧವಾಗಿ ಆಡುವ ಶ್ವಾಸಗಳನ್ನು ಮನುಷ್ಯ ಎರಡು ಪದ್ಧತಿಗಳ ಮೂಲಕ ನಿಲ್ಲಿಸುತ್ತಿದ್ದಾನೆ. ಅಂದರೆ ಅನಿಚ್ಛಾಧೀನವಾಗಿರುವ ಅವಯವಗಳನ್ನು ಇಚ್ಛಾಧೀನ ಅವಯವಗಳಾಗಿ ಬದಲಾಯಿಸುವ ಶಕ್ತಿ ಒಬ್ಬ ಯೋಗಿಗಳಿಗೆ ಮಾತ್ರವೇ ಇರುತ್ತದೆ. ಯೋಗಿಗೆ ಶ್ವಾಸ ಎರಡು ಪದ್ಧತಿಗಳ ಮೂಲಕ ಹೇಗೆ ನಿಲ್ಲುತ್ತಿದೆಯೋ ತಿಳಿಸುತ್ತೇನೆ.

ಶ್ವಾಸವನ್ನು ಕುಂಭಿಸಿ ನಿಲ್ಲಿಸಿ ಮನಸ್ಸನ್ನು ಬ್ರಹ್ಮನಾಡಿಯಲ್ಲಿ ಸೇರಿಸಬೇಕೆಂದುಕೊಂಡ ಯೋಗಿ, ಒಂದು ಸ್ಥಳದಲ್ಲಿ ಕದಲದೆ ಕುಳಿತುಕೊಂಡು ಮೊದಲ ಶ್ವಾಸವನ್ನು ಉಸಿರಾಟಚೀಲಗಳ ತುಂಬ ಸ್ವಲ್ಪವೂ ಖಾಲಿ ಇಲ್ಲದಂತೆ ತೆಗೆದುಕೊಳ್ಳುವನು. ತೆಗೆದುಕೊಂಡ ಶ್ವಾಸವನ್ನು ಸ್ವಲ್ಪವೂ ಹೊರಗೆ ಬಿಡದಂತೆ ಮೂರು ಅಥವಾ ನಾಲ್ಕು ನಿಮಿಷಗಳಿರುತ್ತದೆ. ಹೀಗಿದ್ದ ನಂತರ ಮತ್ತೆ ಹೊರಗಿನ ಗಾಳಿಯನ್ನೆ ಒಳಗೆ ತೆಗೆದುಕೊಳ್ಳುತ್ತದೆ. ಇಲ್ಲಿ ಗಮನಿಸಬೇಕಾದ ವಿಷಯ ಮೊದಲು ಉಸಿರಾಟಚೀಲಗಳು ಖಾಲಿ ಇಲ್ಲದಂತೆ ಗಾಳಿ ತೆಗೆದುಕೊಂಡಿದ್ದಾನಲ್ಲ. ಖಾಲಿ ಇಲ್ಲದ ಉಸಿರಾಟಚೀಲಗಳಲ್ಲಿ ಮತ್ತೆ ಗಾಳಿ ಹೇಗೆ ಪ್ರವೇಶಿಸಿದೆ ಎಂದು ಅನುಮಾನ ಉಂಟಾಗಬಹುದು. ಅದಕ್ಕೆ ಸಮಾಧಾನ ಮೊದಲು ಖಾಲಿ ಇಲ್ಲದ ಉಸಿರಾಟಚೀಲಗಳಲ್ಲಿ ಮೂರು ನಾಲ್ಕು ನಿಮಿಷಗಳ ನಂತರ ಸ್ವಲ್ಪ ಖಾಲಿ ಏರ್ಪಟ್ಟಿರುತ್ತದೆ. ಆ ಖಾಲಿಸ್ಥಳ ಹೇಗೆ ಏರ್ಪಟ್ಟಿದೆ ಎಂದರೆ ಉಸಿರಾಟಚೀಲ ಗಳಲ್ಲಿರುವ ಗಾಳಿ ಮೂರು ನಾಲ್ಕು ನಿಮಿಷಗಳಿಗೆ ಹೊರಗೆ ಬರಬೇಕೆಂದು ಪ್ರಯತ್ನಿಸುತ್ತದೆ. ಆದರೆ ಹೊರಗೆ ಬಾರದಂತೆ ನಿರೋಧಿಸಿರುವುದರಿಂದ ಕಂಠಮಾರ್ಗದಿಂದ ಸ್ವಲ್ಪ ಉದರ ಸೇರಿರುತ್ತದೆ, ಉಸಿರಾಟಚೀಲಗಳಲ್ಲಿನ ಮೂಲೆಗಳಿಗೂ ಸಹ ಗಾಳಿ ಸೇರುವುದರಿಂದ ಉಸಿರಾಟಚೀಲಗಳು ಸ್ವಲ್ಪ ಖಾಲಿ ಏರ್ಪಟ್ಟಿರುತ್ತವೆ. ಆ ಖಾಲಿ ಪೂರ್ತಿ ಆಗುವಂತೆ ಎರಡನೆ ಸಲ ಯೋಗಿ ಹೊರಗಿನ ಗಾಳಿಯನ್ನು ತೆಗೆದುಕೊಂಡು ಪೂರ್ತಿಮಾಡಿದ್ದಾನೆ. ಹೀಗೆ

ಎರಡನೆಸಲ ಗಾಳಿಯನ್ನು ತೆಗೆದುಕೊಂಡ ಯೋಗಿ ಮೂರು ಅಥವಾ ನಾಲ್ಕು ನಿಮಿಷಗಳ ವರೆಗೂ ಶ್ವಾಸವನ್ನು ಹೊರಗೆ ಬಿಡದಂತೆ ಇದ್ದು, ನಂತರ ಇನ್ನು ತನ್ನಲ್ಲಿ ಗಾಳಿ ಪ್ರವೇಶಿಸುತ್ತದೇನೋ ಎಂದು ಮೂರನೆಸಲ ತೆಗೆದುಕೊಂಡು ನೋಡುತ್ತಾನೆ. ಆಗಲೂ ಸಹ ಗಾಳಿಸ್ವಲ್ಪ ಒಳಗೆ ಹೋಗುತ್ತದೆ. ಹೀಗೆ ಎರಡು ಮೂರು ಸಲ ಶ್ವಾಸವನ್ನು ಎಳೆದುಕೊಂಡು ಉದರದಲ್ಲಿ ಉಸಿರಾಟಚೀಲ ಗಳಲ್ಲಿಯೂ ಗಾಳಿಯನ್ನು ಭರ್ತಿಯಾಗಿ ಮಾಡಿಕೊಂಡು ಹೊರಗೆ ಬಿಡದಂತೆ ಪ್ರಯತ್ನ ಪೂರ್ವಕವಾಗಿ ಬಂಧಿಸಿರುವನು. ಇದನ್ನೇ **"ಕುಂಭಕ"** ಎಂದು ಅನ್ನುತ್ತಾರೆ. ಈ ವಿಧವಾಗಿ ಕುಂಭಿಸಲ್ಪಟ್ಟ ಗಾಳಿ ಚೆಂಡಿನಲ್ಲಿ ಬಂಧಿಸಲ್ಪಟ್ಟಿರುವಂತೆ ಇರುತ್ತದೆ.

1) ಗಾಳಿಯನ್ನು ಆಧಾರ ಮಾಡಿಕೊಂಡು ಆಡುತ್ತಿರುವ ಉಸಿರಾಟಚೀಲಗಳು ಗಾಳಿ ಕದಲದೆ ನಿಂತ ತಕ್ಷಣ ನಿಂತುಹೋಗುತ್ತಿವೆ.

2) ಉಸಿರಾಟಚೀಲಗಳು ನಿಂತ ತಕ್ಷಣ ಉಸಿರಾಟಚೀಲಗಳನ್ನು ನಡೆಸುತ್ತಿರುವ ನರಗಳಲ್ಲಿ ಚೈತನ್ಯವೂ ಸಹ ನಿಂತುಹೋಗುತ್ತದೆ.

3) ನರಗಳಲ್ಲಿ ಚೈತನ್ಯ ನಿಂತ ತಕ್ಷಣ ಆ ನರಗಳಜೊತೆ ಸಂಬಂಧವಿರುವ ಸೂರ್ಯಚಂದ್ರನಾಡಿಗಳಲ್ಲಿರುವ ಚೈತನ್ಯ ನಿಂತುಹೋಗುತ್ತದೆ.

4) ಸೂರ್ಯಚಂದ್ರನಾಡಿಗಳಲ್ಲಿ ಚೈತನ್ಯ ನಿಂತ ತಕ್ಷಣ ಸೂರ್ಯಚಂದ್ರ ನಾಡಿಗಳನ್ನು ಆಧಾರವಾಗಿ ಮಾಡಿಕೊಂಡು ಚಲಿಸುತ್ತಿರುವ ಮನಸ್ಸು ಕದಲದೆ ನಿಂತುಹೋಗುತ್ತದೆ.

5) ಮನಸ್ಸು ನಿಂತುಹೋದ ತಕ್ಷಣ ಮನಸ್ಸನ್ನು ಆಧಾರವಾಗಿ ಮಾಡಿಕೊಂಡು ಜೀವಿಗಳ ಶರೀರಗಳನ್ನು ನಡೆಸುತ್ತಿರುವ ಆರು ಕೇಂದ್ರಗಳಲ್ಲಿನ ಚೈತನ್ಯಶಕ್ತಿ ನಿಂತುಹೋಗುತ್ತದೆ. ಅಂದರೆ ಕುಂಡಲಿಶಕ್ತಿಯ ಆಟಕಟ್ಟಲ್ಪಟ್ಟಿದೆಯೆಂಬ ಮಾತು. ನರಕೇಂದ್ರಗಳ ಚೈತನ್ಯಕ್ಕೆ ಆಧಾರವಾಗಿರುವ ಏಳನೆ ಕೇಂದ್ರವು ಒಂದು ತನ್ನ ಶಕ್ತಿಯನ್ನು ಕಳೆದುಕೊಳ್ಳದೆ ಇರುತ್ತದೆ. ಆರು ಕೇಂದ್ರಗಳ ಚೈತನ್ಯಶಕ್ತಿ

ನಿಂತುಹೋದರೂ ಏಳನೆ ಕೇಂದ್ರದಲ್ಲಿರುವ ಚೈತನ್ಯ ಶಕ್ತಿ ನಿಂತುಹೋಗದೆ ಇರುತ್ತದೆ. ಏಳನೇ ಕೇಂದ್ರದಲ್ಲಿನ ಶಕ್ತಿ ಅಪಾರವಾದುದು, ಊಹಿಸಲಾರದ್ದು, ಹೇಳುವುದಕ್ಕೆ ಶಕ್ಯವಾಗದಿರುವುದು, ಅದನ್ನೆ ಆತ್ಮ ಎಂದು ಯೋಗಿಗಳು ಹೇಳುತ್ತಿದ್ದಾರೆ. ಈ ಏಳನೇ ಕೇಂದ್ರದಲ್ಲಿನ ಚೈತನ್ಯವು ಜೀವಿಯ ನಿದ್ರೆ, ಎಚ್ಚರ, ಸ್ವಪ್ನಗಳಲ್ಲಿ ಸಮಾನವಾಗಿರುತ್ತದೆ. ಆದ್ದರಿಂದ ಏಳನೆ ಕೇಂದ್ರದಲ್ಲಿರುವ ಚೈತನ್ಯವನ್ನೇ ಮೂರನೆಸ್ಥಳದಲ್ಲಿ ಸಾಕ್ಷಿಯಾಗಿದೆಯೆಂದು ಹೇಳಬಹುದು. ಕುಂಭಕದ ಮೂಲಕ ನಿಂತಿರುವ ಮನಸ್ಸು ಬ್ರಹ್ಮನಾಡಿಯಲ್ಲಿ ಏಳನೆ ಕೇಂದ್ರವನ್ನು ಸೇರಿ ಅದರಲ್ಲಿ ಅಡಕವಾಗಿಹೋಗುತ್ತಿದೆ. ಮನಸ್ಸಿನಜೊತೆಗೆ ಅಂತಃಕರಣಗಳಾದ ಜೀವಿಯೂ ಸಹ ಏಳನೆ ಕೇಂದ್ರದಲ್ಲಿರುವ ಆತ್ಮನಲ್ಲಿಯೇ ಲೀನವಾಗಿ ಹೋಗುತ್ತಿದ್ದಾನೆ. ಜೀವಿಯು ಆತ್ಮನಲ್ಲಿ ಲೀನವಾಗುವುದನ್ನೇ **"ಯೋಗ"** ಎನ್ನುತ್ತಿದ್ದಾರೆ.

ಕುಂಭಕವನ್ನೇ ಪೂರ್ವದಲ್ಲಿ ಯೋಗಿಯಾದ ಶ್ರೀ ವೀರಬ್ರಹ್ಮಯ್ಯನವರು ಹಾಡಿನ ರೂಪದಲ್ಲಿ ಒಂದು ತತ್ತ್ವವಾಗಿ ಹೇಳಿದ್ದಾರೆ. ಕುಂಡಲಿಶಕ್ತಿಯನ್ನು ಬೇರೆಯಾಗಿ ಹೋಲಿಸಿಕೊಂಡವರು, ಕುಂಡಲಿಶಕ್ತಿ ನಿದ್ರೆಹೋಗುತ್ತಿದೆ ಎನ್ನುವವರು ಇರುವುದರಿಂದ ಆ ತತ್ತ್ವಕ್ಕೆ ಅರ್ಥವೇ ತಿಳಿಯದೆಹೋಗಿ, ಕೊನೆಗೆ ಭಿಕ್ಷುಕರು ಹಾಡಿಕೊಳ್ಳುವುದಕ್ಕೆ ಉಪಯೋಗಪಡುತ್ತಿದೆ. ಕುರುಡನಿಗೆ ರತ್ನ ಕೊಟ್ಟರೂ ವ್ಯರ್ಥವಾದಂತೆ ಶ್ರೀ ವೀರಬ್ರಹ್ಮಯ್ಯನವರು ಎಷ್ಟೋ ಜ್ಞಾನವನ್ನು ಉಪಯೋಗಿಸಿ ಹೇಳಿದ ಮಾತುಗಳನ್ನು ತಿಳಿಯದ ನಾವು ವ್ಯರ್ಥಮಾಡುತ್ತಿದ್ದೇವೆ. ಕುಂಡಲಿಯನ್ನೇ ದೊಡ್ಡದಾಗಿ ಇಟ್ಟುಕೊಂಡವರು ಮತ್ತು ಕೇಳಿದವರು, ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು ಹೇಳಿದ ಕೆಳಗಿನ ತತ್ತ್ವವನ್ನು ಗ್ರಹಿಸಬೇಕೆಂದು ತಿಳಿಸುತ್ತಿದ್ದೇವೆ.

ಆಹಾ ಬ್ರಹ್ಮಾಂಡವಾಗಿದೆ ಆದಿಮಂತ್ರ ನಮ್ಮ ಬ್ರಹ್ಮಯ್ಯನವರು ಹೇಳಿರುವುದು ದೊಡ್ಡಮಂತ್ರ.

1) ರೆಕ್ಕೆ ಮೂಗು ಇಲ್ಲದ ಪಕ್ಷಿ ರಾತ್ರಿ ಹಗಲು ತಪಸ್ಸು ಮಾಡಿ ಒಂದು
ಕೆರೆ ಮೀನುಗಳನ್ನೆಲ್ಲ ಒಂದೇ ನುಂಗಿತು. "ಆಹಾ"

2) ಮನೆ ಹಿಂದೆ ಗುಂಗಾಡಿ ಹುಳ ಮನೆಯಲ್ಲಿರುವವರೆಲ್ಲರನ್ನು ನುಂಗಿ, ನೋಡಲುಬಂದ ಜನರನ್ನೆಲ್ಲಾ ನೋಡಿನುಂಗಿತು. "ಆಹಾ"

3) ಕಾಲು ಕೈ ಇಲ್ಲದವನು ಕೊಡ ಮಡಿಕೆ ಕೈಯಲ್ಲಿಡಿದು ತುಂಬಿದಬಾವಿ ನೀರನ್ನೆಲ್ಲ ಒಬ್ಬನೇ ತುಂಬಿದನು "ಆಹಾ"

4) ಏರಿ ಮೇಲೆ ಸ್ವಾತಿಕೊಕ್ಕರೆ ಬೇಟೆಯಾಡುತ್ತಾ ಬರುವಾಗ ಮರೆಯಲ್ಲಿರುವ ಮೀನುಮರಿ ಹಾಗೆ ನುಂಗಿತು "ಆಹಾ"

5) ಹೇಳಿದ್ದಾನೆ ವೀರದಾಸು ಆಶ್ಚರ್ಯಕರವಾದ ಆತ್ಮತತ್ತ್ವವು, ಹಿರಿಯರು ಇದರ ಭಾವವನ್ನು ಬಿಚ್ಚಿಹೇಳಿದರೆ ಸಾಕು "ಆಹಾ"

**ಇದರ ಅರ್ಥವೇನೆಂದರೆ :–** ದೊಡ್ಡ ಮಂತ್ರ ಬ್ರಹ್ಮಯ್ಯನವರು ಹೇಳಿರುವುದು. ಆ ಮಂತ್ರ ನಮ್ಮಶ್ವಾಸವೇ. ಶ್ವಾಸ ಒಳಗೆ ಪ್ರವೇಶಿಸಿದಾಗ "ಸೋ" ಎನ್ನುವ ಶಬ್ಧದಿಂದ, ಹೊರಗೆ ಬರುವಾಗ "ಹಂ" ಶಬ್ಧದಿಂದ ಚಲಿಸುತ್ತದೆ. ಈ ಎರಡು ಶಬ್ಧಗಳು ಸೇರಿ "ಸೋಹಂ" ಎನ್ನುವ ಶಬ್ಧ ಏರ್ಪಟ್ಟಿದೆ. ಈ ಶಬ್ಧವು ಮಹಿಮೆ ಇರುವುದು ಆದ್ದರಿಂದ ಇದನ್ನು ಮಂತ್ರ ಎಂದು ಹೇಳಿದ್ದಾನೆ. ಮತ್ತು ಅಕ್ಷರ ಸಮ್ಮೇಳನಗಳಿಂದ ಕೂಡಿಕೊಂಡಿದೆ ಆದ್ದರಿಂದ ಮಂತ್ರವೆಂದು ಹೇಳಲಾಗಿದೆ. "ಸೋಹಂ" ಎನ್ನುವ ಮಂತ್ರವು ಆದಿಮಂತ್ರವಾಗಿ ಬದಲಾಗುತ್ತಿದೆ. ಅದು ಹೇಗೆಂದರೆ! "ಸೋ" ಎನ್ನುವ ಶಬ್ದದಲ್ಲಿ ಕೊನೆಯದಾಗಿ "ಓ" ಎನ್ನುವ ಶಬ್ದವಿದೆ. "ಹಂ" ಎನ್ನುವ ಶಬ್ಧದಲ್ಲಿ ಕೊನೆಯದಾಗಿ "ಮ್" ಎನ್ನುವ ಶಬ್ದವಿದೆ. ಒಂದುಸಲ ಶ್ವಾಸ ಒಳಗೆ ಹೋಗಿ ಹೊರಗೆ ಬಂದರೆ "ಸೋಹಂ" ಎನ್ನುವ ಮಂತ್ರ ಏರ್ಪಡುತ್ತಿದೆ. ಆ ಸೋಹಂ ಮಂತ್ರದಲ್ಲಿಯೇ "ಓಮ್" ಎನ್ನುವ ಶಬ್ಧವು ಒಳಪಟ್ಟಿದೆ. ಆದ್ದರಿಂದ "ಸೋಹಂ" ತಾಯಿ "ಓಮ್" ಶಿಶುವು. "ಓಂ" ಪ್ರಪಂಚ ಹುಟ್ಟುವಿಕೆಯಲ್ಲಿ ಮೊದಲು ಹುಟ್ಟಿದ ಶಬ್ದವಾದ್ದರಿಂದ ಇದನ್ನು ಆದಿಮಂತ್ರ ಎನ್ನುವುದು ಸಂಭವಿಸಿದೆ.

**1) ರೆಕ್ಕೆ ಮೂಗು ಇಲ್ಲದ ಪಕ್ಷಿ ರಾತ್ರಿ ಹಗಲು ತಪಸ್ಸು ಮಾಡಿ ಒಂದು ಕೆರೆಯ ಮೀನುಗಳನ್ನೆಲ್ಲ ಒಂದೇ ನುಂಗಿತು.**

1) ಮೂಗು ಪುಟದಲ್ಲಿ ಪ್ರವೇಶಿಸುವ ಶ್ವಾಸಕ್ಕೆ ಆಕಾರವಿಲ್ಲ ಆದ್ದರಿಂದ ರೆಕ್ಕೆ ಮೂಗು ಇಲ್ಲದ ಪಕ್ಷಿ ಎಂದು ಹೇಳಿದ್ದಾರೆ. ಶ್ವಾಸ ರಾತ್ರಿ ಹಗಲು ಬಿಡದೆ ಸೋಹಂ ಎನ್ನುವ ಮಂತ್ರವನ್ನು ಜಪಿಸುತ್ತಿದೆ. ಆದ್ದರಿಂದ ಪಕ್ಷಿ ರಾತ್ರಿ ಹಗಲು ತಪಸ್ಸು ಮಾಡಿ ಎಂದು ಹೇಳಿದ್ದಾರೆ. ಈ ಶ್ವಾಸವೇ ಶರೀರದೊಳಗೆ ಪ್ರವೇಶಿಸಿ ಕುಂಭಕದ ಮೂಲಕ ನಿಲ್ಲಿಸಿ ಶರೀರದಲ್ಲಿರುವ ಕದಲಿಕೆಗಳೆ (ಚೈತನ್ಯಗಳೆ) ಲ್ಲವನ್ನು ನಿಲ್ಲಿಸುತ್ತಿದೆ. ಆದ್ದರಿಂದ ಕೆರೆಯಲ್ಲಿ ಅನೇಕವಿಧಗಳಾಗಿ ಚಲಿಸುವ ಮೀನು ಗಳೆಲ್ಲವನ್ನು ನುಂಗಿತು ಎಂದು ಹೇಳಿದ್ದಾರೆ.

**2) ಮನೆಹಿಂದೆ ಗುಂಗಾಡಿ ಹುಳ ಮನೆಯಲ್ಲಿನವರೆಲ್ಲರನ್ನು ನುಂಗಿತು, ನೋಡಲು ಬಂದ ಜನರನೆಲ್ಲ ನೋಡಿನುಂಗಿತು.**

2) ಶ್ವಾಸ ಎಲ್ಲವೇಳೆಯಲ್ಲಿ "ಸೋಹಂ" ಎನ್ನುವ ಶಬ್ದ ಮಾಡುತ್ತಿದೆ ಆದ್ದರಿಂದ 'ಗಿ' ಎಂದು ಅರಚುವ ಗುಂಗಾಡಿ ಹುಳವಾಗಿ ಹೇಳಿದ್ದಾರೆ. ಶ್ವಾಸಕ್ಕೆ ಆಧಾರ ಶರೀರದಲ್ಲಿ ಕಾಣಿಸದಿರುವ ಬ್ರಹ್ಮನಾಡಿಯಲ್ಲಿನ ಚೈತನ್ಯ. ಆದ್ದರಿಂದ ಮನೆಹಿಂದೆ ಗುಂಗಾಡಿ ಹುಳ ಎಂದು ಹೇಳಿದ್ದಾರೆ. ಮನೆ ಅಂದರೆ ಶರೀರ. ಶ್ವಾಸ ಕುಂಭಕದ ಮುಖಾಂತರ ಶರೀರದಲ್ಲಿರುವ ವ್ಯಾನ, ಸಮಾನ, ಉದಾನ, ಪ್ರಾಣ, ಅಪಾನ ವಾಯುಗಳೆಲ್ಲವೂ ಬಂಧಿಸಲ್ಪಡುತ್ತಿವೆ. ಆದ್ದರಿಂದ ಮನೆಯಲ್ಲಿ ನವರೆಲ್ಲರನ್ನು ನುಂಗಿತು ಎಂದು ಹೇಳಿದ್ದಾರೆ. ಶ್ವಾಸ ಕುಂಭಿಸಿದ ನಂತರ ಉಸಿರಾಟಚೀಲಗಳು ಖಾಲಿಯಾದ್ದರಿಂದ ಎರಡು ಅಥವಾ ಮೂರುಸಲ ಸ್ವಲ್ಪ ಸ್ವಲ್ಪವಾಗಿ ಹೊರಗಿನ ಗಾಳಿ ಒಳಗೆ ಪ್ರವೇಶಿಸಿ, ಪ್ರವೇಶಿಸಿದ ಗಾಳಿ ಮತ್ತೆ ಹೊರಗೆ ಬಾರದೆ ನಿಲ್ಲುವುದರಿಂದ ನೋಡಲುಬಂದ ಜನರನೆಲ್ಲ ನೋಡಿ ನುಂಗಿತು ಎಂದು ಹೇಳಿದ್ದಾರೆ.

**3) ಕಾಲು ಕೈಗಳು ಇಲ್ಲದವನು ಕೊಡ ಮಡಿಕೆ ಕೈಯಲ್ಲಿ ಹಿಡಿದು ತುಂಬಿದಬಾವಿ ನೀರನ್ನೆಲ್ಲ ಒಬ್ಬನೇ ತುಂಬಿದನು.**

3) ಶ್ವಾಸಕ್ಕೆ ರೂಪವಿಲ್ಲ ಆದ್ದರಿಂದ ಕಾಲು ಕೈಗಳು ಇಲ್ಲದವನೆಂದು ಹೇಳಿದ್ದಾರೆ. ಶ್ವಾಸ ಮೂಗಿನರಂಧ್ರಗಳಲ್ಲಿ ಒಂದರಲ್ಲಿ ಹೆಚ್ಚಾಗಿ ಒಂದರಲ್ಲಿ ಕಡಿಮೆಯಾಗಿ ಒಳಗೂ ಹೊರಗೂ ಚಲಿಸುತ್ತಿರುತ್ತಿದೆ, ಹೆಚ್ಚಿನ ಶ್ವಾಸವನ್ನು ಕೊಡ ಎಂದು ಕಡಿಮೆ ಶ್ವಾಸವನ್ನು ಮಡಿಕೆ ಎಂದು ಹೋಲಿಸಿ ಹೇಳಿದ್ದಾರೆ. ಆದ್ದರಿಂದ ಕೊಡ ಮಡಿಕೆ ಎಂದು ಹೇಳಿದ್ದಾರೆ. ಶರೀರದಲ್ಲಿನ ಆಲೋಚನೆಗಳೆಲ್ಲ ಶ್ವಾಸವೊಂದೆ ನಿಲ್ಲಿಸುವುದರಿಂದ ನಿಂತುಹೋಗುತ್ತಿವೆ. ಆದ್ದರಿಂದ ಬಾವಿನೀರನ್ನೆಲ್ಲ ಒಬ್ಬನೇ ತುಂಬಿದನು ಎಂದು ಹೇಳಲಾಗಿದೆ. ಶರೀರವನ್ನು ಬಾವಿಗೆ ಹೋಲಿಸ ಲಾಗಿದೆ.

**4) ಏರಿ ಮೇಲೆ ಸ್ವಾತಿಕೊಕ್ಕರೆ ಬೇಟೆಯಾಡುತ್ತಾ ಬರುವಾಗ ಮರೆಯಲ್ಲಿರುವ ಮೀನುಮರಿ ಹಾಗೆ ನುಂಗಿತು.**

4) ಶ್ವಾಸ ಶರೀರದಲ್ಲಿ ನಿಂತುಹೋಗಿರುವುದರಿಂದ ಉಸಿರಾಟಚೀಲಗಳು ನಂತರ ನರಗಳು, ಆ ನಂತರ ಸೂರ್ಯಚಂದ್ರನಾಡಿಗಳು, ಷಟ್‌ಚಕ್ರಗಳು ಒಂದರ ನಂತರ ಒಂದು ತಮ್ಮ ತಮ್ಮ ಚೈತನ್ಯವನ್ನು ಕಳೆದುಕೊಳ್ಳುತ್ತಿವೆ. ಆದ್ದರಿಂದ ಏರಿ ಮೇಲೆ ಸ್ವಾತಿಕೊಕ್ಕರೆ ಬೇಟೆಯಾಡುತ್ತಾ ಬಂದು ಎಂದು ಹೇಳಲಾಗಿದೆ. ಒಂದರ ನಂತರ ಒಂದು ತಮ್ಮ ಚೈತನ್ಯಗಳನ್ನು ಕಳೆದುಕೊಂಡರು, ಕೊನೆಯಲ್ಲಿರುವ ಏಳನೇ ಕೇಂದ್ರ ಶ್ವಾಸ ನಿರೋಧದಿಂದ ತನ್ನ ಶಕ್ತಿಯನ್ನು ಕಳೆದುಕೊಳ್ಳದೆ ನಿಂತಿರುವುದರಿಂದ, ಎಲ್ಲದರ ಚೈತನ್ಯಗಳನ್ನು ನಿಲ್ಲಿಸಿಹಾಕಿದ ಶ್ವಾಸ ಏಳನೆ ಕೇಂದ್ರದ ಹತ್ತಿರಕ್ಕೆ ಬಂದು ತನ್ನಶಕ್ತಿ ಸಾಲದೆ ನಿಂತುಹೋಗಿರುವುದರಿಂದ, ಮರೆಯಲ್ಲಿರುವ ಮೀನುಮರಿ ಕೊಕ್ಕರೆಯನ್ನು ನುಂಗಿತು ಎಂದು ಹೇಳಲಾಗಿದೆ. ಇಂತಹ ತತ್ತ್ವಗಳು ಪ್ರಾಣಾಯಾಮವನ್ನು ಕುರಿತು ಹಿರಿಯರು ಹೇಳಿದ್ದಾರೆ. ಆದರೆ ಈಗಿನ ಪ್ರಜೆಗಳು ಅವುಗಳಿಗೆ ಸರಿಯಾದ ಅರ್ಥ ತಿಳಿದುಕೊಳ್ಳದೆ ಜನ್ಮವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ.

ಗಾಳಿ ತತ್ತ್ವದಿಂದ ಆಕಾಶ ತತ್ತ್ವವು ಸೇರಿ ಮನಸ್ಸು ಹುಟ್ಟಿದೆ. ಆದ್ದರಿಂದ ಮನಸ್ಸಿಗು ಶ್ವಾಸಕ್ಕು ಅವಿನಾಭಾವ ಸಂಬಂಧ ಇದೆ. ಶ್ವಾಸ ನಿಂತರೆ ಮನಸ್ಸು ನಿಲ್ಲುತ್ತದೆ, ಅಥವಾ ಮನಸ್ಸು ನಿಂತರು ಶ್ವಾಸ ನಿಲ್ಲುತ್ತದೆ. ಶ್ವಾಸ ನಿಂತ ನಂತರ ಮನಸ್ಸು ನಿಲ್ಲುವುದನ್ನು ಕುಂಭಕ ಎಂದು ಅನ್ನುತ್ತಾರೆ. ಕುಂಭಕಪದ್ಧತಿ ತಾರಕ ಯೋಗಕ್ಕೆ ಸಂಬಂಧಿಸಿರುವುದು. ಮನಸ್ಸು ನಿಂತ ನಂತರ ಶ್ವಾಸ ನಿಲ್ಲುವುದನ್ನು ಪ್ರಾಣಾಯಾಮವೇ ಅನ್ನಬಹುದು. ಆದರೆ ಈ ಪದ್ಧತಿ ಅಮನಸ್ಕ ಯೋಗಕ್ಕೆ ಸೇರಿರುವುದು. ಅಮನಸ್ಕ ಪದ್ಧತಿ ಮೂಲಕ ಯೋಗಿಗಳು ಪ್ರಾಣಾಯಾಮ ಹೇಗೆ ಮಾಡುತ್ತಿದ್ದಾರೆ ಎಂದರೆ :–

ಯೋಗಿ ಕದಲದೆ ಕುಳಿತುಕೊಂಡು ಮನಸ್ಸನ್ನು ಪ್ರಯತ್ನದ ಮೂಲಕ ಸಂಕಲ್ಪಗಳು ಇಲ್ಲದಂತೆ ಮಾಡುವನು. ಬ್ರಹ್ಮನಾಡಿಯಲ್ಲಿನ ನರಕೇಂದ್ರಗಳ ಚೈತನ್ಯವು ಮನಸ್ಸನ್ನು ಚಲಿಸುವಂತೆ ಮಾಡುತ್ತಿರುತ್ತದೆ. ಮನಸ್ಸು ಚಲಿಸದೆ ನಿಂತ ತಕ್ಷಣ ಮನಸ್ಸಿಗೆ ಸ್ಥಾನವಾದ ಸೂರ್ಯಚಂದ್ರನಾಡಿಗಳು ತಮ್ಮ ಚೈತನ್ಯವನ್ನು ಕಳೆದುಕೊಳ್ಳುತ್ತವೆ. ಸೂರ್ಯ ಚಂದ್ರನಾಡಿಗಳ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ಮನಸ್ಸು ಪ್ರವೇಶಿಸುತ್ತಿದೆ. ಮನಸ್ಸು ಬ್ರಹ್ಮನಾಡಿಯಲ್ಲಿ ಪ್ರವೇಶಿಸಿದ ತಕ್ಷಣ ಬ್ರಹ್ಮನಾಡಿಯಲ್ಲಿರುವ ನರ ಕೇಂದ್ರಗಳು ತಮ್ಮ ಚೈತನ್ಯವನ್ನು ಕಳೆದುಕೊಳ್ಳುತ್ತಿವೆ. ಹೀಗೆ ಮನಸ್ಸು ನಿಲ್ಲುವುದರ ಮೂಲಕ ಸೂರ್ಯಚಂದ್ರನಾಡಿಗಳು, ಬ್ರಹ್ಮನಾಡಿ ಆರು ಕೇಂದ್ರಗಳು ತಮ್ಮ ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ. ಶ್ವಾಸವನ್ನು ನಡೆಸುವ ಶಕ್ತಿ ಸೂರ್ಯಚಂದ್ರನಾಡಿಗಳ ಮೇಲೆ ಬ್ರಹ್ಮನಾಡಿ ಆರು ಕೆಂದ್ರಗಳಿಗೆ ಇದೆ. ಆದ್ದರಿಂದ ಈ ಕೇಂದ್ರಗಳೆಲ್ಲವೂ ನಿಂತ ತಕ್ಷಣ ಶ್ವಾಸ ನಿಂತುಹೋಗುತ್ತದೆ. ಈ ವಿಧವಾಗಿ ಕೆಲವರು ಯೋಗಿಗಳು ಮನಸ್ಸಿನ ಮೂಲಕ ಶ್ವಾಸಗಳು ನಿಲ್ಲಿಸುತ್ತಿದ್ದಾರೆ. ಇದರಿಂದ ಪ್ರಾಣಾಯಾಮ ಎರಡು ವಿಧಗಳಾಗಿ ಇದೆಯೆಂದು, **ಒಂದು ತಾರಕ ಪದ್ಧತಿ, ಎರಡು ಅಮನಸ್ಕ ಪದ್ಧತಿ** ಎಂದು ಹೇಳಬಹುದು.

ಶ್ವಾಸಕ್ಕು, ಮನಸ್ಸಿಗೂ ಸೂರ್ಯಚಂದ್ರನಾಡಿಗಳ ಮೂಲಕ ಸಂಬಂಧವಿದೆ. ಆದ್ದರಿಂದಲೇ ಮನಸ್ಸು ನಿಂತರೇ ಶ್ವಾಸ ನಿಲ್ಲುತ್ತದೆ ಎಂದು

ಹೇಳುತ್ತಿದ್ದೇವೆ ಇಲ್ಲಿ ಕೆಲವರಿಗೆ ಒಂದು ಅನುಮಾನ ಬರಬಹುದು. ನಿದ್ರೆಯಲ್ಲಿ ಮನಸ್ಸು ನಿಲ್ಲುತ್ತಿದೆಯಲ್ಲ! ಆಗ ಶ್ವಾಸವೂ ಸಹ ನಿಲ್ಲಬೇಕಲ್ಲ! ಹಾಗಲ್ಲದೆ ಶ್ವಾಸ ಸಾಧರಣಕ್ಕಿಂತ ನಿದ್ರೆಯಲ್ಲಿ ಹೆಚ್ಚಾಗುತ್ತಿದೆ. ಇದರಿಂದ ಮನಸ್ಸು ನಿಂತರು ಶ್ವಾಸ ನಿಲ್ಲುತ್ತದೆಂದು ಹೇಗೆ ಹೇಳಲಾಗುತ್ತದೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ನಿದ್ರೆಯಲ್ಲಿ ಮನಸ್ಸು ತನಗೆ ತಾನು ಬ್ರಹ್ಮನಾಡಿಯಲ್ಲಿ ನಿಲ್ಲುತ್ತಿದೆ. ಆದ್ದರಿಂದ ಸೂರ್ಯಚಂದ್ರ ನಾಡಿಗಳು ತಮ್ಮ ಚೈತನ್ಯವನ್ನು ಕಳೆದುಕೊಳ್ಳದೆ ಇದ್ದು, ಮನಸ್ಸು ಆ ನಾಡಿಗಳ ಮೇಲೆ ಇಲ್ಲದಿರುವುದರಿಂದ ಸ್ವತಂತ್ರವಾದವಾಗಿ ತಮ್ಮ ಇಷ್ಟಾನುಸಾರವಾಗಿ ಶ್ವಾಸವನ್ನು ನಡೆಸುತ್ತವೆ. ಮನಸ್ಸು ಸೂರ್ಯಚಂದ್ರ ನಾಡಿಗಳ ಮೇಲಿರುವಾಗ ಶ್ವಾಸ ಮನಸ್ಸನ್ನು ಅನುಸರಿಸಿ ಚಲಿಸುತ್ತಿರುತ್ತದೆ. ಯಾವಾಗಾದರೆ ಜೀವಿಗೆ ತಿಳಿಯದೇ ಮನಸ್ಸು ತನಗೆ ತಾನಾಗಿ ಬ್ರಹ್ಮನಾಡಿಯಲ್ಲಿ ಬೆರೆಯುತ್ತದೋ ಆಗ ಶ್ವಾಸ ಮನಸ್ಸನ್ನು ಅನುಸರಿಸಿ ತಿರುಗದೆ ತನ್ನ ಇಷ್ಟಾನುಸಾರವಾಗಿ ಚಲಿಸುವುದಕ್ಕೆ ಮೊದಲುಮಾಡುತ್ತದೆ. ಆದ್ದರಿಂದಲೇ ಕೆಲವರಿಗೆ ನಿದ್ರೆ ಬಂದ ತಕ್ಷಣ ಶ್ವಾಸ ಅಧಿಕವಾಗಿ ಚಲಿಸುತ್ತಿರುತ್ತದೆ. ಯೋಗದಲ್ಲಿ ಹಾಗಲ್ಲದೆ ಮನಸ್ಸು ಜೀವಿಯ ಪ್ರಯತ್ನದಿಂದ ಬ್ರಹ್ಮನಾಡಿಯಲ್ಲಿ ಲಯವಾಗುತ್ತಿದೆ. ಯೋಗದಲ್ಲಿ ಷಟ್‌ಚಕ್ರಗಳು ತಮ್ಮ ಚೈತನ್ಯವನ್ನು ಕಳೆದುಕೊಳ್ಳುತ್ತಿವೆ, ಸೂರ್ಯ ಚಂದ್ರನಾಡಿಗಳು ಸಹಾ ತಮ್ಮ ಚೈತನ್ಯವನ್ನು ಕಳೆದುಕೊಂಡು ತಮ್ಮ ಮುಖಾಂತರ ಆಡುವ ಶ್ವಾಸಕ್ಕೆ ಬಲವಿಲ್ಲದೆ ಹೋಗುತ್ತಿದೆ. ಯೋಗಕ್ಕು ನಿದ್ರೆಗೂ ಬಹಳ ವ್ಯತ್ಯಾಸವಿದೆ. ನಿದ್ರೆ ಅಜ್ಞಾನ ಸ್ವರೂಪವಾದುದು. ಯೋಗ ಜ್ಞಾನ ಸ್ವರೂಪವಾದುದು. ನಿದ್ರೆಯಲ್ಲಿ ಜೀವಿಯು ತನ್ನುತಾನು ಮರೆತುಹೋಗುತ್ತಾನೆ. ಯೋಗದಲ್ಲಿ ಜೀವಿಯು ತನ್ನ ತಾನು ತಿಳಿದುಕೊಳ್ಳುತ್ತಾನೆ. ನಿದ್ರೆಯಲ್ಲಿ ಜ್ಞಾನಶಕ್ತಿ ಶರೀರದೊಳಗೆ ಪ್ರವೇಶಿಸುವುದಿಲ್ಲ. ಯೋಗದಲ್ಲಿ ಜ್ಞಾನಶಕ್ತಿ ಶರೀರದೊಳಗೆ ಪ್ರವೇಶಿಸುತ್ತದೆ. ನಿದ್ರೆಗು ಯೋಗಕ್ಕು ಒಂದು ಶ್ವಾಸದಲ್ಲಿಯೇ ಅಲ್ಲದೆ ಶರೀರದಲ್ಲಿ ಅನೇಕ ಕಾರ್ಯಗಳಲ್ಲಿ ಭೇದವಿದೆ.

ಪ್ರತಿ ಮಾನವನಿಗೂ ಶ್ವಾಸ ಮೂಗಿನರಂಧ್ರಗಳಿಂದ ಸಾಧಾರಣವಾಗಿ 12 ಇಂಚುಗಳು ಹೊರಗೆ ಬಂದುಹೋಗುತ್ತಿರುತ್ತದೆ. ಯೋಗ ಸಾಧನೆ ಮೂಲಕ ಮನಸ್ಸು ಸ್ವಲ್ಪ ನಿಲ್ಲುವವರಿಗೆ ಶ್ವಾಸ 12 ಅಂಗುಲಗಳ ಉದ್ದ ಹೊರಗೆ ಬಾರದೆ ಕೆಲವು ಇಂಚುಗಳು ಮಾತ್ರ ಬಂದು ಹೋಗುತ್ತಿರುತ್ತದೆ. ಮನಸ್ಸು ನಿಂತರೆ ಶ್ವಾಸ ವೇಗವು ನಿಂತುಹೋಗುತ್ತದೆ. ಮನಸ್ಸು ಪೂರ್ತಿ ನಿಂತರೆ ಶ್ವಾಸ ಎಷ್ಟುಮಾತ್ರ ಹೊರಗೆ ಬಾರದೆ ನಿಂತುಹೋಗುತ್ತದೆ. ಹಾಗೆ ಮನಸ್ಸು ಚಲಿಸಿದಂತೆಲ್ಲಾ ಶ್ವಾಸದ ವೇಗವು ಹೆಚ್ಚಾಗುತ್ತದೆ ಮನಸ್ಸು ಹೆಚ್ಚು ಉದ್ರಿಕ್ತವಾಗಿ ನಡೆಸುವ ಶ್ವಾಸ 12 ಅಂಗುಲಗಳೇ ಅಲ್ಲದೆ 18 ಅಂಗುಲಗಳವರೆಗು ಬಂದು ಹೋಗುತ್ತಿರುತ್ತದೆ. ಮಾನವನ ಆಯುಸ್ಸು ಶ್ವಾಸದ ಮೇಲೆ ನಿರ್ಣಯಿಸಲ್ಪಟ್ಟಿರುತ್ತದೆ. ಶ್ವಾಸದ ಮೇಲೆ ಕಾಲ, ಕರ್ಮ, ಚಕ್ರಗಳ ಗಮನಗಳು ಆಧಾರಪಟ್ಟಿವೆ. ನಾವು ಸೆಕೆಂಡುಗಳ ಮೂಲಕ ನಿಮಿಷಗಳನ್ನು, ಗಂಟೆಗಳನ್ನು ಗುರುತಿಸಿದಂತೆ, ಪರಮಾತ್ಮ ಶ್ವಾಸದ ಮೂಲಕ ಜೀವಿಗೆ ಕಾಲವನ್ನು, ಕರ್ಮವನ್ನು ಗುರುತಿಸುತ್ತಾನೆ. ನಾವು ಒಂದು ನಿರ್ಣಿತವಾದ ಉದ್ದಹೊಂದಿರುವ ಶ್ವಾಸವನ್ನು ಒಂದು ಶ್ವಾಸ (ಒಂದು ಹಂಸ) ಎಂದು ಗುರುತಿಸಬಹುದು. ಪರಮಾತ್ಮ ದೃಷ್ಠಿಯಲ್ಲಿ ಜೀವಿಯ ನಾಸಿಕ (ಮೂಗು) ರಂಧ್ರಗಳ ಅಗಲಕ್ಕೆ 24 ರಷ್ಟು ಹೆಚ್ಚು ಉದ್ದಹೊಂದಿರುವ ಉಸಿರನ್ನು ಒಂದು ಶ್ವಾಸ ಎಂದು ಹೇಳುತ್ತಿದ್ದೇವೆ. ಆದ್ದರಿಂದ ಮಾನವನಿಗೆ ಸಾಧಾರಣವಾಗಿ 12 ಅಂಗುಲಗಳ ಶ್ವಾಸ ಆಡುತ್ತಿದೆ ಎಂದು ಹೇಳಬಹುದು. ಇಲ್ಲಿ ಕೆಲವರಿಗೆ **"ಮನುಷ್ಯ ನಾಸಿಕಾ ರಂಧ್ರಗಳ ಅಗಲಕ್ಕೆ 24 ರಷ್ಟು ಹೆಚ್ಚು ಎಂದು ಯಾವ ಆಧಾರದಿಂದು ಹೇಳಲಾಗುತ್ತದೆ" ಎಂದು** ಅನುಮಾನ ಬರಬಹುದು. ಅದಕ್ಕೆ ಸಮಾಧಾನ, ನಮ್ಮ ಕಪಾಲದಲ್ಲಿರುವ ಕಾಲ ಕರ್ಮ ಚಕ್ರಗಳ ಭಾಗಗಳಿಗೆ ಮನುಷ್ಯನ ಮೂಗಿನ ಹೊಳ್ಳೆಗಳಿಗೆ ಸಂಬಂಧವಿದೆ. ಆದ್ದರಿಂದ ಹಾಗೆ ಹೇಳಲಾಗುತ್ತದೆ. ಮನುಷ್ಯನ ಮೂಗಿನ ಹೊಳ್ಳೆಗಳನ್ನನುಸರಿಸಿ 12 ಇಂಚುಗಳು ಎಂದು ಹೇಳಲಾಗುತ್ತದೆ. ಆನೆಯ ಮೂಗಿನ ತುದಿಗಳಿಂದ ಆರು ಅಡಿಗಳ ಉದ್ದಹೊಂದಿರುವ ಶ್ವಾಸವನ್ನು ಒಂದು ಶ್ವಾಸವಾಗಿ ಲೆಕ್ಕಿಸಬಹುದು, ಹಾಗೆ ನೊಣದ ಮೂಗಿನಹೊಳ್ಳೆ

ಗಳನ್ನನುಸರಿಸಿ ಅದಕ್ಕೆ ಒಂದು ಶ್ವಾಸ ಇರುತ್ತದೆಂದು ಹೇಳಬಹುದು. ಈ ಸೂತ್ರದ ಪ್ರಕಾರ ಯಾವ ಶರೀರದಲ್ಲಿರುವ ಜೀವಿಗಾದರೂ ಶ್ವಾಸ ನಿರ್ಣಯಿಸಿ ಹೇಳಬಹುದು.

ಯೋಗ ಸಾಧನೆ ಮೂಲಕ ಶ್ವಾಸದ ಉದ್ದವನ್ನು 12 ಇಂಚುಗಳಿಂದ 1 ಇಂಚಿನವರೆಗೂ ಕಡಿಮೆಮಾಡಬಹುದು ಮತ್ತು ನಿಲ್ಲಿಸಬಹುದು. ಮಾನವನಿಗೆ 12 ಇಂಚುಗಳ ಶ್ವಾಸ 21,600 ಸಲ ಹೊರಗೆ ಬಂದುಹೋದರು ಪರಮಾತ್ಮ ದೃಷ್ಟಿಯಲ್ಲಿ ಒಂದು ದಿನವಾಗಿ ಜೀವಿಗೆ ಲೆಕ್ಕಿಸಲ್ಪಡುತ್ತಿದೆ. ಯೋಗಸಾಧನೆ ಮೂಲಕ 1 ಇಂಚು ಶ್ವಾಸ ಆಡಿದರು 11 ಇಂಚುಗಳ ಶ್ವಾಸ ಉಳಿಯುತ್ತಿದೆಯಲ್ಲ! 1 ಇಂಚು ಶ್ವಾಸ 21.600 ಸಲ ಹೊರಗೆ ಬಂದುಹೋದರು ಪರಮಾತ್ಮ ದೃಷ್ಟಿಯಲ್ಲಿ ಒಂದು ದಿನವಾಗಿ ಲೆಕ್ಕಿಸಲ್ಪಡುವುದಿಲ್ಲ. ಕಾಲ, ಕರ್ಮ, ಚಕ್ರಗಳ ಭ್ರಮಣವೂ ಸಹ 11 ರಷ್ಟು ಕಡಿಮೆಯಾಗಿರುತ್ತದೆ. ಮಾಮೂಲು ಮಾನವನಿಗೆ 12 ಇಂಚುಗಳು ಶ್ವಾಸ 21,600 ಸಲ ಆಡಿದರು ಒಂದು ದಿನ ಎಂದು ಲೆಕ್ಕಿಸಲ್ಪಟ್ಟರು, ಯೋಗಸಾಧನೆ ಇರುವ ಮಾನವನಿಗೆ 1 ಇಂಚು ಶ್ವಾಸ 21,600 ಸಲ ಆಡಿದರು ಒಂದು ದಿನವಾಗಿ ಲೆಕ್ಕಿಸಲ್ಪಡದೆ 12 ದಿನಗಳಿಗೆ ಒಂದು ದಿನ ಆದಂತೆ ಲೆಕ್ಕಿಸಲ್ಪಡುತ್ತದೆ. ಆದ್ದರಿಂದ ಮಾನವನ ಆಯಸ್ಸು ಹೆಚ್ಚುವುದಕ್ಕೂ ಕಡಿಮೆಯಾಗುವುದಕ್ಕೂ ಶ್ವಾಸದ ಮೇಲೆ ಆಧಾರಪಟ್ಟಿದೆ. ಸ್ವಲ್ಪ ಜನ ಯೋಗಿಗಳು ಶ್ವಾಸವನ್ನು ಪೂರ್ತಿ ಬಂಧಿಸಿ ಆಯುಸ್ಸನ್ನು ಅಭಿವೃದ್ಧಿ ಮಾಡಿಕೊಂಡವರು ಪೂರ್ವದಲ್ಲಿ ಬಹಳ ಜನ ಇರುತ್ತಿದ್ದರು.

ಪ್ರಾರಬ್ಧವನ್ನನುಸರಿಸಿ ಜೀವಿಗೆ (ಮಾನವನಿಗೆ) ಕೆಲವು ಶ್ವಾಸಗಳು ಪರಮಾತ್ಮ ನಿರ್ಣಯಿಸಿರುವನು. ನಿರ್ಣಯಿಸಲ್ಪಟ್ಟ ಶ್ವಾಸಗಳಲ್ಲಿ ಪ್ರತಿ ದಿನ 21,600 ಶ್ವಾಸಗಳು ಖರ್ಚಾಗಿಹೋಗುತ್ತಿರುತ್ತವೆ. ಹೀಗೆ ಖರ್ಚಾಗುತ್ತಾಹೋಗಿ ನಿರ್ಣಯಿಸಲ್ಪಟ್ಟ ಶ್ವಾಸಗಳು ಎಲ್ಲವೂ ಮುಗಿದುಹೋದ ತಕ್ಷಣ ಜೀವಿಯು ಶರೀರ ಬಿಟ್ಟುಹೋಗುವುದು ಸಂಭವಿಸುತ್ತದೆ. ಸ್ವಲ್ಪಜನ ಜ್ಞಾನಿಗಳು ಪ್ರಾಣಾ ಯಾಮದಿಂದ ಶ್ವಾಸಗಳನ್ನು ದಿನಕ್ಕೆ ಕಡಿಮೆ ಖರ್ಚಾಗುವಂತೆ ಮಾಡಿಕೊಂಡು,

ಅದರಿಂದ ಆಯಸ್ಸನ್ನು ಅಭಿವೃದ್ಧಿ ಮಾಡಿಕೊಳ್ಳುತ್ತಿದ್ದಾರೆ. ಅದು ಹೇಗೆಂದರೆ ಒಂದು ಚಿಕ್ಕ ಉದಾಹರಣೆ ಹೇಳುತ್ತೇನೆ. ಮಾನವನಿಗೆ ಪ್ರಾರಬ್ಧನ್ನನುಸರಿಸಿ 31,53,60,000 ಶ್ವಾಸಗಳು ಕಳೆಯುವವರೆಗು ಜೀವಿಯು ಶರೀರದಲ್ಲಿರುವಂತೆ ಕರ್ಮನಿರ್ಣಯ ಇರುತ್ತದೆ. ದಿನಕ್ಕೆ 21,600 ಶ್ವಾಸಗಳು ಕಳೆದರು 31,53,60,000 ಶ್ವಾಸಗಳು ಮುಗಿದುಹೋಗುವುದಕ್ಕೆ 40 ವರ್ಷಗಳಕಾಲ ಹಿಡಿಯುತ್ತದೆ. ಆದ್ದರಿಂದ ಅವನ ಆಯಸ್ಸು 40 ವರ್ಷಗಳು ಎಂದು ಹೇಳಬಹುದು. ಆದರೆ ಆ ಮಾನವನು 20 ವರ್ಷಗಳ ವಯಸ್ಸಿನಿಂದ ಪ್ರಾಣಾಯಾಮ ಮಾಡಲು ಪ್ರಾರಂಭಿಸಿದನು. ಪ್ರತಿದಿನ 2 ಗಂಟೆಗಳ ಕಾಲ ಪ್ರಾಣಾಯಾಮ ಮಾಡುತ್ತಿದ್ದನು. ಆ ಎರಡು ಗಂಟೆಗಳಕಾಲ ಶ್ವಾಸ ಆಡದೆ ಎರಡು ಗಂಟೆಗಳಿಗೆ 1800 ಶ್ವಾಸಗಳು ಜೀವಿಗೆ ಉಳಿದುಹೋಗುತ್ತವೆ. ಆ ಜೀವಿಗೆ ಒಂದು ದಿನಕ್ಕೆ 1800 ಶ್ವಾಸಗಳು ಉಳಿಯುತ್ತಾ 19,800 ಶ್ವಾಸಗಳು ಖರ್ಚಾಗುತ್ತಿತ್ತು ಈ ಪ್ರಕಾರ ಆ ಜೀವಿಗೆ ನಿರ್ಣಯಿಸಲ್ಪಟ್ಟ ಶ್ವಾಸಗಳು ಮುಗಿದುಹೋಗುವುದಕ್ಕೆ 41 ವರ್ಷಗಳು, 8 ತಿಂಗಳ, 3 ದಿನಗಳ ಕಾಲ ಹಿಡಿಯುತ್ತದೆ. ಅಲ್ಲಿಗೆ ಆ ಜೀವಿಯ ಆಯಸ್ಸು 1 ವರ್ಷ, 8 ತಿಂಗಳು, 3 ದಿನಗಳ ಕಾಲ ಬೆಳೆದಿದೆ. ಈ ವಿಧವಾಗಿ ಯೋಗಿಗಳು ಕೆಲವರು ಪ್ರಾಣಾ ಯಾಮದಿಂದ ಆಯಸ್ಸನ್ನು ಅಭಿವೃದ್ಧಿ ಮಾಡಿಕೊಂಡು ಹೆಚ್ಚು ಕಾಲ ಬದುಕುವುದಕ್ಕೆ ಆಸ್ಕಾರವಿದೆ. ಪೂರ್ವದಲ್ಲಿ ಸ್ವಲ್ಪಜನ ಆಯಸ್ಸನ್ನು ಅಭಿವೃದ್ಧಿ ಮಾಡಿಕೊಂಡು ಕೆಲವು ನೂರಾರು ವರ್ಷಗಳು ಬದುಕಿರುವಂತೆ ಚರಿತ್ರೆಯಲ್ಲಿ ತಿಳಿಯುತ್ತಿದೆ.

ಜೀವಿಯ ಸಾವು ಹುಟ್ಟುಗಳಿಗೆ ಕಾರಣ ಕರ್ಮ. ಕರ್ಮವನ್ನು ಜೀವಿಯು ಅನುಭವಿಸುತ್ತಲೇ ಇರುತ್ತಾನೆ. ಮತ್ತು ಸಂಪಾದಿಸುತ್ತಲೇ ಇರುತ್ತಾನೆ. ಹೋದ ಜನ್ಮ ಕರ್ಮ ಈ ಜನ್ಮದಲ್ಲಿ, ಈ ಜನ್ಮದ ಕರ್ಮ ಬರುವ ಜನ್ಮದಲ್ಲಿ ಅನುಭವಿಸುತ್ತಾ ಕರ್ಮಚಕ್ರದಿಂದ ಹೊರಬೀಳದೆ ಅನೇಕ ಬಾಧೆಗಳು ಸುಖಗಳು ಜೀವಿಯು ಅನುಭವಿಸುತ್ತಲೇ ಇದ್ದಾನೆ. ಕರ್ಮ ಚಕ್ರದೊಳಗಿಂದ ತಪ್ಪಿಸಿಕೊಳ್ಳಬೇಕೆಂದರೆ, ಕರ್ಮ ಎಂದರೆ ಏನು? ಎಲ್ಲಿಂದ ನಮ್ಮ ಮೇಲೆಬಿದ್ದು ಬಾಧಿಸುತ್ತಿದೆ? ಅದರಿಂದ ವಿಮುಕ್ತಿ ಹೇಗೆ? ಎಂದು ವಿಶಧೀಕರಿಸಿಕೊಂಡರು, ಕರ್ಮ ಚಕ್ರದಿಂದ ಜೀವಿಯು ತಪ್ಪಿಸಿಕೊಳ್ಳುವುದಕ್ಕೆ ಸ್ವಲ್ಪ ಆಸ್ಕಾರ ಏರ್ಪಡಬಹುದು. ಆದ್ದರಿಂದ ಕರ್ಮಚಕ್ರವನ್ನು ಕುರಿತು ಸ್ವಲ್ಪ ತಿಳಿಸುತ್ತೇನೆ.

ಕರ್ಮ ಅಂದರೆ ಪಾಪ ಪುಣ್ಯವಲ್ಲವೆ! ಈ ಪಾಪಪುಣ್ಯಗಳು ಎರಡು ಸುತ್ತಲೂ ಆವರಿಸಿಕೊಂಡು ಒಂದು ಚಕ್ರವಾಗಿ ತಯಾರಾಗಿ ಜೀವಿಯನ್ನು ಆ ಚಕ್ರದಲ್ಲಿಯೇ ಗಿರಗಿರ ತಿರುಗಿಸುತ್ತಾ ಪಾಪ, ಪುಣ್ಯಗಳನ್ನು ಅನುಭವಿಸು ವಂತೆ ಮಾಡುತ್ತಿವೆ. ನಾವು ಸಂಪಾದಿಸಿಕೊಳ್ಳುವ ಪಾಪ, ಪುಣ್ಯ ಕರ್ಮಚಕ್ರದೊಳಗೆ ಸೇರಿ ನೆಲೆಯಿದ್ದು ಕಾಲಾನುಗುಣವಾಗಿ ಮತ್ತೆ ನಮ್ಮ ಮೇಲೆ ಪ್ರಸಾರವಾಗುತ್ತದೆ. ಯಾರ ಕರ್ಮ ಅವನ ಕರ್ಮಚಕ್ರದಲ್ಲೇ ಹೋಗಿ ಸೇರುತ್ತದೆ, ಮತ್ತೆ ಅವನಿಗೆ ಪ್ರಸಾರವಾಗುತ್ತದೆ. ಕರ್ಮಚಕ್ರ ಪ್ರತಿ ಜೀವಿಯ ಮೆದುಳಿನಲ್ಲಿ ಇದೆ. ಪಾಪ, ಪುಣ್ಯಗಳು ಕಣ್ಣಿಗೆ ಕಾಣಿಸುವುದಿಲ್ಲ, ಆದ್ದರಿಂದ ಪಾಪಪುಣ್ಯ ಮಿಶ್ರಿತವಾದ ಈ ಚಕ್ರವು ಮೆದುಳಿನಲ್ಲಿ ಕಣ್ಣಿಗೆ ಯಾರಿಗೂ ಕಾಣಿಸುವುದಿಲ್ಲ ನೋಡಬೇಕೆಂದರು ನಾಲ್ಕನೆಕಣ್ಣಾದ ಜ್ಞಾನನೇತ್ರದಿಂದ ನೋಡಬಹುದು. ಮೆದುಳಿನಲ್ಲಿ ಈ ಚಕ್ರ ಹನ್ನೆರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಕರ್ಮಚಕ್ರವನ್ನು ನಂತರ ಪುಟನಲ್ಲಿ 1ನೇ ಚಿತ್ರದಲ್ಲಿ ನೋಡಬಹುದು.

ಈ ವಿಧವಾಗಿ ಹನ್ನೆರಡು ಭಾಗಗಳಾಗಿರುವ ಕರ್ಮಚಕ್ರದಲ್ಲಿ ಜೀವಿಯ ಪಾಪಪುಣ್ಯಗಳು ನಿರ್ಣಿತವಾದ ಭಾಗಗಳೊಳಗೆ ಹೋಗಿ ಸೇರುತ್ತಿರುತ್ತದೆ. ಅದು ಹೇಗೆಂದರೆ ಕರ್ಮಚಕ್ರದಲ್ಲಿರುವ ಒಂದು, ಐದು, ಒಂಭತ್ತು ಭಾಗಗಳಲ್ಲಿ ಜೀವಿಯ

ಪುಣ್ಯ ಸೇರುತ್ತದೆ. ಹಾಗೆ ಮೂರು, ಏಳು, ಹನ್ನೊಂದು ಭಾಗಗಳಲ್ಲಿ ಜೀವಿಯ ಪಾಪ ಸೇರುತ್ತದೆ. ಉಳಿದ ಆರು ಭಾಗಗಳಲ್ಲಿ ಪಾಪಪುಣ್ಯಗಳು ಎರಡು




**1ನೇ ಚಿತ್ರ**

**ಮೆದುಳಿನಲ್ಲಿ ಕರ್ಮಚಕ್ರದ ಭಾಗಗಳು**

ಸೇರುತ್ತವೆ. ಕೆಲವು ಭಾಗಗಳಲ್ಲಿ ಪಾಪ, ಕೆಲವು ಭಾಗಗಳಲ್ಲಿ ಪುಣ್ಯ, ಕೆಲವು ಭಾಗಗಳಲ್ಲಿ ಪಾಪಪುಣ್ಯಗಳು ಎರಡು ಏಕೆ ಸೇರುತ್ತಿವೆ ಎಂದು ಕೆಲವರಿಗೆ ಅನುಮಾನ ಬರಬಹುದು. ಅದನ್ನು ಕುರಿತು ಹಿರಿಯರು ಏನು ಹೇಳುತ್ತಿದ್ದಾರೆಂದರೆ ಮಾನವನು ತನ್ನ ಜೀವಿನಕಾಲದಲ್ಲಿ ಒಂದೇ ವಿಧ ಪುಣ್ಯ, ಒಂದೇ ವಿಧ ಪಾಪ ಸಂಪಾದಿಸಿಕೊಳ್ಳುವುದಿಲ್ಲ. ಅನೇಕ ವಿಧಗಳ ಕೆಲಸಗಳು ಮಾಡುತ್ತಾ ಅನೇಕ ವಿಧಗಳ ಪಾಪಪುಣ್ಯಗಳು ಸಂಪಾದಿಸಿಕೊಳ್ಳುತ್ತಿರುತ್ತಾನೆ. ಒಂದೊಂದು ವಿಧದ ಪುಣ್ಯ ಕರ್ಮಚಕ್ರದಲ್ಲಿ ಒಂದೊಂದು ನಿರ್ಣಿತ ಭಾಗವನ್ನೇ ಸೇರುತ್ತದೆ. ಹಾಗೆ ಒಂದೊಂದು ವಿಧದ ಪಾಪ ಕರ್ಮಚಕ್ರದಲ್ಲಿ ಒಂದೊಂದು ನಿರ್ಣಿತ ಭಾಗವನ್ನೇ ಸೇರುತ್ತದೆ. ಆದ್ದರಿಂದಲೇ ಕೆಲವು ಭಾಗಗಳಲ್ಲಿ ಪುಣ್ಯ, ಕೆಲವು ಭಾಗಗಳಲ್ಲಿ ಪಾಪ, ಮತ್ತೆ ಕೆಲವು ಭಾಗಗಳಲ್ಲಿ ಪಾಪಪುಣ್ಯ ಎರಡು ಸೇರಿರುತ್ತವೆ. ಅವು ಹೇಗಿವೆ ಎಂದರೆ ನಂತರ ಪುಟದಲ್ಲಿ 2ನೇ ಚಿತ್ರವನ್ನು ನೋಡಬಹುದು.


ಆತ್ಮ
1
2
3
4
5
6
7
8
9
10
11
12
ಪುಣ್ಯ
ಪಾಪ
ಶರೀರ ಸಂಬಂಧ ಅವಯವಗಳು
ಧನ ಸಂಬಂಧ
ತಂದೆ ಸಂಬಂಧ
ಸ್ಥಿರಾಸ್ತಿಗಳು
ಕಪಾಲದಲ್ಲಿರುವ
ಕರ್ಮಚಕ್ರ
ಬ್ರಹ್ಮನಾಡಿ

2ನೇ ಚಿತ್ರ

ಈ ವಿಧವಾಗಿ ಅನೇಕ ರೀತಿಯ ಪಾಪಪುಣ್ಯಗಳು ಜೀವಿಯು ಸಂಪಾದಿಸಿಕೊಂಡಂತೆಲ್ಲಾ ಕಪಾಲದಲ್ಲಿರುವ ಕರ್ಮಚಕ್ರವನ್ನು ಸೇರುತ್ತಿರುತ್ತದೆ. ಕರ್ಮಚಕ್ರದಲ್ಲಿನ ಕರ್ಮವನ್ನು ಜೀವಿಗಳ ಮೇಲೆ ಪ್ರಸಾರ ಮಾಡುವವರು ನವಗ್ರಹಗಳಾದ ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತುಗಳು. ಗ್ರಹಗಳು ಒಟ್ಟು 12 ಇವೆ. ಪ್ರಸ್ತುತ ಒಂಭತ್ತು ಗ್ರಹಗಳನ್ನು ಕುರಿತೇ ಹೇಳುತ್ತಿದ್ದೇವೆ. ದ್ವಾದಶ ಗ್ರಹಗಳ ವಿವರವನ್ನು ನಾವು ಬರೆಯುವ **ಜ್ಯೋತಿಷ್ಯಗ್ರಂಥ**ದಲ್ಲಿ ತಿಳಿಸುತ್ತೇವೆ. ಆ ಒಂಭತ್ತು ಜನ ಕಾಲಚಕ್ರದಲ್ಲಿ ಸಿಲುಕಿಕೊಂಡು ಕಾಲಚಕ್ರ ಭ್ರಮಿಸುವಂತೆ ಇವರೂ ತಿರುಗುತ್ತ ಕರ್ಮಚಕ್ರದಲ್ಲಿನ ಪಾಪಪುಣ್ಯಗಳನ್ನು ಕಾಲಾನುಗುಣವಾಗಿ ಜೀವಿಗಳ ಮೇಲೆ ಬಿಡುತ್ತಿದ್ದಾರೆ. ಕಾಲಚಕ್ರದಲ್ಲಿ ನವಗ್ರಹಗಳು ತಿರುಗುತ್ತಿರುವುದರಿಂದಲೇ ಪಾಪಪುಣ್ಯಗಳು ಒಂದೇಸಲ ಪ್ರಸಾರವಾಗದೆ ಸ್ವಲ್ಪ ಸ್ವಲ್ಪ ಮಿಶ್ರಮ ರೂಪದಲ್ಲಿ ಪ್ರಸಾರವಾಗುತ್ತಿವೆ ಅದನ್ನೇ ಪ್ರಾರಬ್ಧ ಎಂದು ಅನ್ನುತ್ತಾರೆ.

ಕರ್ಮಚಕ್ರ ನಮ್ಮ ಶಿರಸ್ಸಿನಲ್ಲಿ ಇರುವುದರಿಂದಲೇ ಪ್ರತಿಯೊಬ್ಬರು ನನ್ನಕರ್ಮ ಎಂದು ತಲೆಕಡೆ ಕೈ ತೋರಿಸುತ್ತಿರುತ್ತಾರೆ. ಮತ್ತು ಒಂದು ಕೆಲಸ ನೆರವೇರದಿರುವಾಗ ಸಹ ನನ್ನ ಹಣೆಬರಹ ಆಗಿದೆ ಎಂದು ಹೇಳುತ್ತಿರುತ್ತಾರೆ. ಮತ್ತೊಬ್ಬನಿಗೆ ಹೆಚ್ಚಾಗಿ ಲಾಭ ಬಂದಾಗ ಅವನ ಪುಣ್ಯ ಹಾಗಿದೆ ಎಂದು, ಒಬ್ಬನಿಗೆ ನಷ್ಟ ಬಂದಾಗ ಅವನು ಪಾಪ ಮಾಡಿದ್ದಾನೆಂದು, ನಾವು ಹೇಳುತ್ತಲೇ ಇದ್ದೇವೆ. ನಡೆದ ಕೆಲಸಗಳಿಗೆ ಪುಣ್ಯ, ನಡೆಯದ ಕೆಲಸಗಳಿಗೆ ಪಾಪ ಎಂದು ನಮಗೆ ತಿಳಿಯದೆಯೇ ನಮ್ಮ ಬಾಯಿಂದ ಬರುತ್ತಿದೆ. ಮತ್ತು ಹಾಗೆಯೇ ನನ್ನ ಹಣೆಬರಹ ಎಂದು, ನನ್ನಕರ್ಮ ಎಂದು, ನಮಗೆ ತಿಳಿಯದೆಯೇ ಬಾಯಿಂದ ಹೇಳುತ್ತಾ ನಮ್ಮ ಕೈ ತಲೆಕಡೆ ತೋರಿಸುತ್ತಿದೆ. ತನಗೆ ಪೂರ್ತಿತಿಳಿದು ತಲೆಕಡೆ ನನ್ನ ಕರ್ಮವೆಂದು ತೋರಿಸಿದ್ದಾನಾ ಎಂದರೆ ಏನೂ ತಿಳಿದಿರುವುದಿಲ್ಲ. ಇಲ್ಲಿ ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ! ಕರ್ಮಚಕ್ರದಲ್ಲಿ ನಾವು ಮಾಡಿಕೊಂಡ ಪಾಪ, ಪುಣ್ಯ ಇದೆ. ಆ ಪಾಪಪುಣ್ಯಗಳನ್ನೇ ನಾವು ಅನುಭವಿಸುತ್ತಿದ್ದೇವೆ.

ಆದ್ದರಿಂದ ನಾವು ಶಿರಸ್ಸಿನಲ್ಲಿರುವ ಕರ್ಮಚಕ್ರದ ಕಡೆಯೇ ನಮಗೆ ತಿಳಿಯದಿದ್ದರೂ ವಿಧಿಪೂರ್ವಕವಾಗಿ ಕೈ ತೋರಿಸುತ್ತಿದ್ದೇವೆ.

ಕರ್ಮಚಕ್ರದಲ್ಲಿರುವ ಕರ್ಮಕ್ಕೆ ಅಧಿನೇತರು ನವಗ್ರಹಗಳು ಆದ್ದರಿಂದ ಕರ್ಮಚಕ್ರದಲ್ಲಿರುವ ಕರ್ಮಾನುಸಾರ ಜೀವಿಗಳನ್ನು ನವಗ್ರಹಗಳು ತಿರುಗಿಸುತ್ತಿರುತ್ತವೆ. ಕರ್ಮಚಕ್ರದಂತೆ ಕಾಲಚಕ್ರ ಹನ್ನೆರಡು ಭಾಗಗಳಾಗಿದೆ. ಹನ್ನೆರಡು ಭಾಗಗಳಿಗೂ ಆದಿಯಲ್ಲಿರುವ ಸಪ್ತಗ್ರಹಗಳು ಅಧಿನೇತರಾಗಿ ನಿಯಮಿಸಲ್ಪಟ್ಟರು. ಕಾಲಚಕ್ರದಲ್ಲಿನ ಹನ್ನೆರಡು ಭಾಗಗಳಿಗು ಹನ್ನೆರಡು ಹೆಸರುಗಳು ಇಡಲಾಗಿದೆ. ಅವು ಯಾವೆಂದರೆ 1) ಮೇಷ 2) ವೃಷಭ 3) ಮಿಥುನ 4) ಕರ್ಕಾಟಕ 5) ಸಿಂಹ 6) ಕನ್ಯಾ 7) ತುಲಾ 8) ವೃಶ್ಚಿಕ 9) ಧನಸ್ಸು 10) ಮಕರ 11) ಕುಂಭ 12) ಮೀನ. ಈ ಹನ್ನೆರಡು ಭಾಗಗಳಿಗೆ ಸಪ್ತಗ್ರಹಗಳು ಸ್ವತಃ ಹಕ್ಕುಗಳು ಹೊಂದಿರುತ್ತವೆ. ಯಾವ ವಿಧವಾಗಿ ಎಂದರೆ ಸೂರ್ಯನು




3ನೇ ಚಿತ್ರ

ಸಿಂಹರಾಶಿಗೆ ಅಧಿನೇತ ಅಂದರೆ ಸಿಂಹ ಎನ್ನುವ ಹೆಸರು ಹೊಂದಿದ ಭಾಗ ಸೂರ್ಯನ ಸ್ವಂತಸ್ಥಾನ ಎಂದು ಅರ್ಥ. ಹಾಗೆ ಚಂದ್ರನಿಗೆ ಕರ್ಕಾಟಕ ಭಾಗ, ಅಂಗಾರಕನಿಗೆ ಮೇಷ ಮತ್ತು ವೃಶ್ಚಿಕ ಅನ್ನುವ ಎರಡು ಭಾಗಗಳು, ಬುಧನಿಗೆ ಮಿಥುನ, ಕನ್ಯ ಅನ್ನುವ ಎರಡು ಭಾಗಗಳು, ಗುರುವಿಗೆ ಮೀನ, ಧನಸ್ಸು ಅನ್ನುವ ಎರಡು ಭಾಗಗಳು ಶುಕ್ರನಿಗೆ ವೃಷಭ, ತುಲ ಅನ್ನುವ ಎರಡು ಭಾಗಗಳು ಶನಿಗೆ ಮಕರ, ಕುಂಭ ಎನ್ನುವ ಎರಡು ಭಾಗಗಳು ಸ್ವಂತ ಭಾಗಗಳಾಗಿ ಪರಿಗಣಿಸಲಾಗಿದೆ. ಈ ವಿಧವಾಗಿ ಹನ್ನೆರಡು ಭಾಗಗಳಿಗು ಏಳುಜನ ಅಧಿನೇತರು ಆದಿಯಿಂದ ಇದ್ದಾರೆ. ಮಧ್ಯದಲ್ಲಿ ಬಂದಿರುವ ರಾಹು ಶನಿ ಸ್ವಂತ ಭಾಗವಾದ ಕುಂಭದಲ್ಲಿ, ಕೇತು ಗುರು ಸ್ವಂತ ಭಾಗವಾದ ಮೀನದಲ್ಲಿ ಸ್ವಂತ ಸ್ಥಾನವನ್ನು ಏರ್ಪಡಿಸಿಕೊಂಡರು. ಒಂಭತ್ತು ಗ್ರಹಗಳು ಹನ್ನೆರಡು ಭಾಗಗಳಿಗೆ ಅಧಿನೇತ ರಾದರು. ಇನ್ನು ಮೂರು ಕಾಣಿಸದ ಗ್ರಹಗಳ ಸ್ವಂತಸ್ಥಾನಗಳನ್ನು ನಂತರ **ಜ್ಯೋತಿಷ್ಯ ಗ್ರಂಥದಲ್ಲಿ** ತಿಳಿಸುತ್ತೇವೆ. ಈ ಕಾಲಚಕ್ರ ಕರ್ಮಚಕ್ರಕ್ಕೆ ಆದುಕೊಂಡು ಮೇಲೆ ತಿರುಗುತ್ತಿರುತ್ತದೆ. ಅದನ್ನು 3ನೇ ಚಿತ್ರದಲ್ಲಿ ನೋಡಬಹುದು.

ಕರ್ಮಚಕ್ರದಲ್ಲಿ ಕರ್ಮವನ್ನು ತಿರುಗಿಸುವವರು ನವಗ್ರಹಗಳು. ಹಾಗೆ ಕಾಲಚಕ್ರದಲ್ಲಿ ನವಗ್ರಹಗಳನ್ನು ತಿರುಗಿಸುವವನು ಆತ್ಮ. ಆತ್ಮ ಅನ್ನುವವನು ತನ್ನ ಅಧೀನದಲ್ಲಿರುವ ನವಗ್ರಹಗಳಿಂದ ಕರ್ಮವನ್ನು ಜೀವಿಗಳ ಮೇಲೆ ವಿಧಿಸುತ್ತಿದ್ದಾನೆ. ಜೀವರಾಶಿಗಳ ಶರೀರದಲ್ಲಿರುವ ಕಪಾಲ ಸ್ಥಾನದಲ್ಲಿ ಕರ್ಮಚಕ್ರ, ಕಾಲಚಕ್ರಗಳು ಪರಿಭ್ರಮಿಸುತ್ತಿವೆ. ಕರ್ಮಚಕ್ರದ ಮೇಲೆ ಅಧಿಕಾರ ನವಗ್ರಹಗಳು ಹೊಂದಿರುತ್ತವೆ. ಕಾಲಚಕ್ರದ ಮೇಲೆ ಅಧಿಕಾರ ಆತ್ಮಕ್ಕೆ ಇರುತ್ತದೆ. ಆತ್ಮ ಧರ್ಮ ತಪ್ಪದೆ ಕಾಲಚಕ್ರವನ್ನು ಪರಿಭ್ರಮಿಸುವಂತೆ ಮಾಡುತ್ತದೆ. ಕರ್ಮವನ್ನು ನವಗ್ರಹಗಳು ನಡೆಸುವಾಗ, ನವಗ್ರಹಗಳೆಂಬ ಯಮನು (ಆತ್ಮ) ನಡೆಸಿದಾಗ, ಇವುಗಳನ್ನೆಲ್ಲಾ ಗುರು (ಪರಮಾತ್ಮ) ಮಧ್ಯದಲ್ಲಿದ್ದು ಗುರುತ್ವಾಕರ್ಷಣಶಕ್ತಿಯಿಂದ ತನ್ನ ಸುತ್ತಲು ತಿರುಗುವಂತೆ ಮಾಡುತ್ತಿದ್ದಾನೆ. ಮಧ್ಯದಲ್ಲಿರುವ ಗುರುತ್ವಾಕರ್ಷಣ ಶಕ್ತಿಯನ್ನು ನಂತರ ಪುಟದಲ್ಲಿ 4ನೇ ಚಿತ್ರದಲ್ಲಿ ನೋಡಬಹುದು.




4ನೇ ಚಿತ್ರ

ಕರ್ಮ, ಕಾಲ, ಚಕ್ರಗಳಿಗೆ ಆಧಾರವಾಗಿ ಪರಮಾತ್ಮ ಇದ್ದು, ಕಾಲನೆಂಬ ಹೆಸರುಹೊಂದಿ ನವಗ್ರಹಗಳನ್ನು, ಕರ್ಮವನ್ನು ತನ್ನ ಆಕರ್ಷಣೆ ಶಕ್ತಿಯಿಂದ ನಡೆಸುತ್ತ ಸಾಕ್ಷಿ ಮಾತ್ರನಾಗಿದ್ದಾನೆ. ಆದ್ದರಿಂದಲೇ ಗೀತಾಶಾಸ್ತ್ರದಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹೀಗಂದಿದ್ದಾನೆ. **"ಭೂಮಿ ಮೇಲೆಯೇ ಪ್ರಕೃತಿಗೆ ಅಧ್ಯಕ್ಷತೆ ವಹಿಸಿದ್ದೇನೆ. ನನ್ನಿಂದ ಜೀವರಾಶಿಗಳು ಹುಟ್ಟುತ್ತಿವೆ ಮತ್ತು ಸಾಯುತ್ತಿವೆ. ಈಕಾರಣದಿಂದಲೇ ಜಗವು ಚಕ್ರದಂತೆ ತಿರುಗುತ್ತಿದೆ."**

ಸರ್ವ ಜೀವರಾಶಿಗಳಿಗೆ ಬ್ರಹ್ಮನಾಡಿಯಲ್ಲಿ ಮಧ್ಯ ಪುರುಷನಾದ ಆತ್ಮ ಇದ್ದಾನೆ. ಬ್ರಹ್ಮನಾಡಿಯ ಸಪ್ತಸ್ಥಾನದಲ್ಲಿ ಆತ್ಮಶಕ್ತಿ ಕೇಂದ್ರಿಕೃತವಾಗಿದೆ. ಸಪ್ತ ಸ್ಥಾನವನ್ನು ಕೇಂದ್ರವಾಗಿ ಮಾಡಿಕೊಂಡು ಅದರ ಸುತ್ತಾ ಕರ್ಮ, ಕಾಲ, ಚಕ್ರಗಳು ತಿರುಗುತ್ತಿವೆ. ಕಾಲಚಕ್ರದಲ್ಲಿ ರಾತ್ರಿಹಗಲು, ಶುಕ್ಲಪಕ್ಷ, ಕೃಷ್ಣಪಕ್ಷಗಳು, ಮಾಸಗಳು, ಉತ್ತರ ದಕ್ಷಿಣಾಯಣಗಳು, ಸಂವತ್ಸರಗಳು ನಡೆಯುತ್ತಲೇ ಇವೆ.

ರಾತ್ರಿ ಹಗಲು ಮೊದಲುಗೊಂಡು ವರ್ಷಕಾಲದವರೆಗು ಕರ್ಮವನ್ನು ಜೀವರಾಶಿಗಳು ಅನುಭವಿಸುತ್ತಿವೆ. ಕಾಲಚಕ್ರದಲ್ಲಿ ರಾತ್ರಿ ಹಗಲು ಹೇಗೆ ಸಂಭವಿಸುತ್ತಿವೆ ಎಂದರೆ! ಕರ್ಮಚಕ್ರದಲ್ಲಿರುವ ಭಾಗಗಳನ್ನು ಕಾಲಚಕ್ರದಲ್ಲಿರುವ ಸೂರ್ಯನು ದಾಟುತ್ತಾ ಪ್ರಯಾಣ ಮಾಡುತ್ತಿರುತ್ತಾನೆ. ಒಂದೊಂದು ಭಾಗವನ್ನು ದಾಟುವುದಕ್ಕೆ ಸುಮಾರು ಎರಡು ಗಂಟೆಗಳ ಕಾಲ ಹಿಡಿಯುತ್ತದೆ. ಸೂರ್ಯೋದಯ ಮೊದಲುಗೊಂಡು ಆರು ಭಾಗಗಳು ದಾಟುವುದಕ್ಕೆ ಸುಮಾರು ಹನ್ನೆರಡು ಗಂಟೆಗಳು ಹಿಡಿಸುತ್ತದೆ. ಇದನ್ನೆ ಹಗಲಾಗಿ ನಾವು ನೋಡುತ್ತಿದ್ದೇವೆ. ಹಾಗೆ ಉಳಿದ ಆರು ಭಾಗಗಳು ದಾಟುವುದಕ್ಕೆ ಹನ್ನೆರಡು ಗಂಟೆಗಳ ಕಾಲ ಹಿಡಿಸುತ್ತದೆ. ಇದನ್ನೇ ರಾತ್ರಿ ಅನ್ನುತ್ತಿದ್ದೇವೆ. ನಮ್ಮ ಕಪಾಲದಲ್ಲಿರುವ ಕರ್ಮಚಕ್ರವನ್ನು ದಾಟುತ್ತಾ ಸೂರ್ಯನು ಕಾಲಚಕ್ರದಲ್ಲಿ ಪಯಣಿಸುತ್ತಿದ್ದಾನೆ. ಹೀಗೆ ಕಾಲಚಕ್ರದಲ್ಲಿ ಪಯಣಿಸುತ್ತಾ ಕರ್ಮಚಕ್ರದಲ್ಲಿನ ಹನ್ನೆರಡು ಭಾಗಗಳನ್ನು ದಾಟುವುದಕ್ಕೆ 24 ಗಂಟೆಗಳು ಕಾಲ ಹಿಡಿಯುತ್ತಿದೆ. 24 ಗಂಟೆಗಳನ್ನು ಒಂದು ದಿನ ಎಂದು ಅನ್ನುತ್ತಿದ್ದೇವೆ. ಕರ್ಮಚಕ್ರದಲ್ಲಿ ಮಧ್ಯರೇಖೆ ಇದೆ. ಮಧ್ಯರೇಖೆಗೆ ಎಡಗಡೆ ಆರು ಭಾಗಗಳು ಹಗಲು, ಬಲಗಡೆ ಆರು ಭಾಗಗಳು ರಾತ್ರಿಯಾಗಿ ಸೂರ್ಯಭ್ರಮಣದಲ್ಲಿ ತಿಳಿಯುತ್ತಿದೆ. ನಂತರ ಪುಟಗಳಲ್ಲಿ 5ನೇ ಚಿತ್ರದಲ್ಲಿ ರಾತ್ರಿ ಹಗಲು ಭಾಗಗಳನ್ನು ನೋಡಬಹುದು.

ಸೂರ್ಯನು ಕಾಲಚಕ್ರದಲ್ಲಿ ಪರಿಭ್ರಮಿಸುತ್ತಿದ್ದಾನಲ್ಲವೆ! ಕಾಲ ಚಕ್ರ ಹನ್ನೆರಡು ಭಾಗಗಳಲ್ಲವೆ! ಸೂರ್ಯನು ಕಾಲಚಕ್ರದಲ್ಲಿನ ಒಂದೊಂದು ಭಾಗವನ್ನು ದಾಟುವುದಕ್ಕೆ ಒಂದು ಮಾಸದ ಕಾಲ ಹಿಡಿಯುತ್ತದೆ. ಕಾಲಚಕ್ರದ ಹನ್ನೆರಡು ಭಾಗಗಳನ್ನು ಸೂರ್ಯನು ಪೂರ್ತಿ ದಾಟುವುದಕ್ಕೆ ಹನ್ನೆರಡು ಮಾಸಗಳು ಹಿಡಿಯುತ್ತದೆ ಅದನ್ನೇ ಒಂದು ಸಂವತ್ಸರ ಎಂದು ಹೇಳುತ್ತಿದ್ದೇವೆ. ಕಾಲಚಕ್ರದಲ್ಲಿ ಮಧ್ಯದಲ್ಲಿ ಜೀವರೇಖೆ ಇದೆ. ಜೀವರೇಖೆಗೆ ಎಡಗಡೆ ಇರುವ ಆರು ಭಾಗಗಳನ್ನು ಸೂರ್ಯನು ದಾಟುವುದಕ್ಕೆ ಆರು ಮಾಸಗಳು ಹಿಡಿಯುತ್ತದೆ. ಆ ಕಾಲವನ್ನೇ ಉತ್ತರಾಯಣವೆಂದು ಅನ್ನುತ್ತಿದ್ದೇವೆ. ಹಾಗೆ ಜೀವಿಯ ಬಲಗಡೆ ಇರುವ




(5ನೇ ಚಿತ್ರ) **ಕಾಲ ಚಕ್ರ**

ಆರು ಭಾಗಗಳನ್ನು ದಾಟುವುದಕ್ಕೆ ಆರು ಮಾಸಗಳು ಹಿಡಿಯುತ್ತವೆ ಆ ಕಾಲವನ್ನೇ ದಕ್ಷಿಣಾಯಣವೆಂದು ಅನ್ನುತ್ತಿದ್ದೇವೆ. ಉತ್ತರ ದಕ್ಷಿಣಾಯಣಗಳನ್ನು ಕೆಳಗಿರುವ 6ನೇ ಚಿತ್ರದಲ್ಲಿ ನೋಡಬಹುದು.




(6ನೇ ಚಿತ್ರ) **ಕಾಲಚಕ್ರ**

ಕಾಲಚಕ್ರದಲ್ಲಿ ಚಂದ್ರನು ಒಂದೊಂದು ಭಾಗವನ್ನು ದಾಟುವುದಕ್ಕೆ ಎರಡುವರೆ ದಿನ ಹಿಡಿಸುತ್ತದೆ. ಜೀವರೇಖೆಗೆ ಒಂದುಕಡೆ ಇರುವ ಆರು ಭಾಗಗಳನ್ನು ದಾಟುವುದಕ್ಕೆ 15 ದಿನಗಳು, ಮತ್ತೊಂದು ಕಡೆ ಇರುವ ಆರು ಭಾಗಗಳನ್ನು ದಾಟುವುದಕ್ಕೆ 15 ದಿನಗಳು ಹಿಡಿಯುತ್ತದೆ. ಚಂದ್ರನು ಹನ್ನೆರಡು ಭಾಗಗಳನ್ನು ದಾಟುವುದಕ್ಕೆ 30 ದಿನಗಳ ಕಾಲ ಹಿಡಿಯುತ್ತದೆ. ಚಂದ್ರನು ಜೀವರೇಖೆಗೆ ಎಡಗಡೆ ಇರುವ ಭಾಗಗಳನ್ನು ದಾಟುವ ಕಾಲವನ್ನು ಶುಕ್ಲಪಕ್ಷ ಎಂದೂ, ಬಲಗಡೆ ಇರುವ ಭಾಗಗಳನ್ನು ದಾಟುವಕಾಲವನ್ನು ಕೃಷ್ಣಪಕ್ಷ ಎಂದು ಅನ್ನುತ್ತಾರೆ. ಕೃಷ್ಣ, ಶುಕ್ಲ ಪಕ್ಷಗಳನ್ನು ಕೆಳಗಿರುವ 7ನೇ ಚಿತ್ರದಲ್ಲಿ ನೋಡಬಹುದು.




(7ನೇ ಚಿತ್ರ) **ಕಾಲಚಕ್ರ**

ಈ ವಿಧವಾಗಿ ಕಾಲಚಕ್ರದಲ್ಲಿ ರಾತ್ರಿಹಗಲು, ಶುಕ್ಲ, ಕೃಷ್ಣ ಪಕ್ಷಗಳು ಆಯನಗಳು ನಡೆಯುತ್ತಿವೆ. ಜೀವಿಗೆ ಯೋಗದಿಂದ ಲಭಿಸಿದ ಯೋಗಶಕ್ತಿ ಎಲ್ಲವೂ ಕರ್ಮ ಕಾಲಚಕ್ರ ಮಧ್ಯದಲ್ಲಿರುವ ಗುರುಕೇಂದ್ರವನ್ನು ಸೇರುತ್ತಿರುತ್ತದೆ. ಯಾರಿಗೆ ಯೋಗಶಕ್ತಿ ಪರಿಪೂರ್ಣಸ್ಥಿತಿಗೆ ಬರುತ್ತದೋ ಅವನಿಗೆ ಸೂರ್ಯನು ಜೀವರೇಖೆಗೆ ಎಡಗಡೆ ಇರುವಾಗಲೇ, ಮತ್ತು ಸೂರ್ಯನು ಕರ್ಮಚಕ್ರದ

ಮೇಲೆ ಸಹ ಜೀವರೇಖೆಗೆ ಎಡಗಡೆ ಇರುವಾಗಲೆ, ಚಂದ್ರನು ಸಹ ಕಾಲಚಕ್ರದಲ್ಲಿ ಜೀವರೇಖೆಗೆ ಎಡಗಡೆ ಇರುವಾಗಲೆ ಮರಣ ಸಂಭವಿಸುತ್ತದೆ. ಆ ವಿಧವಾಗಿ ಮರಣಿಸಿದ ಜೀವಿಯು ಮಧ್ಯದಲ್ಲಿರುವ ಕೇಂದ್ರದೊಳಗೆ ಹೋಗುತ್ತಿದ್ದಾನೆ. ಅಂದರೆ ಆತ್ಮನಲ್ಲಿ ಲೀನವಾಗುತ್ತಿದ್ದಾನೆ. ಇತರ ಸಮಯಗಳಲ್ಲಿ ಮರಣಿಸಿದ ಜೀವಿಯು ಕೇಂದ್ರದಲ್ಲಿರುವ ಆತ್ಮವನ್ನು ಸೇರುವುದಿಲ್ಲ. ಹಗಲು, ಶುಕ್ಲಪಕ್ಷ ಉತ್ತರಾಯಣ ಕಲೆತ ಕಾಲದಲ್ಲಿ ಆತ್ಮವನ್ನು ಸೇರುವುದಕ್ಕೆ ಜೀವಿಗೆ ಮಾರ್ಗ ಏರ್ಪಡುತ್ತದೆ. ಹಾಗಲ್ಲದೆ ಹೋದರು ದಾರಿ ಇರುವುದಿಲ್ಲ. ಈ ಮಾರ್ಗಗಳನ್ನು ಕೆಳಗೆ 8ನೇ ಚಿತ್ರದಲ್ಲಿ ನೋಡಬಹುದು.




8ನೇ ಚಿತ್ರ

ರಾತ್ರಿ, ಶುಕ್ಲ ಪಕ್ಷ, ದಕ್ಷಿಣಾಯನದಲ್ಲಿ ಮರಣಿಸಿದ ಜೀವಿಯು ಆತ್ಮವನ್ನು ಸೇರಲಾರನು. ಆ ಸಮಯದಲ್ಲಿ ಮರಣಿಸಿದ ಜೀವಿಗೆ ಕಾಲಚಕ್ರದಲ್ಲಿ ಆತ್ಮವನ್ನು ಸೇರುವ ಮಾರ್ಗ ಲಭಿಸುವುದಿಲ್ಲ. ರಾತ್ರಿ, ಶುಕ್ಲಪಕ್ಷ, ದಕ್ಷಿಣಾಯಣದಲ್ಲಿ ಕಾಲಚಕ್ರದಲ್ಲಿ ಮಾರ್ಗಗಳು ಹೇಗೆ ಇವೆ. ನಂತರ ಪುಟದಲ್ಲಿ 9ನೇ ಚಿತ್ರದಲ್ಲಿ ನೋಡಬಹುದು.




9ನೇ ಚಿತ್ರ

ಹಗಲು, ಶುಕ್ಲಪಕ್ಷ, ದಕ್ಷಿಣಾಯಣದಲ್ಲಿ ಮರಣಿಸಿದ ಜೀವಿಯು ಆತ್ಮವನ್ನು ಸೇರುವುದಿಲ್ಲ. ಆ ಸಮಯದಲ್ಲಿ ಮರಣಿಸಿದ ಜೀವಿಗೆ ಕಾಲಚಕ್ರದಲ್ಲಿ ಆತ್ಮವನ್ನು ಸೇರುವ ಮಾರ್ಗ ಇರುವುದಿಲ್ಲ. ಹಗಲು ಶುಕ್ಲಪಕ್ಷ, ದಕ್ಷಿಣಾಯಣದಲ್ಲಿ ಕಾಲಚಕ್ರದಲ್ಲಿ ಮಾರ್ಗ ಹೇಗೆ ಇದೆ. ಕೆಳಗಿರುವ 10ನೇ ಚಿತ್ರದಲ್ಲಿ ನೋಡಬಹುದು.




10ನೇ ಚಿತ್ರ

ಆತ್ಮವನ್ನು ಸೇರುವುದಕ್ಕೆ ಎಲ್ಲಾ ದ್ವಾರಗಳು ಒಂದೇ ಕಡೆ, ಅಂದರೆ ಎಡಗಡೆಯೇ ಬಂದು ಇರಬೇಕು. ಹಾಗಲ್ಲದೆ ಕಾಲಚಕ್ರದಲ್ಲಿ ಯಾವ ದ್ವಾರ ಬಲಗಡೆಗೆ ಹೋದರು ಜೀವಿಗೆ ಎಡಗಡೆ ಮಾರ್ಗವು ಲಭಿಸದೆ ಮತ್ತೆ ಬೇರೆ ಶರೀರವನ್ನು ಆಶ್ರಯಿಸಿ ಹುಟ್ಟುತ್ತಿರುತ್ತಾನೆ. ಇದು ಯೋಗಿಗಳಿಗೆ ಮಾತ್ರ ನಿರ್ಣಯಿಸಲ್ಪಟ್ಟಿದೆ.

ಯೋಗಿ ಉತ್ತರಾಯಣದಲ್ಲಿ, ಕೃಷ್ಣಪಕ್ಷದಲ್ಲಿ ಹಗಲು ಮರಣಿಸಿದರೂ ಆತ್ಮವನ್ನು ಸೇರಲಾರನು. ಆ ಸಮಯದಲ್ಲಿ ಮರಣಿಸಿದ ಯೋಗಿಗೆ ಕಾಲಚಕ್ರದಲ್ಲಿ ಆತ್ಮವನ್ನು ಸೇರುವ ಮಾರ್ಗ ಇರುವುದಿಲ್ಲ. ಆ ಸಮಯದಲ್ಲಿ ಕಾಲಚಕ್ರ ಹೇಗಿರುತ್ತದೆಂದರೆ ಕೆಳಗಿರುವ 11ನೇ ಚಿತ್ರದಲ್ಲಿ ನೋಡಬಹುದು.




11ನೇ ಚಿತ್ರ

ಹೀಗೆ ಜೀವಿಗೆ ಆತ್ಮವನ್ನು ಸೇರುವುದಕ್ಕೆ ಮಾರ್ಗ ಲಭಿಸದೆ ಮತ್ತೆ ಜನ್ಮ ಎತ್ತುವುದು ಸಂಭವಿಸುತ್ತಿದೆ. ಇದನ್ನು ಕುರಿತು ಭಗವದ್ಗೀತಾಶಾಸ್ತ್ರದಲ್ಲಿ ಅಕ್ಷರಪರಬ್ರಹ್ಮ ಯೋಗದಲ್ಲಿ ಶ್ರೀಕೃಷ್ಣಪರಮಾತ್ಮ ಈ ವಿಧವಾಗಿ ಹೇಳಿದ್ದಾನೆ. **"ಅರ್ಜುನಾ ಯೋಗಿಗಳು ಯಾವಾಗ ಮರಣಿಸಿದರು ಮತ್ತೆ ಜನ್ಮಿಸುವುದಿಲ್ಲವೋ ಮತ್ತು ಎಂತಹ ಸಮಯದಲ್ಲಿ ಮರಣಿಸಿದರೆ ಅವರು ಮತ್ತೆ ಭೂಮಿಮೇಲೆ**

**ಹುಟ್ಟುತ್ತಾರೋ ತಿಳಿಸುತ್ತೇನೆ ಕೇಳು. ಸೂರ್ಯತೇಜಸ್ಸು ಹೊಂದಿದ ಸ್ಥಳದಲ್ಲಿ ಹಗಲಿನಲ್ಲಿ, ಶುಕ್ಲಪಕ್ಷದಲ್ಲಿ, ಉತ್ತರಾಯಣದಲ್ಲಿ ಯೋಗಿಗಳು ಮರಣಿಸಿರೂ ಅವರಿಗೆ ಆತ್ಮವನ್ನು ಸೇರುವ ಭಾಗ್ಯ ಉಂಟಾಗುತ್ತದೆ. ಹಾಗಲ್ಲದೆ ಮೇಘವಿರುವ ಪ್ರಾಂತದಲ್ಲಿ ರಾತ್ರಿಯಲ್ಲಿ, ಕೃಷ್ಣಪಕ್ಷದಲ್ಲಿ, ದಕ್ಷಿಣಾಯಣದಲ್ಲಿ ಯೋಗಿಗಳು ಮರಣಿಸಿದರೂ, ಅವರು ಚಂದ್ರತೇಜಸ್ಸು ಹೊಂದಿ ಮತ್ತೆ ಜನ್ಮಿಸುತ್ತಾರೆ"** ಪೂರ್ತಿ ಯೋಗಪರರು ಮರಣಿಸಿದ ಆ ಸಮಯ ಹಗಲಾಗಿಯೆ, ಶುಕ್ಲಪಕ್ಷವಾಗಿಯೆ, ಉತ್ತರಾಯಣ ವಾಗಿಯೆ ಇರುತ್ತದೆ. ಪ್ರಪಂಚದಲ್ಲಿ ಸ್ವಾಮಿಗಳೆನಿಸಿಕೊಂಡರೂ ಕರ್ಮ ಪೂರ್ತಿ ಮುಗಿದುಹೋಗದೆ ಹೋದರೆ ಅವರು ಮರಣಿಸುವ ಸಮಯ ರಾತ್ರಿಯಾಗಿಯೊ, ಕೃಷ್ಣಪಕ್ಷವಾಗಿಯೊ, ದಕ್ಷಿಣಾಯಣವಾಗಿಯೋ ಇರುತ್ತದೆ. ಆದ್ದರಿಂದ ಬದುಕಿರುವ ಬದುಕೆಲ್ಲವೂ ಸಾವಿನಲ್ಲಿಯೆ ತಿಳಿಯುತ್ತದೆ ಎಂದು ಹಿರಿಯರು ಅಂದಿದ್ದಾರೆ.

ಕಾಲಚಕ್ರದಲ್ಲಿ ಸೂರ್ಯನ ಮೂಲಕ ದಿನಗಳು, ತಿಂಗಳು ಗಳು (ಆಯನಗಳು), ಸಂವತ್ಸರಗಳು, ಲೆಕ್ಕಿಸಿಕೊಳ್ಳುತ್ತಿದ್ದೇವೆ. ಈ ಲೆಕ್ಕ ಪ್ರಕಾರ ನಮಗೆ ಯುಗಗಳು ಕಳೆಯುತ್ತಿವೆ. ಒಂದು ಯುಗದಲ್ಲಿ ನಾವು ಶತಕೋಟಿ ಅಥವಾ ಅದಕ್ಕಿಂತ ಹೆಚ್ಚು ಜನ್ಮಗಳು ಎತ್ತಬೇಕಾಗಿರುತ್ತದೆ. ಇಂತಹ ಯುಗಗಳು ಸಾವಿರ ಆದರೂ ಪರಮಾತ್ಮ ಲೆಕ್ಕದಲ್ಲಿ ಒಂದು ಹಗಲು, ಹಾಗೆ ಸಾವಿರ ಯುಗಗಳು ಪರಮಾತ್ಮ ಲೆಕ್ಕದಲ್ಲಿ ಒಂದು ರಾತ್ರಿ. ಈ ಹಗಲು ರಾತ್ರಿಗಳು ಎಂಥವೆಂದರೆ, ಪರಮಾತ್ಮನಿಗೆ ಹಗಲಾದ ಸಾವಿರಯುಗಗಳ ಕಾಲದಲ್ಲಿ ಜೀವರಾಶಿಗಳಿಗೆ ಹುಟ್ಟು ಸಾವುಗಳು ಉಂಟಾಗುತ್ತಿರುತ್ತದೆ. ಪರಮಾತ್ಮ ಹಗಲು (ಬ್ರಹ್ಮ ಹಗಲು) ಸಾವಿರಯುಗಗಳು ಕಳೆದ ತಕ್ಷಣ ಬ್ರಹ್ಮರಾತ್ರಿ ಪ್ರಾರಂಭವಾಗುತ್ತದೆ. ರಾತ್ರಿ ಪ್ರಾರಂಭವಾದ ತಕ್ಷಣ ಜೀವಿಗಳೆಲ್ಲವೂ ಪ್ರಳಯ ಹೊಂದುತ್ತವೆ. ರಾತ್ರಿಕಾಲ ಸಾವಿರಯುಗಗಳು ಕಳೆಯುವರೆಗು ಜೀವಿಗಳಾಗಲಿ, ಪ್ರಕೃತಿಯಾಗಲಿ ಯಾವುದು ಇರುವುದಿಲ್ಲ. ಅಂದರೆ ಕಾಲಚಕ್ರ, ಕರ್ಮಚಕ್ರಗಳು ಇಲ್ಲ. ಎಲ್ಲವೂ ಊಹಿಸಲಾರದ ಶೂನ್ಯವಾಗಿರುತ್ತದೆ. ಬ್ರಹ್ಮ ರಾತ್ರಿಕಾಲ ಸಾವಿರಯುಗಗಳು ಕಳೆದ ನಂತರ ಹಗಲು

ಬಂದ ತಕ್ಷಣ ಪ್ರಕೃತಿ ಹುಟ್ಟುತ್ತದೆ. (ಭಗವದ್ಗೀತೆ ಅಕ್ಷರ ಪರಬ್ರಹ್ಮಯೋಗದಲ್ಲಿ 17, 18, 19, 20 ಶ್ಲೋಕಗಳು ನೋಡಿರಿ) ಬ್ರಹ್ಮಹಗಲು, ಬ್ರಹ್ಮರಾತ್ರಿಯನ್ನು ಕೆಳಗಿರುವ 12ನೇ ಚಿತ್ರದಲ್ಲಿ ನೋಡಬಹುದು.




12ನೇ ಚಿತ್ರ

ಈ ವಿಧವಾಗಿ ಬ್ರಹ್ಮಚಕ್ರ ಸಾವಿರಯುಗಗಳು ಹಗಲಾಗಿ, ಸಾವಿರ ಯುಗಗಳು ರಾತ್ರಿಯಾಗಿ ಪರಿಭ್ರಮಿಸುತ್ತಿದೆ. ಓ ಜೀವಿಗಳಿರಾ! ಇಲ್ಲಿಯವರೆಗೂ ತಿಳಿದುಕೊಂಡ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳಲ್ಲಿ ಸಿಲುಕಿಕೊಳ್ಳದೆ ಅವುಗಳನ್ನು ದಾಟಿ ಆತ್ಮವನ್ನು ಸೇರಿದರೆ ಯಾವ ಬಾಧೆಗಳು ಇರುವುದಿಲ್ಲ. ಆದ್ದರಿಂದ ಇಂದಿನಿಂದ ಪಾಪಪುಣ್ಯಗಳನ್ನು ಕರ್ಮಚಕ್ರದೊಳಗೆ ಸೇರದಂತೆ ಮಾಡಿ ಕೊಳ್ಳಬೇಕೆಂದು ನಿನಗೇ.....ನಿನಗೇ....ಮತ್ತೆ......ಮತ್ತೆ ....ತಿಳಿಸುತ್ತಿದ್ದೇನೆ.

ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಚಿತ್ರವನ್ನು ನಂತರ ಪೇಜಿನಲ್ಲಿ 13ನೇ ಚಿತ್ರದಲ್ಲಿ ನೋಡಬಹುದು.



ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಚಿತ್ರ (13ನೇ ಚಿತ್ರ)

# ಸಗುಣ – ಸಾಕಾರ – ನಿರಾಕಾರಗಳು

ಸಾಕಾರ ಎಂದರೆ ಕಣ್ಣಿಗೆ ಕಾಣಿಸುವುದೆಂದು, ನಿರಾಕಾರವೆಂದರೆ ಕಣ್ಣಿಗೆ ತಿಳಿಯದಿರುವುದೆಂದು ಎಲ್ಲರಿಗೂ ತಿಳಿದ ಸತ್ಯವೆ. ಈಗ ಸಾಕಾರವೆಂದರೆ ಏನು, ನಿರಾಕಾರ ಎಂದರೆ ಏನೆಂದು ತಿಳಿದುಕೊಳ್ಳುವುದೇ ಮುಖ್ಯಾಂಶ. ಇಂದಿನ ಮಾನವರ ಅಭಿಪ್ರಾಯಗಳಲ್ಲಿ ಸಾಕಾರವೆಂದರೆ ಕಣ್ಣಿಗೆ ಕಾಣಿಸುವ ದೇವಾಲಯಗಳಲ್ಲಿನ ಪ್ರತಿಮೆಗಳೆಂದು, ನಿರಾಕಾರವೆಂದರೆ ಕಾಣಿಸದ ಆತ್ಮ ಎಂದು ಭಾವನೆ ಇರುವುದುಂಟು. ಸಾಕಾರವನ್ನು (ಪ್ರತಿಮೆಯನ್ನು) ಪೂಜಿಸುವುದನ್ನು ಸಗುಣೋಪಾಸನೆ ಎಂದು ನಿರಾಕಾರವನ್ನು (ಆತ್ಮವನ್ನು) ಪೂಜಿಸುವುದು ನಿರ್ಗುಣೋಪಾಸನೆ ಎಂದು ತಿಳಿಯುವುದು ಸಹ ಇದೆ. ಈ

ವಿಷಯವನ್ನು ಸ್ವಲ್ಪಮಟ್ಟಿನ ಜ್ಞಾನ ತಿಳಿದವರೆಲ್ಲರಿಗೂ ವಿಧಿತವಾದ ವಿಷಯವೆ. ಅಲ್ಲಿಗೆ ಸುಮ್ಮನಾಗದೆ ಸಗುಣ ನಿರ್ಗುಣ ಉಪಾಸನೆಗಳು, ಸಾಕಾರ ನಿರಾಕಾರಗಳೊಂದರ ಸಾರಾಂಶ ಇಷ್ಟೇನಾ ಎಂಬ ಪ್ರಶ್ನೆ ಉದ್ಭವಿಸಿದಾಗ ಇನ್ನು ಏನಾದರೂ ಅರ್ಥ ಇದೆಯೇನೋ ಎಂದು ಯೋಚಿಸಬೇಕಾಗಿ ಬರುತ್ತದೆ.

ದೇವಾಲಯದೊಳಗೆ ಹೋಗಿಬರುವವರು ನಿಜವಾದ ಭಕ್ತಿಯಿಂದ ಹೋಗಬೇಕೆಂದು, ಹೋದವರು ಅಲ್ಲಿರುವ ಸ್ವಲ್ಪಸಮಯ ನಿಶ್ಚಿಂತೆಯಿಂದ ಇರಬೇಕೆಂದು ಆ ವಿಧಾನವನ್ನು ತಿಳಿಸುವುದೇ ಅಲ್ಲಿನ ಆರಾಧನೆ ಸಾರಾಂಶವೆಂದು ನಮ್ಮ ರಚನೆಯಲ್ಲಿನ **ದೇವಾಲಯ ರಹಸ್ಯಗಳು** ಎನ್ನುವ ಪುಸ್ತಕದಲ್ಲಿ ಸಹ ತಿಳಿಸಿದ್ದೇವೆ. ದೈವ ಪ್ರತಿಮೆ ಸಮೀಪಕ್ಕೆ ಹೋದಾಗ ನಮ್ಮ ತಲೆಯಲ್ಲಿನ ಗುಣಗಳ ಕದಲಿಕೆಗಳನ್ನು ಅಡಗಿಸಿ ಒಂದು ಕ್ಷಣವಾದರು ಏಕಾಗ್ರತೆಯಾಗಿ ಮನಸ್ಸನ್ನಿರಿಸುವುದೇ ಮುಖ್ಯ ಆರಾಧನೆ ಎಂದು ಎಷ್ಟೋ ಜನ ಹಿರಿಯರು ಸಹ ತಿಳಿಸಿದ್ದಾರೆ. ದೈವ ಪ್ರತಿಮೆ ಮುಂದೆ ಸಹ ಪ್ರಪಂಚ ವಿಷಯಗಳೇ ಜ್ಞಾಪಕವಿದ್ದರೆ ಅದು ಆರಾಧನೆಯಲ್ಲವೆಂದು, ಅಂಥದರಲ್ಲಿ ದೇವಾಲಯಗಳಿಗೆ ಹೋಗಿ ಪ್ರಯೋಜನೆ ಇಲ್ಲವೆಂದು ಸಹ ಹಿರಿಯರು ಹೇಳಿದ್ದಾರೆ. ನಿಜವಾದ ಆರಾಧನೆ ಎಂದರೆ ಮನಸ್ಸು ಸ್ವಲ್ಪಸಮಯವಾದರು ನಿಲ್ಲಿಸಬೇಕು. ಅಂದರೆ ಸ್ವಲ್ಪವೂ ಗುಣಗಳು ಕೆಲಸ ಮಾಡದ ಸ್ಥಿತಿಯಲ್ಲಿ ಇರಬೇಕು. ಆಗ ಯಾವ ಒಂದು ಗುಣ ಕೆಲಸಮಾಡಿದರು ಅದಕ್ಕೆ ಸಂಬಂಧಿಸಿದ ವಿಷಯ ಜ್ಞಾಪಕ ಬರುತ್ತದೆ. ಆದ್ದರಿಂದ ಪೂರ್ತಿಯಾಗಿ ಗುಣಗಳಿಗೆ ದೂರವಾಗಿ ಇರುವುದೇ ಮುಖ್ಯ.

ಪದ್ಧತಿ ಪ್ರಕಾರ ವಿಷಯಚಿಂತನೆ ಇಲ್ಲದಂತೆ ಮನಸ್ಸನ್ನು ದೇವರ ಮೇಲೆ ಲಗ್ನ ಮಾಡಿದಾಗ ಗುಣಗಳು ಎಷ್ಟು ಮಾತ್ರ ಇಲ್ಲವಲ್ಲ! ಅಂತಹ ಆರಾಧನೆಯನ್ನು ಸಗುಣೋಪಾಸನೆ ಎಂದು ಏಕೆ ಅಂದಿದ್ದಾರೆಂಬ ಪ್ರಶ್ನೆ ಉದ್ಭವಿಸದೆ ಇರದು. ಗುಣರಹಿತವಾದ ಮನಸ್ಸನ್ನು ದೇವರ ಮೇಲೆ ಲಗ್ನ ಮಾಡಿದಾಗ ಗುಣರಹಿತ ಪೂಜೆಯೇ (ನಿರ್ಗುಣೋಪಾಸನೆಯೇ) ಆಗುತ್ತದೆ. ಆದರೆ ಸಗುಣಪೂಜೆ ಹೇಗೆ ಆಗುತ್ತದೆ? ಯಾವ ಪೂಜೆಯಾದರು ಗುಣಗಳನ್ನು

ಅಡಗಿಸಿ ನಿರ್ಗುಣವಾಗಿಯೇ ಪೂಜಿಸಬೇಕಾಗಿ ಬಂದಾಗ ನಿರ್ಗುಣ ಪೂಜೆಯೇ ಆಗುತ್ತದೆ. ಅಂತಹ ದೈವರಾಧನೆಗಳಲ್ಲಿ ಸಗುಣ ಎನ್ನುವ ಪದ ಹೇಗೆ ಬಂದಿದೆ? ಈ ಸಗುಣೋಪಾಸನೆಗೇನಾದರು ಅರ್ಥವಿದೆಯಾ? ಎಂದು ಯೋಚಿಸುವವರಿಗೆ ಪ್ರಶ್ನೆ ಉದ್ಭವಿಸದೆ ಇರುವುದಿಲ್ಲ. ಹಾಗೆ ಪ್ರಶ್ನೆ ಬಂದಾಗ ಉತ್ತರ ಸಿಗುವುದು ಸಹ ಬಹಳ ಕಷ್ಟತರವಾದ ಕೆಲಸವೆ.

ಬಹಳಜನ ವಿಮರ್ಶಕರಿಗೆ ಇಂತಹ ಪ್ರಶ್ನೆಗಳು ಉದ್ಭವಿಸಿ ಪದ್ಧತಿ ಪ್ರಕಾರ ಉತ್ತರಗಳು ಸಿಗದೆ ಕೊನೆಗೆ ನಮ್ಮ ಹತ್ತಿರಕ್ಕೆ ಬಂದು ನಮ್ಮನ್ನು ಉತ್ತರಕ್ಕೋಸ್ಕರ ಕೇಳಿದ್ದಾರೆ ನಮ್ಮ ಸಂಭಾಷಣೆ ಕೆಳಗೆ ಬರೆಯುತ್ತಿದ್ದೇವೆ.

**ಅವರ ಪ್ರಶ್ನೆ ॥** ಸಗುಣ ಪೂಜೆ (ಸಗುಣೋಪಾಸನೆ) ದೇವಾಲಯಗಳಲ್ಲಿ ಪ್ರತಿಮೆಗಳನ್ನು ಪೂಜಿಸುವುದೆಂದು ಬಹಳ ಮಂದಿ ಹಿರಿಯರು ಹೇಳಿದ್ದಾರೆ. ಆ ಹಿರಿಯರೆ ದೇವಾಲಯದಲ್ಲಿನ ದೈವಪ್ರತಿಮೆಗಳ ಮುಂದಕ್ಕೆ ಹೋದಾಗ ಯಾವ ಗುಣ ಕೆಲಸ ಮಾಡದ ವಿಧವಾಗಿ ಏಕಾಗ್ರತೆಯಿಂದ ಪೂಜಿಸಬೇಕೆಂದು, ಆ ಭಾವವೇ ಅಲ್ಲಿರುವ ಗಂಟೆ ಮೊದಲುಗೊಂಡು ಪ್ರತಿಮೆವರೆಗೂ ಇವೆಯೆಂದು, ಮತ್ತು ನಾವು ಮಾಡುವ ಪೂಜೆಗಳಲ್ಲಿ ದೀಪ, ತಾಂಬೂಲ ಮೊದಲುಗೊಂಡು ಎಲ್ಲಾ ಆಚರಣೆಗಳು ಅದೇ ಅರ್ಥವನ್ನು ತಿಳಿಸುತ್ತಿವೆ ಎಂದು, ಆದ್ದರಿಂದ ಗುಡಿಗೆ ಹೋದಾಗ ನಮ್ಮಲ್ಲಿನ ಮನಸ್ಸು ಯಾವ ಗುಣಗಳ ಕಡೆ ಹೋಗದಂತೆ ದೇವರ ಮೇಲೆ ಲಗ್ನ ಮಾಡಬೇಕೆಂದು ತಿಳಿಸಿದ್ದಾರೆ. ಹಾಗೆ ಯಾವ ಗುಣ ಇಲ್ಲದಂತೆ ಮನಸ್ಸನ್ನು ದೇವರ ಮೇಲೆ ಲಗ್ನ ಮಾಡಿದ್ದೇವೆ ಅಂದುಕೊಳ್ಳಿ ಆಗ ಅದು ಸಗುಣ ಪೂಜೆ ಹೇಗಾಗುತ್ತದೆ? ನಿರ್ಗುಣ (ಗುಣವಿಲ್ಲದ) ಪೂಜೆಯೇ ಆಗುತ್ತದಲ್ಲ! ಈ ವಿಷಯವನ್ನು ನೀವು ವಿವರಿಸಿ ತಿಳಿಸಬೇಕೆಂದು ಕೋರುತ್ತಿದ್ದೇವೆ.

**ನಮ್ಮ ಉತ್ತರ :** ನಿಮಗೆ ಬಂದ ಅನುಮಾನ ಹೇತುಪದ್ಧತಿಯಾಗಿಯೇ ಇದೆ. ಭೂಮಿ ಮೇಲೆ ಎಷ್ಟೋ ದೈವಭಕ್ತರು ಉಪಾಸಕರು ಇದ್ದಾರೆ. ಆಂಜನೇಯ ಸ್ವಾಮಿಯನ್ನು ಪೂಜಿಸುವವರನ್ನು ಆಂಜನೇಯ ಉಪಾಸಕರು ಎನ್ನುತ್ತಿದ್ದೇವೆ.

ದೇವಿಯನ್ನು ಪೂಜಿಸುವವರನ್ನು ದೇವಿ ಉಪಾಸಕರೆಂದು ಅನ್ನುತ್ತಿದ್ದೇವೆ. ಹಾಗೆ ಕಾಳಿಕಾದೇವಿಯನ್ನು ಪೂಜಿಸುವವರನ್ನು ಕಾಳಿ ಉಪಾಸಕರೆಂದು ಅನ್ನುತ್ತಿದ್ದೇವೆ. ಈ ವಿಧವಾಗಿ ಯಾವ ದೇವರನ್ನು ಪೂಜಿಸಿದರೆ ಆ ದೇವರ ಉಪಾಸಕರೆಂದು ಅವರನ್ನು ಎನ್ನುವುದು ನಾವು ನೋಡುತ್ತಿದ್ದೇವೆ. ಹಾಗೆಯೇ ನಿರ್ಗುಣೋಪಾಸನೆ ಅಂದಾಗ ಗುಣಗಳಿಲ್ಲದಿರುವುದನ್ನು ಪೂಜಿಸುವುದೆಂದು ಪದ್ಧತಿ ಪ್ರಕಾರ ಹೇಳಬೇಕಾಗಿ ಬರುತ್ತದೆ. ಆಂಜನೇಯೋಪಾಸನೆಯೆಂದು ಆಂಜನೇಯನ ಪೂಜೆಯನ್ನಂದರೆ, ಸಗುಣೋಪಾಸನೆ ಎಂದು ಗುಣಗಳಿರುವುದನ್ನು ಪೂಜಿಸುವುದನ್ನೆ ಅನ್ನಬೇಕಲ್ಲವೆ! ಈ ಸೂತ್ರದ ಪ್ರಕಾರ ವಿವರಿಸಿದರೆ ಎದುರುಗಿರುವುದನ್ನು ಪೂಜಿಸುವುದರಲ್ಲಿ ಅದರ ಆರಾಧನೆ ಅಥವಾ ಉಪಾಸನೆ ಎಂದು ಹೆಸರು ಹೊಂದಿದೆಯಾಗಲಿ ಮಾಡುತ್ತಿರುವವನನ್ನನುಸರಿಸಿ ಅಲ್ಲವೆಂದು ತಿಳಿಯಬೇಕು.

ಮಾಡುವ ಪೂಜೆ ಗುಣಗಳಿರುವುದಕ್ಕಾದರೆ ಸಗುಣ ಪೂಜೆ ಎನ್ನುವುದು, ಹಾಗೆ ಗುಣಗಳು ಇಲ್ಲದಿರುವುದಕ್ಕಾದರೆ ನಿರ್ಗುಣಪೂಜೆ ಎನ್ನುವುದು ಸರಿಯಾದ ಪದ್ಧತಿ. ಈ ಸೂತ್ರದ ಪ್ರಕಾರ ಗುಡಿಯಲ್ಲಿನ ಪ್ರತಿಮೆಗೆ ಮಾಡುವ ಪೂಜೆಯನ್ನು ಏನನ್ನಬೇಕೋ ನೀವೇ ಯೋಚಿಸಿರಿ. ಆ ಪ್ರತಿಮೆ ಗುಣಗಳು ಇಲ್ಲದಿರುವುದು, ಕದಲಿಕೆ ಇಲ್ಲದಿರುವುದಾದ್ದರಿಂದ ಆ ಪ್ರತಿಮೆ ಪೂಜೆಯನ್ನು ನಿರ್ಗುಣೋಪಾಸನೆ ಎಂದೇ ಅನ್ನಬೇಕು. ಎದುರುಗಡೆ ಏನು ಇದ್ದರೆ ಅದರ ಉಪಾಸನೆ ಎಂದು ಹೆಸರು ಬಂದಿದೆ, ಆದರೆ ಮಾಡುವವನನ್ನನುಸರಿಸಿ ಅಲ್ಲವೆಂದು ತಿಳಿಯಬೇಕು. ಎದುರಿಗೆ ಏನು ಇಟ್ಟುಕೊಂಡು ಮಾಡಿದರೆ ಆ ಉಪಾಸಕನೆಂದು ಹೆಸರು ಬರುತ್ತದೆ. ಆದ್ದರಿಂದ ಪೂಜಿಸುವವನ ಎದುರುಗಡೆ ಆಂಜನೇಯಸ್ವಾಮಿ ಇದ್ದಾನೆಂದುಕೊಳ್ಳಿ. ಅದನ್ನು ಆಂಜನೇಯಸ್ವಾಮಿ ಉಪಾಸನೆ ಎಂದು ಅನ್ನುತ್ತಾರೆ.

ಇದನ್ನನುಸರಿಸಿ ನೋಡಿದರೆ ಎಷ್ಟೋ ಜನ ಮಾಡುವ ಪೂಜೆಗಳನ್ನು ಎರಡು ಭಾಗಗಳಾಗಿ ವಿಭಜಿಸಬಹುದು. **1) ನಿರ್ಗುಣೋಪಾಸನೆ 2) ಸಗುಣೋಪಾಸನೆ.** ಗುಣಗಳಿರುವುದನ್ನು ಪೂಜಿಸುವುದನ್ನು ಸಗುಣೋಪಾಸನೆ ಎಂದು

ಸೂತ್ರಬದ್ಧವಾಗಿ ಹೇಳಬಹುದು. ಹಾಗಾದರೆ ದೇವಾಲಯಗಳಲ್ಲಿ ಎಷ್ಟೋ ವಿಧಗಳ ಪ್ರತಿಮೆಗಳನ್ನು ಪೂಜೆಮಾಡುವವರೆಲ್ಲರನ್ನು ಒಂದು ಗುಂಪಾಗಿ ನಿರ್ಗುಣೋಪಾಸಕರೆಂದೇ ಹೇಳಬಹುದು. ಇಲ್ಲಿಯವರೆಗೂ ದೇವಾಲಯಗಳಲ್ಲಿನ ಪ್ರತಿಮೆಗಳ ಮುಂದೆ ಪೂಜಿಸುವುದನ್ನು ಸಗುಣೋಪಾಸನೆ ಎಂದು ನೀವು ಅಂದುಕೊಳ್ಳುತ್ತಿದ್ದೀರಿ. ಅಲ್ಲಿಯೇ ನೀವು ತಪ್ಪಾಗಿ ತಿಳದಿದ್ದೀರಾ ಆದ್ದರಿಂದ ನಿಮಗೆ ಉದ್ಭವಿಸಿದ ಪ್ರಶ್ನೆಗೆ ಉತ್ತರ ಸಿಗದಂತಾಗಿದೆ. ದಾರಿ ಪ್ರಕಾರ ಹೋಗುವವನಿಗೆ ಆತಂಕಗಳು ಇರುವುದಿಲ್ಲ, ದಾರಿ ತಪ್ಪಿದರೆ ಆತಂಕಗಳು ಏರ್ಪಡುತ್ತವೆ. ಹಾಗೆಯೇ ಒಂದು ಸೂತ್ರ ಪದ್ಧತಿ (ಶಾಸ್ತ್ರ ಪದ್ಧತಿ) ಪ್ರಕಾರ ಯೋಚಿಸುವವನಿಗೆ ಉತ್ತರಗಳು ಸಿಗುತ್ತವೆ. ಪ್ರಶ್ನೆಗಳೆನ್ನುವ ಸಂಶಯಗಳು ಏರ್ಪಡುವುದಿಲ್ಲ. ಸೂತ್ರಪದ್ಧತಿ ಪ್ರಕಾರ ಯೋಚಿಸುವವರಿಗೆ ತಪ್ಪದೆ ಉತ್ತರಗಳು ಇರುತ್ತವೆ.

ಈಗ ದೇವಾಲಯ ಪೂಜೆಗಳನ್ನು ಸಗುಣಪೂಜೆ ಅಂದುಕೊಳ್ಳುವುದು ತಪ್ಪೆಂದು ಅದು ನಿರ್ಗುಣ ಪೂಜೆಯೇ ಎಂದು ತಿಳಿದಿದೆ. ಈಗೊಂದು ತಿಳಿಯದ ಸತ್ಯ ತಿಳಿದಿದೆ. ಈ ಸತ್ಯವನ್ನು ತಿಳುವಳಿಕೆ ಇರುವವರು ಅರ್ಥಮಾಡಿ ಕೊಳ್ಳುತ್ತಾರೆಂದು ಕೋರುತ್ತಿದ್ದೇವೆ.

**ಅವರು ಕೇಳಿದ ಪ್ರಶ್ನೆ॥** ನೀವು ಹೇಳುವ ಸೂತ್ರದ ಪ್ರಕಾರ ದೇವಾಲಯಗಳಲ್ಲಿನ ಪೂಜೆಗಳೆಲ್ಲ ನಿರ್ಗುಣೋಪಾಸನಗಳೇ ಆಗುತ್ತವೆ. ಅಂತಹದರಲ್ಲಿ ಸಗುಣೋಪಾಸನೆ ಎಂದು ಏನನ್ನು ಹೇಳಲಾಗುತ್ತದೋ ಸೂತ್ರದ ಪ್ರಕಾರ ತಿಳಿಸಿರಿ?

**ನಮ್ಮ ಉತ್ತರ :** ಗುಣಗಳಿಲ್ಲದಿರುವುದನ್ನು ಪೂಜಿಸುವುದು ನಿರ್ಗುಣೋಪಾಸನೆ ಆದಾಗ ಗುಣಗಳು ಇರುವುದನ್ನು ಪೂಜಿಸುವುದು ಸಗುಣೋಪಾಸನೆ ಆಗುತ್ತದೆ. ಸಜೀವವಾಗಿ ಗುಣಗಳು ಹೊಂದಿರುವ ಒಬ್ಬ ಗುರುವನ್ನೋ, ಮಹರ್ಷಿಯನ್ನೋ, ಉನ್ನತವಾದ ವ್ಯಕ್ತಿಯನ್ನೋ ಅಥವಾ ದೈವಸಮಾನನಾದವನನ್ನೋ ಪೂಜಿ

ಸುವುದು ಸಗುಣೋಪಾಸನೆ ಆಗುತ್ತದೆ. ಪೂರ್ವದಲ್ಲಿ ರಾಜರು ಸಹಿತವು ಅವರವರ ಗುರುಗಳಿಗೆ ಪಾದಪೂಜೆ ಮಾಡಿದಂತೆ ಚರಿತ್ರೆಗಳು ತಿಳಿಸುತ್ತಿವೆ. ಅಂತಹ ಪೂಜೆಗಳನ್ನು ಸಗುಣಪೂಜೆಗಳು ಎನ್ನುತ್ತಾರೆ. ಗುರುವನ್ನು ಶಿಷ್ಯರು ಪೂಜಿಸುವುದನ್ನು ಸಗುಣಪೂಜಯೇ ಆಗುತ್ತದೆ. ಶ್ರೀರಾಮನನ್ನು ಅಂದಿನ ಶಬರಿ ಪೂಜಿಸಿದ್ದಾಳೆ. ಶ್ರೀಕೃಷ್ಣನನ್ನು ಅಂದಿನ ರಾಧ ಆರಾಧಿಸಿದ್ದಾಳೆ. ಈ ವಿಧವಾಗಿ ಬದುಕಿ ಗುಣಗಳು ಹೊಂದಿರುವವರನ್ನು ಪೂಜಿಸುವುದನ್ನು ಸಗುಣ ಪೂಜೆ ಎನ್ನುತ್ತಿದ್ದಾರೆ. ಎದುರುಗಿರುವುದನ್ನು ಪೂಜಿಸುವುದರಿಂದ ಅದಕ್ಕೆ ಆ ಹೆಸರು ಬರುತ್ತಿದೆಯಾಗಲಿ, ಪೂಜಿಸುವವರನ್ನನುಸರಿಸಿ ಆರಾಧನೆ ಹೆಸರು ಬರುವುದಿಲ್ಲವೆಂದು ತಿಳಿಯಿರಿ. ಉದಾಹರಣೆಗೆ ಕುಲ್ಲಯ್ಯ ಎನ್ನುವ ವ್ಯಕ್ತಿ ಆಂಜನೇಯಸ್ವಾಮಿಯನ್ನು ಪೂಜಿಸುತ್ತಿದ್ದಾನೆಂದುಕೊಳ್ಳೋಣ. ಆಗ ಎದುರುಗಡೆ ಇರುವ ಆಂಜನೇಯಸ್ವಾಮಿಯನ್ನು ಅನುಸರಿಸಿ ಅದನ್ನು ಆಂಜನೇಯ ಉಪಾಸನೆ ಎನ್ನುತ್ತೇವೆ ಹೊರತು, ಮಾಡುವವನನ್ನನುಸರಿಸಿ ಕುಲ್ಲಯ್ಯ ಉಪಾಸನೆ ಅನ್ನುವುದಿಲ್ಲ ತಾನೆ! ಈ ವಿಧವಾಗಿ ಯೋಚಿಸಿದರೆ ಗುಣವಿಲ್ಲದ ದೈವಪ್ರತಿಮೆಗಳಿಗೆ ಮಾಡುವ ಪೂಜೆಗಳೆಲ್ಲವೂ ನಿರ್ಗುಣ ಪೂಜೆಗಳೆಂದು, ಗುಣಗಳಿರುವ ಮನುಷ್ಯ ರನ್ನು ಪೂಜಿಸಿದರೆ ಸಗುಣಪೂಜೆಗಳೆಂದು ಅನ್ನಬಹುದು.

**ಅವರು ಕೇಳಿದ ಪ್ರಶ್ನೆ :** ಸ್ವಾಮಿಯವರೆ! ಒಬ್ಬ ವ್ಯಕ್ತಿ ಗುಡಿಯಲ್ಲಿ ಪ್ರತಿಮೆಗಳನ್ನು ಅಲ್ಲದೆ, ಮನುಷ್ಯರನ್ನು ಅಲ್ಲದೆ, ಹಸುವನ್ನು ದೈವವಾಗಿ ಭಾವಿಸಿ ಪೂಜಿ ಸುತ್ತಿದ್ದಾನೆಂದುಕೊಳ್ಳೋಣ. ಇಂತಹ ಪೂಜೆಯನ್ನು ಏನನ್ನಬೇಕು?

**ನಮ್ಮ ಉತ್ತರ :** ಹಸು ಸಹ ಜೀವವನ್ನು ಹೊಂದಿ ಗುಣಗಳು ಹೊಂದಿದೆ. ಆದ್ದರಿಂದ ಅದನ್ನು ಸಹ ಸಗುಣಪೂಜೆಯೇ ಅನ್ನಬೇಕು.

**ಅವರು ಕೇಳಿದ ಪ್ರಶ್ನೆ :** ಗುರುಗಳು ದೊಡ್ಡ ಮಹರ್ಷಿಗಳು ಗುಣಗಳನ್ನು ಜಯಿಸಿದವರೆಂದು, ಅವರಿಗೆ ಯಾವ ಗುಣಗಳಿರುವುದಿಲ್ಲವೆಂದು ಎನ್ನುತ್ತಾರಲ್ಲ! ಅಂಥದರಲ್ಲಿ ಅವರನ್ನು ಪೂಜಿಸುವುದು ಸಗುಣಪೂಜೆ ಹೇಗೆ ಆಗುತ್ತದೆ?

**ನಮ್ಮ ಉತ್ತರ :** ಗುರುಗಳು, ಮಹರ್ಷಿಗಳು, ಯೋಗ ಮಾಡುವಾಗ ಗುಣಗಳನ್ನು ಜಯಿಸಿ ಯಾವ ಗುಣಗಳು ಇಲ್ಲದಂತೆ ಆ ಸಮಯದಲ್ಲಿ ಮಾತ್ರ ಇರುತ್ತಾರೆ. ಮತ್ತೆ ಕಣ್ಣುತೆರೆದ ನಂತರ ಅಂದರೆ ಬ್ರಹ್ಮಯೋಗ ಮಾಡದಿರುವಾಗ ಅವರಲ್ಲಿ ಸಹ ಗುಣಗಳು ಕೆಲಸಮಾಡುತ್ತಿರುತ್ತವೆ. ಗುಣಗಳು ಕೆಲಸ ಮಾಡಿದರೇನೆ ಪ್ರತಿಯೊಬ್ಬರು ಚಲಿಸಿ ಕೆಲಸಗಳು ಮಾಡುವುದು. ಗುಣಗಳು ಇಲ್ಲದಿದ್ದರೆ ಚಲನವೇ ಇರುವುದಿಲ್ಲವೆಂದು ತಿಳಿಯಬೇಕು. ಗುರುಗಳು, ಯೋಗಿಗಳು ಯೋಗ ಮಾಡಿದಾಗ ಗುಣಗಳನ್ನು ಅಡಗಿಸುವ ಶಕ್ತಿ ಅವರಿಗೆ ಇದೆ. ಆದ್ದರಿಂದ ಅವರನ್ನು ಗುಣಗಳು ಜಯಿಸಿದವರೆಂದು ಅನ್ನಬಹುದು. ಉಳಿದ ಮಾನವರು ಯಾವ ಸಮಯದಲ್ಲಿ ಸಹ ಗುಣಗಳನ್ನು ಅಡಗಿಸಿ ಹಾಕುವುದಿಲ್ಲ ಆದ್ದರಿಂದ ಗುಣಗಳನ್ನು ಜಯಿಸಿದವರೆಂದು ಉಳಿದವರನ್ನು ಅನ್ನಲಾರೆವು.

**ಅವರು ಕೇಳಿದ ಪ್ರಶ್ನೆ :** ಸಗುಣ ನಿರ್ಗುಣ ಅಂದಂತೆ ಸಾಕಾರ ನಿರಾಕಾರ ಪೂಜೆಗಳು ಸಹ ಇವೆಯಲ್ಲವೆ! ಸಾಕಾರ ಪೂಜೆ ಎಂದರೆ ಕಣ್ಣಿಗೆ ಕಾಣಿಸುವ ಆಕಾರವಿರುವುದನ್ನು ಪೂಜಿಸುವುದೆಂದು, ನಿರಾಕಾರ ಪೂಜೆ ಎಂದರೆ ಆಕಾರ ಇಲ್ಲದಂತಿರುವ ಪರಮಾತ್ಮನನ್ನು ಧ್ಯಾನಿಸುವುದೆಂದು ನಮ್ಮ ಭಾವನೆ. ನಮ್ಮ ಭಾವವು ಸರಿಯಾದುದೋ ಅಲ್ಲವೋ ನೀವು ತಿಳಿಸಿರಿ.

**ನಮ್ಮ ಉತ್ತರ :** ದೈವವಾದ ಪರಮಾತ್ಮನಿಗೆ ರೂಪವಿಲ್ಲ. ಅಂತಹ ರೂಪವಿಲ್ಲದ ಪರಮಾತ್ಮ ಧರ್ಮಗಳನ್ನು ತಿಳಿಸುವುದಕ್ಕೋಸ್ಕರ ರೂಪಹೊಂದಿದ ಮಾನವಾಕೃತಿ ಯಲ್ಲಿ ನಮ್ಮ ಮಧ್ಯಕ್ಕೆ ಬಂದು ತನ್ನ ಧರ್ಮಗಳನ್ನು ತಿಳಿಸಿ ಮತ್ತೆ ರೂಪವಿಲ್ಲದ ಸ್ಥಿತಿಯೊಳಗೇ ಹೋಗುತ್ತಾನೆ. ಒಂದು ರೂಪ ಧರಿಸಿ ಬಂದ ಪರಮಾತ್ಮನನ್ನು ಸಾಕಾರನೆಂದು, ತನ್ನ ಅವತಾರ ಸಾಕುಮಾಡಿ ಹೋದಾಗ ನಿರಾಕಾರನೆಂದು ಅನ್ನುವುದು ಸರಿಯಾದ ಪದ್ಧತಿ. ನಿರಾಕಾರವಾದ ಪರಮಾತ್ಮ ಆಕಾರವನ್ನು ಧರಿಸಿ ಬಂದಾಗ ಆ ಮನುಷ್ಯನನ್ನು ಪೂಜಿಸುವುದು ಸಾಕಾರಪೂಜೆ ಎಂದು ಎನ್ನುತ್ತೇವೆ. ಆಕಾರವಿಲ್ಲದ ಪರಮಾತ್ಮನನ್ನು ಧ್ಯಾನಿಸುವುದು ನಿರಾಕಾರ ಪೂಜೆ ಎನ್ನುತ್ತೇವೆ.

**ಅವರು ಕೇಳಿದ ಪ್ರಶ್ನೆ :** ಒಬ್ಬ ಗುರುವನ್ನು ದೈವವಾಗಿ ಪೂಜಿಸುತ್ತಿದ್ದೇವೆ ಅಂದುಕೊಳ್ಳಿ. ಆ ಗುರುವು ನಿಜವಾಗಲು ಪರಮಾತ್ಮ ಅವತಾರ ಅಲ್ಲವೆಂದುಕೊಳ್ಳಿ. ನೀವು ಅಂದಂತೆ ಅದು ಸಗುಣಪೂಜೆಯಾದ ಗುರುಗಳಿಗೆ ಆಕಾರವಿದೆಯಲ್ಲ ಅದನ್ನು ಸಾಕಾರ ಪೂಜೆಯೇ ಅನ್ನಬಹುದಲ್ಲವೆ! ಹಾಗೆ ಪರಮಾತ್ಮನೇ ಮನುಷ್ಯನಾಗಿ ಬಂದಾಗ ಆತನನ್ನು ಪೂಜಿಸುತ್ತಿದ್ದೇವೆ ಅಂದುಕೊಳ್ಳಿ. ಆಗ ಅದು ಸಾಕಾರಪೂಜೆಯೇ ಆದರೂ ಅದನ್ನು ಸಗುಣಪೂಜೆ ಎಂದು ಸಹ ಅನ್ನಬಹುದಲ್ಲವೆ!

**ನಮ್ಮ ಉತ್ತರ :** ಆಕಾರವಿರುವಾಗ ಗುಣಗಳು, ಗುಣಗಳಿರುವಾಗ ಆಕಾರ ತಪ್ಪದೆ ಇರುತ್ತವೆ ಆದ್ದರಿಂದ ಆ ಪೂಜೆಗಳನ್ನು ಸಗುಣ ಸಾಕಾರ ಪೂಜೆಗಳನ್ನಬಹುದು. ಆದರೆ ನಿರ್ಗುಣ ಪೂಜೆಗಳಾದ ಪ್ರತಿಮಾರಾಧನೆಗಳು ನಿರಾಕಾರ ಪೂಜೆಗಳು ಅಲ್ಲ. ಏಕೆಂದರೆ ಪ್ರತಿಮೆಗಳಿಗೆ ಆಕಾರವಿದೆ ಆದ್ದರಿಂದ ಪರಮಾತ್ಮನಿಗೆ ಅಸಲು ರೂಪ ಇಲ್ಲ ಆದುದರಿಂದ.

| ನಿರ್ಗುಣ | ಸಗುಣ | | ಸಾಕಾರ | ನಿರಾಕಾರ |
|---|---|---|---|---|
| ↓ | ↑ | | ↑ | ↓ |
| 1 | → | 1 | ← | 1 |

ಸಗುಣ ಸಾಕಾರ ಪೂಜೆಗಳೊಂದು ಆಗಬಹುದಾಗಲಿ ನಿರ್ಗುಣ ನಿರಾಕಾರ ಪೂಜೆಗಳೊಂದು ಅಲ್ಲವೆಂದು ತಿಳಿಯಬೇಕು. ಎದುರಿಗಿರುವುದನ್ನನುಸರಿಸಿ ಆರಾಧನೆಯ ಹೆಸರು ಆಗಲಿ ಮಾಡುವವನನ್ನು ಅನುಸರಿಸಿ ಅಲ್ಲವೆಂಬ ಸೂತ್ರ ತಿಳಿಯಬೇಕೆಂದು ಮತ್ತೊಂದುಸಲ ತಿಳಿಸುತ್ತಿದ್ದೇವೆ.

# ಜ್ಞಾನಯಜ್ಞ

ಯಜ್ಞ ಎಂದರೆ ಇಲ್ಲದಂತೆ ಮಾಡುವುದೆಂದು, ಸುಟ್ಟುಹಾಕುವುದೆಂದು ಅರ್ಥ ಬರುವಂತೆ ಹೇಳಿದ್ದಾರೆ. ದ್ರವ್ಯಯಜ್ಞವೆಂದರೆ ದ್ರವ್ಯಗಳನ್ನು ಸುಡುವುದು ಅಂದಿದ್ದಾರೆ. ಇದರ ಪ್ರಕಾರ ಜ್ಞಾನಯಜ್ಞ ಎಂದರೆ ಜ್ಞಾನವನ್ನು ಸುಟ್ಟು ಹಾಕುವುದೆಂದೇ ಅರ್ಥ. ದ್ರವ್ಯಯಜ್ಞದಲ್ಲಿ ದ್ರವ್ಯಗಳು ಸುಡುತ್ತವೆ ಎಂದವರು, ಜ್ಞಾನಯಜ್ಞದಲ್ಲಿ ಮಾತ್ರ ಕರ್ಮ ಸುಡುತ್ತದೆಂಬುವುದು ಸಮಂಜಸವೇನಾ? ಜ್ಞಾನಯಜ್ಞ ಎಂದರೆ ನಿಜಾರ್ಥವೇನು? ಎಂದು ಕೆಲವರಿಗೆ ಸಂಶಯಬರಬಹುದು. ಅದಕ್ಕೆ ಉತ್ತರ ಏನೆಂದರೆ!

ದ್ರವ್ಯಯಜ್ಞ ಜ್ಞಾನಯಜ್ಞಗಳೆಂಬುವವು ಭಗವಂತನ ಗೀತೆಯಲ್ಲಿಯೇ ಹೇಳಲ್ಪಟ್ಟಿವೆ. ಆದ್ದರಿಂದ ಅವು ಶಾಸ್ತ್ರಬದ್ಧವಾದವೇ ಆಗಲಿ ಅಶಾಸ್ತ್ರೀಯವಾದವು ಅಲ್ಲ. ಈ ಎರಡರಲ್ಲಿ ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞ ಶ್ರೇಷ್ಠವಾದುದೆಂದು ಸಹ ಭಗವಂತನು ತನ್ನ ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯ 33ನೇ ಶ್ಲೋಕದಲ್ಲಿ ಸಹ ಹೇಳಿದ್ದಾನೆ. ಗೀತೆ ಭಾವದ ಪ್ರಕಾರ ದ್ರವ್ಯಯಜ್ಞ ದ್ರವ್ಯಗಳನ್ನು ಸುಡುವುದೇ ಆಗುತ್ತದೆ. ಅದೇ ವಿಧವಾಗಿ ಜ್ಞಾನಯಜ್ಞ ಜ್ಞಾನಗಳನ್ನು ಸುಡುವುದೇ ಆಗುತ್ತದೆ. ಜಗತ್ತಿಗೆ ಆಚಾರ್ಯನಾಗಿ ಜಗತ್ತಿಗೆ ಗೀತೆಯನ್ನು ಗೀಚಿದವನು ತನ್ನ ಬೋಧನೆ ಯಲ್ಲಿ ಯಾವ ತಪ್ಪು ಮಾಡುವುದಿಲ್ಲ. ವಾಸ್ತವ ವಿಷಯವನ್ನು ಸೂಚಿಸುವುದಕ್ಕೆ ಅವುಗಳಲ್ಲಿ ಅರ್ಥ ಒಳಗೊಂಡಿರುವಂತೆ ಒಂದನ್ನು ದ್ರವ್ಯಯಜ್ಞವೆಂದು, ಮತ್ತೊಂದನ್ನು ಜ್ಞಾನಯಜ್ಞವೆಂದು ಹೆಸರಿಟ್ಟು ಹೇಳಿದ್ದಾನೆ. ದ್ರವ್ಯಯಜ್ಞದಲ್ಲಿ ನಾಲ್ಕು ವಿಧಗಳಾಗಿ ವಿಭಜಿಸಿದ ಅನೇಕವಿಧ ದ್ರವ್ಯಗಳು ಸುಟ್ಟುಹೋಗುತ್ತಿವೆ. ಅದರ ಸ್ಥಾನ ಉದರದಲ್ಲಿ ಎಂದು ಹೇಳಲಾಗಿದೆ. ಇನ್ನು ಜ್ಞಾನಯಜ್ಞ ವಿವರ ಅದರ ನಿಜಾರ್ಥ ಪರಿಶೀಲಿಸಿ ನೋಡೋಣ.

ಮಾನವನ ಶರೀರದಲ್ಲಿ ಎರಡು ವಿಧಗಳ ಅವಯವಗಳು ಇವೆ. ಅವು ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು. ಕರ್ಮೇಂದ್ರಿಯ ಜ್ಞಾನೇಂದ್ರಿಯ ಸಮಿಷ್ಠಿ ಕೆಲಸದಿಂದಲೇ ಅನೇಕ ಕಾರ್ಯಗಳು ನಡೆಯುತ್ತಿವೆ. ಒಳಗಿನ

ಕರ್ಮದಿಂದ ಎಂದರೆ ನಿರ್ಣಯಿಸಲ್ಪಟ್ಟಿರುವ ಪ್ರಾರಬ್ಧದಿಂದ ಕೆಲಸಗಳು ನಡೆಯುತ್ತಿರುವಾಗ, ಆ ಕಾರ್ಯಗಳಲ್ಲಿಯೇ ಹೊಸದಾಗಿ ಬರುವ ಆಗಾಮಿಕಕರ್ಮ ಮಿಳಿತವಾಗಿದೆ. ನಡೆಯುತ್ತಿರುವ ಕಾರ್ಯದಲ್ಲಿ ಬರುವ ಆಗಾಮಿಕಕರ್ಮವನ್ನು ಸುಟ್ಟುಹಾಕುವುದು ಕರ್ಮಯಜ್ಞವಾಗುತ್ತದೆ. ಕರ್ಮಯಜ್ಞಕ್ಕೆ ಗೀತೆಯಲ್ಲಿ ಭಗವಂತನು ಜ್ಞಾನಯಜ್ಞವೆಂದು ಸಹ ಹೆಸರಿಟ್ಟಿದ್ದಾನೆ. ಹಾಗೆ ಜ್ಞಾನಯಜ್ಞ ಎನ್ನುವುದರಲ್ಲಿ ಜ್ಞಾನವನ್ನು ಸುಟ್ಟುಹಾಕೆಂದಲ್ಲವೇ ಅರ್ಥ ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಜ್ಞಾನೇಂದ್ರಿಯಗಳ ಜ್ಞಾನವನ್ನು ಸುಟ್ಟುಹಾಕುವುದು ಜ್ಞಾನಯಜ್ಞವೆಂದು ಹೇಳಲಾಗಿದೆ. ಆದ್ದರಿಂದಲೇ ಕಣ್ಣು, ಮೂಗು ಕಿವಿ, ನಾಲಿಗೆ, ಚರ್ಮ ಎನ್ನುವ ಅವಯವಗಳನ್ನು ಜ್ಞಾನೇಂದ್ರಿಯಗಳೆಂದು ಹೇಳಿದ್ದಾರೆ. ಜ್ಞಾನೇಂದ್ರಿಯಗಳ ಜ್ಞಾನಗಳನ್ನು ಸುಟ್ಟುಹಾಕುವುದೆಂಬ ಕ್ರಿಯೆಗೆ ಜ್ಞಾನಯಜ್ಞ ಎನ್ನುವುದು ಸಮಂಜಸವೇ ಆಗುತ್ತದೆ. ಜ್ಞಾನಯಜ್ಞದಲ್ಲಿ ಅಗ್ನಿಯಾಗಿ ಉಪಯೋಗಪಡುವುದು ಆತ್ಮಜ್ಞಾನವೆನ್ನುವ ಅಗ್ನಿ. ದ್ರವ್ಯಯಜ್ಞದಲ್ಲಿ ಉಪಯೋಗಪಡುವ ಅಗ್ನಿ ಭೌತಿಕವಾಗಿ ತಯಾರಾದ ಶ್ಲೋಮ, ಪಿತ್ತ, ಲಾಲಾಜಲಗಳಿಂದ ತಯಾರಾದ ಅಗ್ನಿ ಎಂದು ತಿಳಿಯಬೇಕು. ಸ್ಥೂಲಗ್ರಂಥಿಗಳಿಂದ ಸ್ರವಿಸಲ್ಪಟ್ಟ ಸ್ಥೂಲ ರಸಗಳ ರಸಾಯನಾಗ್ನಿ ಹೊಟ್ಟೆಯೊಳಗೆ ಸೇರಿದಾಗ ದ್ರವ್ಯಗಳನ್ನು ದ್ರವಗಳನ್ನು ಜೀರ್ಣಿಸುವಂತೆ ಮಾಡುತ್ತಿದೆ. ಹಾಗೆಯೇ ಶಿರಸ್ಸಿನಲ್ಲಿ ಸೂಕ್ಷ್ಮಗಳಾದ ಆತ್ಮಾನಾತ್ಮಗಳ ಸೂಕ್ಷ್ಮ ವಿಷಯಗಳು ತಿಳಿಯುವುದರಿಂದ ಏರ್ಪಟ್ಟ ಸೂಕ್ಷ್ಮ ಅಗ್ನಿ ಜ್ಞಾನೇಂದ್ರಿಯಗಳಲ್ಲಿ ಸೂಕ್ಷ್ಮವಾಗಿರುವ ಜ್ಞಾನಾರ್ಥಗಳನ್ನು ಸುಟ್ಟುಹಾಕುವುದೇ ಜ್ಞಾನಯಜ್ಞವೆಂದು ತಿಳಿಯುತ್ತಿದೆ. ದ್ರವ್ಯಯಜ್ಞದಲ್ಲಿ ಎಲ್ಲಾ ಸ್ಥೂಲಗಳೇ ಆಗಿದ್ದು, ಜ್ಞಾನಯಜ್ಞದಲ್ಲಿ ಎಲ್ಲಾ ಸೂಕ್ಷ್ಮಗಳೇ ಎಂದು ಗ್ರಹಿಸಬೇಕು. ದ್ರವ್ಯಯಜ್ಞದಲ್ಲಿ ನಾಲ್ಕು ದ್ರವ್ಯಗಳು ನಶಿಸಿ ಅವುಗಳಿಂದ ಶರೀರ ಪೋಷಕಗಳು ಬಯಲ್ಪಡುತ್ತಿವೆ. ಹಾಗೆಯೇ ಜ್ಞಾನಯಜ್ಞದಲ್ಲಿ ಜ್ಞಾನೇಂದ್ರಿಗಳಲ್ಲಿ ಅಡಕವಾಗಿರುವ ಐದು ಜ್ಞಾನಗಳು ನಶಿಸಿ ಅವುಗಳಿಂದ ಶರೀರನಾಶನಗಳು (ಜನ್ಮನಾಶನಗಳು) ಬಯಲ್ಪಡುತ್ತಿವೆ. ದ್ರವ್ಯಯಜ್ಞದಲ್ಲಿ ಶರೀರವನ್ನು ಪೋಷಿಸುವಂತೆ ಮಾಡುವ ನಾಲ್ಕು ವಿಧಗಳ ಆಹಾರಗಳು ಬಯಲ್ಪಡುತ್ತಿವೆ. ಹಾಗೆಯೇ ಜ್ಞಾನಯಜ್ಞದಲ್ಲಿ

ಶರೀರ ರಾಹಿತ್ಯವನ್ನು ಉಂಟುಮಾಡುವ ವಿಧಾನಗಳು ಬಯಲ್ಪಡುತ್ತಿವೆ. ಈ ವಿಧವಾಗಿ ಜ್ಞಾನೇಂದ್ರಿಯಗಳಲ್ಲಿನ ಪ್ರಪಂಚ ಜ್ಞಾನಾರ್ಥಗಳನ್ನು ಸುಟ್ಟುಹಾಕುವುದನ್ನು (ಇಲ್ಲದಂತೆ ಮಾಡುವುದನ್ನು) ಜ್ಞಾನಯಜ್ಞವೆಂದು ತಿಳಿದುಕೊಳ್ಳಬಹುದು. ಜ್ಞಾನೇಂದ್ರಿಯಗಳ ಮೂಲಕ ಬರುವ ಕರ್ಮವನ್ನು ಆತ್ಮಾನಾತ್ಮ ವಿವರಗಳ ಮೂಲಕ ಅಂದರೆ ಇದು ಆತ್ಮ ಎಂದು, ಇದು ಆತ್ಮವಲ್ಲದ ಅಹಮ್ ಎಂದು ತಿಳಿಯುವುದರಿಂದ ಇಲ್ಲದಂತೆ ಮಾಡಬಹುದು. ಕರ್ಮ ಇಲ್ಲದಂತೆ ಹೋಗುತ್ತಿದೆ ಆದ್ದರಿಂದ ಕರ್ಮಯಜ್ಞವೆಂದು, ಯಾವ ವಿಧವಾಗಿ ನೋಡಿದರು ಜ್ಞಾನೇಂದ್ರಿಯಗಳ ಮೂಲಕವೇ ಕರ್ಮ ಪ್ರಾರಂಭವಾಗುತ್ತಿದೆ ಆದ್ದರಿಂದ ಈ ವಿಧಾನವನ್ನು ಜ್ಞಾನಯಜ್ಞವೆಂದು ಹೇಳುತ್ತಿದ್ದೇವೆ. ಇದರಲ್ಲಿ ಜ್ಞಾನೇಂದ್ರಿಯಗಳ ಹೊರಗೆ ಜ್ಞಾನಸಮೂಲ ಸುಡುತ್ತಿದೆಯೆಂದು, ಒಳಗಿನ ಆತ್ಮ ಸಂಬಂಧಿತ ಜ್ಞಾನ ಅಲ್ಲವೆಂದು ಮುಖ್ಯವಾಗಿ ತಿಳಿಯಬೇಕು. ಜ್ಞಾನಯಜ್ಞದಲ್ಲಿ ಕರ್ಮ ಹೋಗುತ್ತಿದೆ, ಆದ್ದರಿಂದ ಜ್ಞಾನಯಜ್ಞವನ್ನು ಕರ್ಮಯಜ್ಞವೆಂದು ಸಹ ಅನ್ನಬಹುದು.

# ಜಪಮಾಲೆಯಲ್ಲಿ ಮಣಿಗಳೆಷ್ಟು?

ಇಂದೂ ಧರ್ಮಗಳಲ್ಲಿ ಒಂದು ಮುಖ್ಯವಾದ ಧರ್ಮ ಜಪಮಾಲೆ ಉಪಯೋಗ. ಇಂದೂ ಧರ್ಮಗಳು ಸೃಷ್ಟಿಕರ್ತನಾದ ದೇವರನ್ನು ತಿಳಿಸುವವು, ಆದ್ದರಿಂದ ಅವುಗಳನ್ನು ಮುಖ್ಯವಾಗಿ ತಿಳಿದುಕೊಳ್ಳುವುದು ನಮ್ಮ ಕರ್ತವ್ಯ. ಮೊದಲು ಧರ್ಮ ಎಂದರೆ ಏನೋ ತಿಳಿದುಕೊಳ್ಳೋಣ. ಒಂದು ವಸ್ತುವು ಅಥವಾ ಪದಾರ್ಥ ಎಂದರೆ ಜೀವ ಇರುವುದಾಗಲಿ, ಇಲ್ಲವೆ ಜೀವ ಇಲ್ಲದಿರುವುದಾಗಲಿ, ಅದಕ್ಕಿರುವ ಸೂಕ್ಷ್ಮ ಸಹಜತ್ವವನ್ನು ಧರ್ಮ ಎನ್ನುತ್ತೇವೆ. ಧರ್ಮ ಎಂಬುವುದು ಹುಟ್ಟಿನಿಂದ ಬಂದಿರುವುದು. ಆದ್ದರಿಂದ ಅದನ್ನು ಸಹಜತ್ವವೆಂದಿದ್ದೇವೆ. “ಜ” ಎಂದರೆ ಹುಟ್ಟುವುದೆಂದು ಅರ್ಥ. ಸಹಜ ಅಂದರೆ ಜೊತೆಗೆ ಹುಟ್ಟುವುದೆಂದು ಅರ್ಥ. ಒಂದು ಜಾತಿಗೆ ಒಂದೇ ವಿಧವಾಗಿ ಹುಟ್ಟಿನಿಂದ

ಬಂದಿರುವುದೇನೋ ಅದೇ ಅದರ ಧರ್ಮವಾಗುತ್ತದೆ. ಮಾನವಜಾತಿಗೆಲ್ಲಾ ಹುಟ್ಟಿನಿಂದಲೇ ಆತ್ಮ ಧರ್ಮವಿದ್ದರೂ ಅದು ತಿಳಿಯದಂತೆ ಹೋಗುವುದರಿಂದ ಆತ್ಮಧರ್ಮಗಳೆಲ್ಲ ಅಧರ್ಮಗಳಾಗಿ ಬದಲಾಗಿಹೋಗಿವೆ ಎಂದೇ ಹೇಳಬಹುದು. ಸಿದ್ಧಾಂತಪರವಾದ ಮತ್ತು ಆಚರಣೆಯೋಗ್ಯವಾದ ಆತ್ಮಧರ್ಮಗಳು ಜೀವಾತ್ಮವಾಗಿ ಹುಟ್ಟಿದವರೆಲ್ಲರಿಗೂ ಸಂಬಂಧಿಸಿರುವವೇ ಆಗುತ್ತವೆ. ಮತಭೇದಗಳು ಇಲ್ಲದಂತೆ ಸಮಸ್ತ ಮಾನವರಿಗೆ ಸಂಬಂಧಿಸಿದ ಧರ್ಮಗಳನ್ನೇ ಇಂದೂಧರ್ಮಗಳು ಅನ್ನುತ್ತಿದ್ದೇವೆ. ಜ್ಞಾನಪರವಾದ ಆತ್ಮ ಸಕಲ ಶರೀರಗಳಲ್ಲಿ ಇದೆ. ಆದ್ದರಿಂದ ಮಾನವನ ಧರ್ಮಗಳನ್ನು ಇಂದೂಧರ್ಮಗಳೆನ್ನಬೇಕಾಗಿ ಬಂದಿದೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಆತ್ಮಜ್ಞಾನಕ್ಕೆ ಚಂದ್ರನು ಅಧಿಪತಿ ಮತ್ತು ಚಿಹ್ನೆ. ಚಂದ್ರನನ್ನು ಇಂದುವು ಎಂದು ಸಹ ಎನ್ನುತ್ತೇವೆ. ಆತ್ಮಜ್ಞಾನ ಸಂಬಂಧ ಧರ್ಮಗಳಾದ್ದರಿಂದ ಚಂದ್ರನ ಹೆಸರನ್ನು ಸೂಚಿಸುತ್ತಾ ಇಂದೂಧರ್ಮ ಅಂದಿದ್ದಾರೆ. ಇಂದೂ ಧರ್ಮಗಳೆಂದರೆ ಪ್ರತ್ಯೇಕವಾದ ಮತ ಧರ್ಮಗಳು ಅಂದುಕೊಳ್ಳಬಾರದು. ಆತ್ಮವಿರುವ ಪ್ರತಿ ಮನುಷ್ಯನಿಗೂ ಸಂಬಂಧಿಸಿದ ಧರ್ಮಗಳೆಂದು ತಿಳಿಯಬೇಕು.

ಪೂರ್ವದಲ್ಲಿ ಭಾರತದೇಶದಲ್ಲಿ ಆತ್ಮಜ್ಞಾನ ಇರುವವರು ಹೆಚ್ಚಾಗಿ ಇರುತ್ತಿದ್ದರು. ಪ್ರಪಂಚ ದೇಶಗಳೆಲ್ಲವುಗಳಿಗಿಂತ ಹೆಚ್ಚಾಗಿ ಜ್ಞಾನಿಗಳಿರುವ ಭಾರತದೇಶವನ್ನು ಜ್ಞಾನಿಗಳ ದೇಶವೆನ್ನುತ್ತಿದ್ದರು. ಜ್ಞಾನಕ್ಕೆ ಅಧಿಪತಿ ಇಂದುವು (ಚಂದ್ರನು) ಆದ್ದರಿಂದ ಜ್ಞಾನ ತಿಳಿದವರೆಲ್ಲರನ್ನು ಇಂದೂಗಳೆನ್ನುತ್ತಿದ್ದರು. ಆದ್ದರಿಂದ ಈ ದೇಶವನ್ನು ಇಂದೂದೇಶವೆಂದಿದ್ದಾರೆ. ಪೂರ್ವಕಾಲವಿದ್ದಷ್ಟು ಜನ ಜ್ಞಾನಿಗಳು ಈಗ ಇಲ್ಲದಿದ್ದರು ಇಂದೂದೇಶವೆಂಬ ಹೆಸರು ಇನ್ನು ಉಳಿದಿರುವುದಕ್ಕೆ ಸಂತೋಷಿಸಬೇಕು. ಇಂದೂದೇಶದೊಳಗಿನವರಿಗೆ ಇಂದೂ ಧರ್ಮಗಳು ಎಂದರೆ ಏನೋ ತಿಳಿಯದಂತೆಹೋಗಿರುವುದರಿಂದ ನಮ್ಮ ಮತಗಳು ಬೇರೆ ಎಂದು ನಮ್ಮ ದೇವರು ಬೇರೆ ಎಂದು ಅಂದುಕೊಳ್ಳುತ್ತಿದ್ದಾರೆ. ಇಂದೂ ಅನ್ನುವ ಪದ ಪ್ರತಿ ಮನುಷ್ಯನಿಗು ಸಂಬಂಧಿಸಿರುವುದೆಂದು ತಿಳಿಯದಂತೆ ಹೋಗಿದೆ. ಇಂದೂ ಎನ್ನುವಪದ ಯಾವ ಮತಕ್ಕೆ ಸಂಬಂಧಿಸಿರುವುದು ಅಲ್ಲ.

ಏಕೆಂದರೆ! ಇಂದೂಧರ್ಮಗಳು ದೇವರಿಗೆ ಬಹಳ ಹತ್ತಿರವಾಗಿವೆ. ಆದ್ದರಿಂದ ಜ್ಞಾನ ತಿಳಿದು ದೇವರನ್ನು ವಿಶ್ವಾಸಿಸುವ ಪ್ರತಿಯೊಬ್ಬನು ಇಂದೂ ಎಂದೇ ಹೇಳಬೇಕು. ಪ್ರತಿ ಮನುಷ್ಯನಿಗೂ ಸಂಬಂಧಿಸಿರುವ ಪವಿತ್ರ ಇಂದೂಧರ್ಮಗಳು ಯಾವಾಗಲೂ ಎಲ್ಲರಿಗು ತಿಳಿದಿರುವಂತೆ ಎಷ್ಟೋ ಧರ್ಮ ಆಚರಣೆಗಳನ್ನು ನಮ್ಮ ಹಿರಿಯರು ಕಲ್ಪಿಸಿ ಇಟ್ಟಿದ್ದಾರೆ. ಆದರೂ ಧರ್ಮಗಳೆಲ್ಲವೂ ತಿಳಿಯದಂತೆ ಹೋಗಿ ಅವು ಅಧರ್ಮಗಳಾಗಿ ಬದಲಾಗಿಹೋಗಿವೆ. ಕೆಲವು ಆಚರಣೆಗಳು ನಮ್ಮ ಮಧ್ಯ ಉಳಿದಿದ್ದರೂ ಅವು ಅಷ್ಟಷ್ಟು ಮಾತ್ರವಾಗಿ, ಅರ್ಥರಹಿತವಾಗಿ, ಅಧರ್ಮಗಳೆನ್ನುವುದಕ್ಕೆ ಆಧಾರಗಳಾಗಿವೆ. ಅಂಥವುಗಳಲ್ಲಿ ಒಂದು ಧರ್ಮವನ್ನು ಪರಿಶೀಲಿಸಿ ನೋಡೋಣ.

ಈ ಪ್ರಪಂಚಕ್ಕೆ ಸ್ವಲ್ಪ ಆಯಸ್ಸು ಇದೆ. ಅದು ಶಾಸ್ತ್ರಬದ್ಧವಾಗಿ ಸಾವಿರಯುಗಗಳು. ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗವೆಂಬ ನಾಲ್ಕು ಯುಗಗಳು ಕ್ರಮವಾಗಿ 250 ಸಲ ನಡೆದರೆ ಪ್ರಪಂಚ ಆಯಸ್ಸು ಪೂರ್ತಿ ಆಗುತ್ತದೆ. **"ಸಹಸ್ರಯುಗ ಪರ್ಯಂತ ಮಹರ್ಯದ್ಬ್ರಹ್ಮಣೋ ವಿದುಃ"** ಎಂದ ದೇವರ ವಾಕ್ಯದ ಪ್ರಕಾರ ಸಾವಿರಯುಗಗಳು ದೇವರ ಹಗಲೆಂದು, ಅದನ್ನೇ ಜಗತ್ ಸೃಷ್ಠಿಸ್ಥಿತಿ ಎಂದು ಹೇಳುತ್ತಿದ್ದೇವೆ. ಜಗತ್ತಿನಲ್ಲಿ ಕೃತಯುಗವೊಂದರ ಪರಿಮಿತಿ ಕಾಲ 17,28,000 ಸಂವತ್ಸರಗಳು. ತ್ರೇತಾಯುಗ ಕಾಲಪರಿಮಿತಿ 12,96,000 ಸಂ॥, ದ್ವಾಪರಯುಗಕಾಲ 8,64,000 ಸಂ॥, ಕಲಿಯುಗಕಾಲ 4,32,000 ಸ॥. ಈ ನಾಲ್ಕುಯುಗಗಳ ಒಟ್ಟು ಕಾಲ 43,20,000 ಸಂ॥. ಅಂದರೆ ಕಲಿಯುಗಕ್ಕೆ ಹತ್ತರಷ್ಟು ಹೆಚ್ಚೆಂಬ ಮಾತು. ನಾಲ್ಕುಯುಗಗಳು 250 ಸಲ ನಡೆದರು 43,20,000X250 = 108,00,00,000. ಅಂದರೆ ಪ್ರಪಂಚದ ಆಯುವು 108 ಕೋಟಿ ಸಂವತ್ಸರಗಳು.

ಭೂಮಿಯಾಗಲಿ, ಆಕಾಶವಾಗಲಿ, ಭೂಮಿ ಮೇಲೆ ಸಾಮ್ರಾಜ್ಯಗಳಾಗಲಿ, ಸಾಮ್ರಾಜ್ಯಗಳಲ್ಲಿನ ಮತಗಳಾಗಲಿ ಮನುಗಡೆ ಸಾಗಿಸುವುದು 108 ಕೋಟಿ ವರ್ಷಗಳು ಮಾತ್ರ. ನಿನಗೆ ಪ್ರಪಂಚದಲ್ಲಿ ಆಡುವ ನಾಟಕಕ್ಕೆ ಕೊನೆಯದಾಗಿ

ತೆರೆಬೀಳುವುದು 108 ಕೋಟಿ ವರ್ಷಗಳಿಗೆ. ಜೀವಾತ್ಮಗಳೊಂದರ ಹುಟ್ಟು ಸಾವುಗಳ ಕಥೆ ನಡೆಯುವುದು 108 ಕೋಟಿ ವರ್ಷಗಳೆಂದು ತಿಳಿಯಬೇಕು. ಇದು ದೇವರು ಜೀವಿಗಳ ಹಿಂದೆ ಕಳುಹಿಸಿದ ಸಹಜ ಆಯುಃಕಾಲ. ಇದು ನಮ್ಮ ಆಯುವೊಂದರ ಧರ್ಮವೆಂದು ಎಲ್ಲರಿಗೂ ತಿಳಿಯುವಂತೆ 108 ಸಂಖ್ಯೆಯನ್ನು ನಮ್ಮ ಮಧ್ಯದಲ್ಲಿಯೇ ಇರುವಂತೆ ಹಿರಿಯರು ಮಾಡಿದ್ದಾರೆ. 108 ಸಂಖ್ಯೆ ಏನೆಂದು ತಿಳಿಯದವರು ಯೋಚಿಸುವಂತೆ, ತಿಳಿದವರು ಮರೆತುಹೋಗದಂತೆ ದೈವಾರಾಧನೆಯಲ್ಲಿಯೂ, ನಾಮಜಪ ದಲ್ಲಿಯೂ, ಮಂತ್ರಜಪದಲ್ಲಿಯೂ ಅದರ ಪ್ರತ್ಯೇಕತೆಯನ್ನು ಅಳವಡಿಸಿದ್ದಾರೆ. ದೈವಜಪಮಾಲೆಯಲ್ಲಿಯೂ ಮಂತ್ರ ಜಪದಲ್ಲಿಯೂ 108 ಮಣಿಗಳ ಮಾಲೆಯನ್ನೇ ಬಳಸಬೇಕೆಂದು ಹಿರಿಯರು ಸೂಚಿಸಿದ್ದಾರೆ. ಕೊನೆಗೆ ಪ್ರದಕ್ಷಿಣೆಗಳು 108 ಮಾಡಬೇಕೆಂದು, ವಿರಾಳ ಮಾಡುವ ಹಣವಾಗಲಿ 108 ಸಂಖ್ಯೆಯಾಗಿ ಇರುವಂತೆ ಮಾಡೆಂದು ತಿಳಿಸಿದ್ದಾರೆ. ಅಷ್ಟೇ ಅಲ್ಲದೆ 108 ಸಂಖ್ಯೆಗೂ ನಮಗೂ ಬಹಳ ಮುಖ್ಯವಾದ ಹತ್ತಿರ ಸಂಬಂಧ ಒಂದಿದೆ ಅದು ಹೇಗೆಂದು ನೋಡಿದರೆ.

ನಮ್ಮ ಶರೀರದಲ್ಲಿ ಆಸೆ, ಕೋಪ, ಲೋಭ, ಮೋಹ, ಗರ್ವ, ಅಸೂಯೆ ಎನ್ನುವ ಆರು ಕೆಟ್ಟ ಗುಣಗಳು ಇವೆ. ಅವುಗಳಿಗೆ ವಿರುದ್ಧವಾದ ದಾನ, ದಯ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಎನ್ನುವ ಆರು ಒಳ್ಳೆಯ ಗುಣಗಳೂ ಸಹ ಇವೆ. ಇವೆಲ್ಲವೂ ಶರೀರದಲ್ಲಿ ಇರುವುದರಿಂದ ಇವುಗಳ ಮೇಲೆ ಕರ್ಮ, ಕರ್ಮದ ಮೇಲೆ ನವಗ್ರಹಗಳು ಅಧಿಕಾರ ಹೊಂದಿವೆ. ಆದ್ದರಿಂದ ನವಗ್ರಹಗಳನ್ನು ಅನುಸರಿಸಿ ಕರ್ಮ, ಕರ್ಮವನ್ನು ಅನುಸರಿಸಿ ಗುಣಗಳು ಸ್ಪಂದಿಸುತ್ತಿರುತ್ತವೆ. ನವಗ್ರಹಗಳ ಪ್ರಭಾವ ಕರ್ಮದ ಮುಖಾಂತರ ಗುಣಗಳ ಮೇಲೆ ಇದೆ. ಆದಿತ್ಯಾದಿ ಒಂಭತ್ತು ಗ್ರಹಗಳು ಗುಣಗಳನ್ನು ಸಹ ಒಂದೊಂದನ್ನು ಒಂಭತ್ತು ವಿಧಗಳಾಗಿ ವಿಭಜಿಸಿವೆ. ಕೋಪ ಒಂಭತ್ತು ಹಂತಗಳಾಗಿದೆ. ಆದ್ದರಿಂದಲೇ ನಮಗೆ ಬರುವ ಕೋಪದಲ್ಲಿ ದೊಡ್ಡ ಹಂತದ ಕೋಪ, ಚಿಕ್ಕ ಹಂತದ ಕೋಪ ಇದೆ. ಹಾಗೆ ದೊಡ್ಡ ಆಸೆ ಇದೆ, ಚಿಕ್ಕ ಆಸೆ ಇದೆ. ಉಳಿದ

ಎಲ್ಲಾ ಗುಣಗಳು ಹಾಗೆ ಇವೆ. ಇದು ಪ್ರತ್ಯಕ್ಷವಾಗಿ ಕಾಣಿಸುವ ವಿಷಯವೆ. ಈ ವಿಧವಾಗಿ ನಮ್ಮ ಶರೀರದಲ್ಲಿನ ಕೆಟ್ಟ ಗುಣಗಳು ಒಂದೊಂದು ಒಂಭತ್ತಾಗಿ ಸೀಳಿಹೋಗಿ, ಹಾಗೇ ಅವುಗಳಿಗೆ ವಿರುದ್ಧವಾದ ಆರು ಒಳ್ಳೆಯ ಗುಣಗಳು ಸಹ ಒಂದೊಂದು ಒಂಭತ್ತು ಭಾಗಗಳಾಗಿ ಸೀಳಿಹೋಗಿವೆ. ಒಂದುವರ್ಗವಾದ ಆರು ಗುಣಗಳ ಸೀಳಿಕೆಗಳೆಷ್ಟು ಎಂದು ಲೆಕ್ಕಿಸಿ ನೋಡಿದರೂ 6X9=54 ಆಗುತ್ತವೆ. ಹಾಗೆ ಮತ್ತೊಂದು ವರ್ಗವನ್ನು ಗುಣಿಸಿ ನೋಡಿದರೂ 6X9=54 ಆಗುತ್ತವೆ. ಈ ವಿಧವಾಗಿ ಬಂದಿರುವ ಒಟ್ಟು ಗುಣಗಳ ಸಂಖ್ಯೆ 108 ಎಂದು ತಿಳಿಯುತ್ತಿದೆ.

ಪ್ರಪಂಚ ಆಯಸ್ಸು 108 ಕೋಟಿಗಳ ವರ್ಷಗಳನ್ನನುಸರಿಸಿಯೇ ಮಾನವರ ಜೀವನವನ್ನು ನಡೆಸುವ ಗುಣಗಳ ಸಂಖ್ಯೆ 108 ಇರುವಂತೆ ದೇವರು ಸರಿಮಾಡಿ ಇಟ್ಟಿದ್ದಾನೆ. ಗಣಿತದಲ್ಲಿ ಅತಿ ದೊಡ್ಡ ಸಂಖ್ಯೆ ಕೋಟಿ. ಗಣಿತದಲ್ಲಿನ 108 ಕೋಟಿಗಳು ಜ್ಞಾಪಕ ಇರುವಂತೆ 108 ಆಲೋಚನೆ ವಿಕಾರಗಳನ್ನು ನಮ್ಮ ಶರೀರದಲ್ಲಿ ದೇವರು ಇಟ್ಟಿದ್ದಾನೆ. ಆ ವಿಕಾರಗಳು ಗುಣಿತದಿಂದ ಬಂದಿರುವವು ಆದ್ದರಿಂದ ಗುಣಿತಕ್ಕೆ ಹತ್ತಿರ ಪದವಾಗಿದೆ, ಗುಣಿತದಿಂದ ಉದ್ಭವಿಸಿರುವುದಾಗಿ ಕಾಣಿಸುವಂತೆ ಅವುಗಳನ್ನು "ಗುಣ"ಗಳಂದಿದ್ದಾರೆ. ಈ ವಿಧವಾಗಿ ಶರೀರದಲ್ಲಿರುವ ಯೋಚನೆಗಳಿಗೆ ಗುಣಗಳೆಂಬ ಹೆಸರು ಬಂದಿದೆ. ಇಷ್ಟು ವಿಧಗಳು ಹಿರಿಯರು ಯೋಚಿಸಿ ಗುಣಗಳೆಂದು ಪ್ರತ್ಯೇಕವಾದ ಹೆಸರು ಇಟ್ಟು, ಅವುಗಳೊಂದರ 108 ಸಂಖ್ಯೆಯನ್ನು ಸಹ ಪ್ರತ್ಯೇಕವಾಗಿ ಇಟ್ಟಿದ್ದಾರೆ. 108 ಕೋಟಿಗಳ ವರ್ಷಗಳು 108 ಗುಣಗಳಿಂದ ಜೀವನ ಕಳೆಯಬೇಕೆಂದು ಜ್ಞಾಪಕ ಇರುವಂತೆ ನಾವು ಜಪಿಸುವ ಜಪಮಾಲೆಯಲ್ಲಿ 108 ಮಣಿಗಳನ್ನು ಇಟ್ಟಿದ್ದಾರೆ. ಆದರೂ ನಮ್ಮ ಹಿರಿಯರು ತಿಳಿಸಿದ ವಿಧಾನ ಸ್ವಲ್ಪ ಮಾಸಿಹೋಗಿದೆ. ದೇವರು ಜೀವಿಯಜೊತೆ ಕಳುಹಿಸಿದ ಆಯುವಿನ ಧರ್ಮ ಅಧರ್ಮವಾಗಿ ಬದಲಾಗಿಹೋಗುತ್ತಿದೆ. ಜಪಮಾಲೆಯಲ್ಲಿ 108 ಸಂಖ್ಯೆ ಇನ್ನೂ ಉಳಿದಿದ್ದರೂ ಅದರ ಅರ್ಥ ತಿಳಿಯದಂತೆ ಹೋಗಿದೆ. ವಿರಾಳ ಮಾಡುವುದರಲ್ಲಿಯೂ,

ಮುಡುಪುಗಳು ಕಟ್ಟುವುದರಲ್ಲಿಯೂ, ಮದುವೆಯಲ್ಲಿ ಉಡುಗೊರೆ ಕೊಡುವುದರಲ್ಲಿಯೂ 108 ಕ್ಕೆ ಬದಲು 116 ಮತ್ತು 101 ಸಂಖ್ಯೆ ಬಂದು ಬೀಳುತ್ತಿದೆ. ಪೂರ್ವದಲ್ಲಿ ಕೆಲವು ಲಕ್ಷಗಳ ವರ್ಷಗಳ ಹಿಂದೆ, ಈಗಿರುವ ಅನೇಕ ಮತಗಳು ಇಲ್ಲದೆ ಮೊದಲೆ ಜಪಮಾಲೆ ಸಂಖ್ಯೆಯನ್ನು ನಿರ್ಣಯಿಸಿ ಇಟ್ಟಿದ್ದಾರೆ. ಆದರೆ ಕಾಲಗಮನದಲ್ಲಿ ಆ ಸಂಖ್ಯೆ 116 ಆಗಿ, 101 ಆಗಿ ಬದಲಾಗಿ ಅಲ್ಲಲ್ಲಿ 116, 101 ಸಹ ಕೇಳಿಸುತ್ತಿದೆ. ಇಂದಿಗೂ ಜಪಮಾಲೆಯಲ್ಲಿ 108 ಸಂಖ್ಯೆ ಇರುವುದು ನೋಡಿದರೆ ಸ್ವಲ್ಪ ಧರ್ಮ ಉಳಿದಿದೆ ಎಂದು ಹೇಳಬಹುದು. ಕೆಲವರು 101 ಮತ್ತು 116 ಸಂಖ್ಯೆಯನ್ನು ಮಾಲೆಯಲ್ಲಿ ಇಟ್ಟುಕೊಂಡರೆ ಅದು ತಪ್ಪೆಂದು ಮತಗಳು ಹುಟ್ಟದಮೊದಲೆ ಕಾಲಗಮನದಲ್ಲಿ ಬದಲಾಗಿಹೋದ ಸಂಖ್ಯೆಯನ್ನು ಬದಲಾಯಿಸಿಕೊಂಡರೆ ಅರ್ಥದಿಂದ ಕೂಡಿಕೊಂಡಿರುವುದಾಗುತ್ತದೆ ಎಂದು, ಇಲ್ಲದಿದ್ದರೆ ಅರ್ಥಹೀನವಾಗುತ್ತದೆಂದು ತಿಳಿಸುತ್ತಿದ್ದೇವೆ. ದೇವರ ಮೇಲೆ ವಿಶ್ವಾಸ ಇರುವವರೆಲ್ಲರೂ ಯಾವ ಮತದವರಾದರೂ ಇಂದೂಗಳೇ ಅಂದರೆ ಜ್ಞಾನಿಗಳೆ. ಇಂದೂ ಎನ್ನುವ ಪದ ಮತಕ್ಕೆ ಸಂಬಂಧಿಸಿರುವುದು ಅಲ್ಲ. ಆದ್ದರಿಂದ ಎಲ್ಲಾ ಮತಗಳಲ್ಲಿಯೂ ಜಪಮಾಲೆಯ ಉಪಯೋಗವಿದೆ. ಎಲ್ಲಾ ಮತಗಳಲ್ಲಿಯೂ ಜಪಮಾಲೆ ಇದ್ದರೂ ಅದರ ವಿಶಿಷ್ಟತೆ ತಿಳಿಯದಂತೆ ಹೋಗಿದೆ. ಇಂದೂ ಧರ್ಮಗಳಲ್ಲಿ ಮುಖ್ಯವಾದ ಆಯುಃಧರ್ಮ ಹೀಗೆ ಅಧರ್ಮವಾಗಿ ಬದಲಾಗಿಹೋಗುವುದಕ್ಕೆ ಹತ್ತಿರ ಬೀಳುತ್ತಿದೆ. ಇಂದೂಗಳಾದವರು ಇಂತಹ ಎಷ್ಟೋ ಧರ್ಮಗಳನ್ನು ಸರಿಯಾದ ಮಾರ್ಗದಲ್ಲಿ ಆಚರಿಸಬೇಕೆಂದು ಕೋರುತ್ತಿದ್ದೇವೆ. ಧರ್ಮವನ್ನು ಆಚರಿಸುವುದೆಂದರೆ ಸ್ವಧರ್ಮವಾದ ಆತ್ಮ ಧರ್ಮವಾಚರಿಸುವುದು. ಅದು ನಿನ್ನನ್ನು ಕಾಪಾಡುತ್ತದೆಂದರೆ ಆಚರಣೆಯಲ್ಲಿರುವ ಜ್ಞಾನ ನಿನ್ನ ಕರ್ಮದಿಂದ ನಿನ್ನನ್ನು ಕಾಪಾಡಿ ದೇವರ ಹತ್ತಿರಕ್ಕೆ ಕಳಿಸುತ್ತದೆ.

**ಧರ್ಮವನ್ನು ಆಚರಿಸು ಅದು ನಿನ್ನನ್ನು ಕಾಪಾಡುತ್ತದೆ.**

# ಹಬ್ಬಗಳು

ಕಾಲ ಪವಿತ್ರವಾದುದು ದೈವಸ್ವರೂಪವಾದುದು. ಒಂದು ಮಾತಿನಲ್ಲಿ ಕಾಲವೇ ನಾನೆಂದು ದೇವರು ಸಹಾ ಗೀತೆಯಲ್ಲಿ ಹೇಳಿದ್ದಾನೆ. ಕಾಲವೆಷ್ಟು ದೊಡ್ಡದಾದರು ನಮಗೆ ಸಹಜವಾದುದಾಗಿ ಇದೆ. ಅದರ ಬೆಲೆ ಮಾತ್ರ ಕಾಣಿಸದಂತಿದೆ. ಯಾರು ಕಾಲವನ್ನು ಕುರಿತು ಆಲೋಚಿಸುತ್ತಿಲ್ಲ. ಕೆಲವರು ಹಿರಿಯರು ಕಾಲ ಬೆಲೆಯುಳ್ಳದ್ದೆಂದು ಗ್ರಹಿಸಿ ಟೈಮ್ ಈಜ್ ಮನಿ(ಕಾಲ ಹಣಕ್ಕೆ ಸಮಾನ) ಅಂದಿದ್ದಾರೆ. ಆ ಮಾತಿಗಿಂತಲೂ ಸಹ ಬೆಲೆಯುಳ್ಳದ್ದೆಂದು ನಾವು ಅನ್ನುತ್ತಿದ್ದೇವೆ. ಏಕೆಂದರೆ! ಹೋದ ಹಣವನ್ನು ಮತ್ತೆ ಸಂಪಾದಿಸಬಹುದು. ನಡೆದುಹೋದ ಕಾಲವನ್ನು ಮತ್ತೆ ಸಂಪಾದಿಸಲಾರರು.

ಪ್ರತಿ ಜೀವರಾಶಿ ಕಾಲವನ್ನು ಅನುಭವಿಸುತ್ತಾ ಇದೆ. ಪ್ರತಿ ಜೀವರಾಶಿ ಶರೀರದಿಂದ ಎಷ್ಟೋ ಒಳ್ಳೆಯ ಕೆಟ್ಟ ಕೆಲಸಗಳಲ್ಲಿ ಕಾಲವನ್ನು ವಿನಿಯೋಗಿಸುತ್ತಿದೆ. ನಡೆಯುವ ಕಾಲದಲ್ಲಿ ಒಳ್ಳೆಯ ಕೆಲಸ ನಡೆದರು, ಕೆಟ್ಟಕೆಲಸ ನಡೆದರು ಮಾಡುವ ಜೀವರಾಶಿಗೇ ಅವುಗಳ ಫಲಿತ ಅನುಭವ. ಆದರೆ ಕಾಲಕ್ಕೆ ಒಳ್ಳೆಯ ಕೆಟ್ಟದ ರೊಂದಿಗೆ ಯಾವ ಸಂಬಂಧವಿಲ್ಲ. ಆದ್ದರಿಂದ ಕಾಲವು ದೈವಸ್ವರೂಪವಾದುದೇ ಎನ್ನುವುದರಲ್ಲಿ ಸಂದೇಹ ಇಲ್ಲ. ಕಾಲ ಒಬ್ಬ ಮನುಷ್ಯನಿಗೆ, ಒಂದು ಜಾತಿಗೆ, ಒಂದು ದೇಶಕ್ಕೇ ಪರಿಮಿತವಾದುದು ಅಲ್ಲದೇ ಯಾವತ್ ಪ್ರಪಂಚಕ್ಕೆ ವಿನಿಯೋಗಿಸಲ್ಪಡುತ್ತಿದೆ. ಉದಾಹರಣೆಗೆ ಇಂಡಿಯಾದಲ್ಲಿರುವ ವ್ಯಕ್ತಿಗೆ, ಅಮೇರಿಕಾದಲ್ಲಿರುವ ವ್ಯಕ್ತಿಗೆ ಕಾಲವೊಂದೇ ವಿಧವಾಗಿ ಇದೆ. ಎಲ್ಲರಿಗೂ ಸಮಾನವಾದ ಕಾಲದಲ್ಲಿ ಅವರವರ ಕೆಲಸಗಳು ಅವರವರ ಅನುಭವಗಳು ಬೇರೆಯಾಗಿರಬಹುದಾಗಲಿ, ಕಾಲ ಎಲ್ಲರಿಗೂ ಒಂದೇ. ಆದ್ದರಿಂದಲೇ ಕಾಲ ದೈವಸ್ವರೂಪವೆಂದು ಹೇಳಬಹುದು.

ಜನ್ಮದಿಂದ ಪ್ರಾರಂಭವಾದ ಕಾಲ ಮರಣದೊಂದಿಗೆ ಅಂತ್ಯವಾಗಿ ಹೋಗುತ್ತಿದೆ. ಜನ್ಮಕ್ಕೂ ಮರಣಕ್ಕೂ ಮಧ್ಯದಲ್ಲಿರುವ ಕಾಲವನ್ನು ಜೀವನ ಇಲ್ಲವೆ ಜೀವನಕಾಲ ಅನ್ನುತ್ತಿದ್ದೇವೆ. ಜೀವನಕಾಲದಲ್ಲಿ ಕೆಲವರು ಒಳ್ಳೆಯವರಾಗಿ

ಕೆಲವರು ಕೆಟ್ಟವರಾಗಿ ಜೀವನವನ್ನು ಸಾಗಿಸುತ್ತಿದ್ದಾರೆ. ಅನಂತವಾದ ಕಾಲದಲ್ಲಿ ಯಾರು ಎಷ್ಟು ವಿಧಗಳು ಬದುಕಿದರೂ ಕೊನೆಗೆ ಅವರು ಕಾಲಗರ್ಭದಲ್ಲಿ ಬೆರೆತುಹೋಗುವವರೇ.

ಜೀವನಕಾಲದಲ್ಲಿ ಪ್ರತ್ಯೇಕತೆ ಹೊಂದಿದವರನ್ನು ಚಿರಂಜೀವಿಗಳೆಂದು ಅನ್ನುವುದು ನಡೆಯುತ್ತಿದೆ. ಅವರ ಜೀವನಕಾಲ ಸ್ವಲ್ಪವೇ ಆದರೂ ಅವರ ಜೀವನದ ಧ್ಯೇಯ ಬಹಳ ಉತ್ತಮವಾಗಿರುತ್ತದೆ. ಅವರು ಎಲ್ಲರಂತೆ ಅಲ್ಲದೆ ಜೀವನದಲ್ಲಿ ಪ್ರತ್ಯೇಕವಾದುದೇ ಸಾಧಿಸಿರುತ್ತಾರೆ. ಅಂಥವರನ್ನು ಕಾರಣಜನ್ಮಗಳು, ಚಿರಂಜೀವಿಗಳೆಂದು ಎನ್ನುತ್ತಿದ್ದೇವೆ.

ಈ ಕಾಲದಲ್ಲಿ ಕಾಲವೆಂದರೆ ಏನು? ಎಂದು ಯೋಚಿಸದೆ ವ್ಯರ್ಥವಾಗಿ ಕಾಲ ಕಳೆದು ಹುತ್ತದಲ್ಲಿನ ಗೆದ್ದಲು ಹುಟ್ಟುವುದಿಲ್ಲವಾ! ಸಾಯುವುದಿಲ್ಲವಾ! ಎನ್ನುವಂತೆ ಯಾವುದಕ್ಕೂ ಸಾರ್ಥಕವಿಲ್ಲದ ಜೀವನವನ್ನು ಬಹಳಜನ ಕಳೆಯುತ್ತಿದ್ದಾರೆ. ಕ್ಷಣ ಕ್ಷಣ ನಮ್ಮ ಶರೀರದಲ್ಲಿ ಬದಲಾವಣೆ ನಡೆಯುತ್ತಿದೆ. ಕ್ಷಣ ಕ್ಷಣ ಬದಲಾವಣೆಯಿಂದಲೇ ಬಾಲ್ಯದಿಂದ ವೃದ್ಧಾಪ್ಯಕ್ಕೆ ಶರೀರ ಸೇರಿ ಕೊಳ್ಳುತ್ತಿದೆ. ದಿನದಿನ ಕಾಲ ಕಳೆದಂತೆಲ್ಲಾ ಮೃತ್ಯು ಹತ್ತಿರವಾಗುತ್ತಿದೆ. ನಡೆಯುವ ಕಾಲದಲ್ಲಿ ಯಾವುದೋ ಒಂದು ದಿನ ಮೃತ್ಯುವನ್ನು ಸೇರಬೇಕಾಗಿದ್ದೆ. ಆದರೂ ಕಳೆದುಹೋಗುವ ಕಾಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಮರಣ ಹತ್ತಿರವಾಗುತ್ತಿದೆ ಅಲ್ಲವೆ! ಎಂದು ಯಾರು ತಿಳಿಯುತ್ತಿಲ್ಲ. ನಾವು ತಿಳಿದರು ತಿಳಿಯದಿದ್ದರು ಕಾಲ ನಿಲ್ಲುವುದಲ್ಲ, ಮೃತ್ಯು ಬಾರದೆ ಇರುವುದಿಲ್ಲ.

ಮಾನವನ ದೃಷ್ಟಿಯಲ್ಲಿ ಬೆಲೆ ಇಲ್ಲದ ಕಾಲಕ್ಕೆ ಬೆಲೆ ಕಲ್ಪಿಸಬೇಕೆಂದು, ಕಳೆದ ಕಾಲ ಮತ್ತೆ ಬರುವುದಿಲ್ಲವೆಂದು ತಿಳಿಸಬೇಕೆಂದು, ನಿನ್ನ ಜೀವನ ಕಾಲ ಸ್ವಲ್ಪಮಟ್ಟಿನದೆ, ಆ ಸ್ವಲ್ಪಮಟ್ಟಿನ ಕಾಲವೂ ಸಹ ಖರ್ಚಾಗಿಹೋಗುತ್ತಿದೆ ಎಂದು ಆಲೋಚಿಸಬೇಕೆಂದು, ಕಳೆದ ನಿನ್ನ ಜೀವನಕಾಲದಲ್ಲಿ ಏನು ಸಾಧಿಸಿದ್ದೇನೆಂದು ಯೋಚಿಸಬೇಕೆಂದು, ಅಸಲು ಕಾಲವೆಂದರೆ ಏನೋ ಕಣ್ತೆರಸಬೇಕೆಂದು ಹಿರಿಯರು ಇಟ್ಟಿರುವವೇ ಹಬ್ಬಗಳು. ಕಾಯಿ ಸ್ವಲ್ಪ ಕಾಲಕ್ಕೆ ಹಣ್ಣಾಗಿ ಬದಲಾಗುತ್ತಿದೆ.

ಕಾಯಿ ಎನ್ನುವುದು ಹಣ್ಣಾಗಿ ಪರಿವರ್ತನೆ ಹೊಂದುವುದು ನಮಗೆ ಪೂರ್ತಿಯಾಗಿ ತಿಳಿದಿರುವ ವಿಷಯವೆ. ಬದಲಾವಣೆ ಬಂದು ಹಣ್ಣಿನಿಂದ ಹುಟ್ಟಿದ ಪದವೇ ಹಬ್ಬ.

ಸಾಧಾರಣವಾಗಿ ಪ್ರಕೃತಿ ಸಿದ್ಧವಾಗಿ ಪ್ರತಿ ಗಿಡ ವರ್ಷಕ್ಕೊಂದು ಸಲವಾಗಲಿ, ಆರು ತಿಂಗಳಿಗೊಂದುಸಲವಾಗಲಿ, ಮೂರುತಿಂಗಳಿಗೊಂದು ಸಲವಾಗಲಿ ಹೂಬಿಟ್ಟು ಕಾಯಿಗಳು ಕಾಯುವುದು ಸಹಜ. ಗಿಡದಿಂದ ಕಾಯಿ ಕಾಯ್ದು ಹಣ್ಣಾಗಿ ಬದಲಾಗುವುದಕ್ಕೆ ವ್ಯವಧಿ ವರ್ಷಕಾಲ ಹಿಡಿಯುತ್ತಿದೆ. ಗಿಡವನ್ನು ಉದಾಹರಣೆಯಾಗಿ ತೆಗೆದುಕೊಳ್ಳೋಣ. ಗಿಡ ತುಂಬಿದ ಜೀವನದಲ್ಲಿ ಒಂದುಸಲ ಫಲಗಳು ಫಲಿಸಿದರು ಒಂದು ವರ್ಷದ ಕಾಲ ಕಳೆದುಹೋಗುತ್ತಿದೆ. ಹಾಗೆ ಮಾನವನ ಜೀವನಕಾಲ ಒಂದು ವರ್ಷಕಾಲ ಕಳೆದರು, ಕಾಯಿ ಹಣ್ಣಾಗಿ ಬದಲಾದಷ್ಟು ಕಾಲವೆಂದು ಹಬ್ಬ ಎಂದು ಹೆಸರು ಇಟ್ಟಿದ್ದಾರೆ. ಕಾಯಿ ಪಕ್ವಕ್ಕೆ ಬಂದಷ್ಟು ಕಾಲವೆಂದು ಪಕ್ವದಿನ ಎನ್ನುತ್ತಿದ್ದರು. ಕಾಲಕ್ರಮೇಣ ಆ ಪದ ಈಗ ಪಕ್ವದಿನ ಹೋಗಿ ಪರ್ವದಿನವಾಗಿದೆ.

ಗಿಡ ವರ್ಷ ಕಾಲಕ್ಕೆ ತನ್ನ ಸಾರವಾದ ಒಂದು ಹಣ್ಣನ್ನು ಕೊಟ್ಟು ಪರರಿಗೆ ಉಪಯೋಗಪಟ್ಟಿದೆ. ನೀನು ಇತರರಿಗೆ ಯಾವ ವಿಧವಾಗಿ ಉಪಯೋಗ ಪಟ್ಟಿದ್ದೀಯಾ ಎಂದು ನೆನಪು ಬರುವಂತೆ, ವರ್ಷದಕಾಲದಲ್ಲಿ ತಾನು ಸಾಧಿಸಿದ ಫಲಿತವೇನು ಎಂದು ಯೋಚಿಸುವಂತೆ ಒಂದು ದಿನವನ್ನು ಹಬ್ಬ ಎಂಬ ಹೆಸರಿನಿಂದ ಇಟ್ಟಿದ್ದಾರೆ. ನಿತ್ಯ ಜೀವನದಲ್ಲಿ ಮುಳುಗಿಹೋದ ಮನುಷ್ಯ ಕಾಲವನ್ನು ಮರೆತುಹೋಗಿದ್ದಾನೆ. ಆದ್ದರಿಂದ ನಿನ್ನ ಜೀವನದಲ್ಲಿ ಸ್ವಲ್ಪಕಾಲ ಕಳೆದುಹೋಗಿದೆ ಎಂದು ನೆನಪಿಸುವಂತೆ ಹಬ್ಬವನ್ನಿಟ್ಟಿದ್ದಾರೆ. ಉದಾಹರಣೆಗೆ ಯುಗಾದಿ ಹಬ್ಬವನ್ನು ತೆಗೆದುಕೊಳ್ಳೋಣ. ಹೋದ ವರ್ಷ ಯುಗಾದಿ ಹಬ್ಬ ಮಾಡಿದ್ದೇವೆ. ಈ ವರ್ಷವೂ ಸಹ ಮಾಡುತ್ತಿದ್ದೇವೆ. ಇದನ್ನೇ ಹೊಸ ವರ್ಷವೆಂದು ಸಹ ಅನ್ನುತ್ತಿದ್ದೇವೆ. ಪೂರ್ವದಲ್ಲಿ ಹಿರಿಯರು ಜೀವನದಲ್ಲಿ ಒಂದು ವರ್ಷ ಕಳೆದುಹೋಗಿದೆ, ಮತ್ತೊಂದು ಹೊಸ ವರ್ಷ ಬರುತ್ತಿದೆ. ಕಳೆದ ವರ್ಷದಲ್ಲಿ

ನಾನೇನು ಜ್ಞಾನವನ್ನು ಸಾಧಿಸಿದ್ದೇನೆಂದು ಹಿಂತಿರುಗಿ ನೋಡುಕೊಳ್ಳುತ್ತಿದ್ದರಂತೆ. ಆದ್ದರಿಂದ ಆ ದಿನದಂದು ನಿತ್ಯ ಜೀವನ ಕಾರ್ಯಗಳಲ್ಲಿ ಲಗ್ನವಾಗದೆ ಎಲ್ಲಾ ಬಿಟ್ಟು ವಿಶ್ರಾಂತಿ ತೆಗೆದುಕೊಂಡು, ಹಿಂದಿನ ಕಾಲದ ಬಗ್ಗೆಯೂ ಸಹ ಆಲೋಚನೆ ಇಲ್ಲದಂತೆ, ಸ್ವಲ್ಪಕಾಲಕ್ಕೆ ಮೊದಲೇ ಎಲ್ಲಾ ಆಹಾರ ಪದಾರ್ಥಗಳನ್ನು ಎಲ್ಲಾ ದಿನಗಳಿಗಿಂತ ಒಳ್ಳೆಯದಾಗಿರುವಂತೆ, ಆಹಾರವನ್ನು ಕುರಿತು ಆ ದಿನ ಚಿಂತೆಬರದಂತಿರಲು ಕೈಗೂಡಿಸಿಕೊಳ್ಳುತ್ತಿದ್ದರು. ಆಹಾರದಲ್ಲಾಗಲಿ, ಬಟ್ಟೆಗಳಲ್ಲಾಗಲಿ ಚಿಂತೆಯಿಲ್ಲದಂತೆ ಸಮಕೂಡಿಸಿಕೊಂಡು ಪಕ್ಕದ ಕೆಲಸಗಳನ್ನೆಲ್ಲ ಬಿಟ್ಟು ಕಳೆದುಹೋದ ಕಾಲವನ್ನು ಕುರಿತು ಯೋಚಿಸುವುದು ಅಂದಿನ ಕರ್ತವ್ಯವಾಗಿತ್ತು. ಆ ದಿನ ತನ್ನ ಜೀವನ ಕಾಲವನ್ನು ಕುರಿತು ಯೋಚಿಸುವುದು ಆದ್ದರಿಂದ ಜ್ಞಾನ ಸಂಬಂಧವಾದ ದಿನವಾಗಿ ಭಾವಿಸಿಕೊಳ್ಳುತ್ತಿದ್ದರು. ನನ್ನ ಜೀವನ ಇಷ್ಟುಕಾಲ ಈ ವಿಧವಾಗಿ ಕಳೆದುಹೋಗಿದೆ, ಮುಂಬರುವ ಹಬ್ಬದ ಕಾಲದವರೆಗು ಸಾರಾಂಶವಾದ ದೈವಸಂಬಂಧವಾದ ಜ್ಞಾನಜೀವನವನ್ನು ಕಳೆಯಬೇಕೆಂದು ಕೋರುತ್ತಾ ಪ್ರಾರ್ಥನಾ ಮಂದಿರಗಳಲ್ಲಿಯೊ ಮನೆಯಲ್ಲಿಯೊ ದೇವರ ಆರಾಧನೆಗಳು ನಡೆಸುತ್ತಿದ್ದರು.

ನಿನ್ನ ಜೀವನ ಸ್ವಲ್ಪ ಕಾಯಿಯಿಂದ ಹಣ್ಣಾಗಿ ಬದಲಾಗಿದೆ ಎಂದು, ಯಾವಾಗ ಉದರಿಹೋಗುತ್ತದೋ ಹೇಳಲಾರೆವೆಂದು ಯೋಚಿಸುವುದಕ್ಕೆ ಗುರುತಾಗಿ ಆ ದಿನ ಹಿರಿಯರು ಹಬ್ಬವನ್ನು ಇಟ್ಟಿದ್ದಾರೆ. ನಿತ್ಯ ಜೀವನದಲ್ಲಿ ಲಗ್ನವಾಗಿರುವ ಮಾನವನಿಗೆ ನಿನ್ನ ಆಯಸ್ಸು ಸ್ವಲ್ಪ ಕಳೆದುಹೋಗಿದೆ ಎಂದು, ಕಳೆದ ಕಾಲದಲ್ಲಿ ಹುಟ್ಟಿ ಏನು ಸಾಧಿಸಿದ್ದೀಯಾ ಎಂದು ತಿಳಿಸುವುದಕ್ಕೆ ಹಿರಿಯರು ಹಬ್ಬವನ್ನು ಇಟ್ಟಿದ್ದಾರೆ. ಈ ಹಬ್ಬಗಳು ಒಂದು ಮತದಲ್ಲಿ ಅಲ್ಲದೇ ಎಲ್ಲಾ ಮತಗಳಲ್ಲಿ ಇರುವುದು ಗಮನಿಸಬೇಕಾದ ವಿಷಯ. ಒಂದೊಂದು ಮತಕ್ಕೆ ಒಂದೊಂದು ಹಬ್ಬ ನಿರ್ಣಯಿಸಲ್ಪಟ್ಟಿದೆ. ಪೂರ್ವದಲ್ಲಿ ಎಲ್ಲಾ ಮತಗಳ ಹಿರಿಯರು ಒಂದೇ ಭಾವದಿಂದ ಹಬ್ಬಗಳು ಇಟ್ಟಿದ್ದಾರೋ ಇಲ್ಲವೋ ಹೇಳಲಾರೆವು. ಆದರೂ ಹಬ್ಬ ಎಂದರೆ ಕಾಯಿಯಂತಹ ನಿನ್ನ ಜೀವನ ಸ್ವಲ್ಪ ಪರಿಪಕ್ವತೆಗೆ ಬಂದು ಹಣ್ಣಾಗಿದೆ ಎಂದು ತಿಳಿಸುವುದೇ ಹಬ್ಬ.

ಈಗಿನ ಕಾಲದಲ್ಲಿ ಎಲ್ಲಾ ಮತಗಳ ಹಬ್ಬಗಳು ಒಂದೇ ಪದ್ಧತಿ, ಒಂದೇ ಭಾವದಿಂದ ಇವೆ ಅಂದುಕೊಳ್ಳುತ್ತೇವೆ. ಹಬ್ಬ ಎಂದರೆ ಎಲ್ಲಾ ಮತದವರು ಹೊಸ ಬಟ್ಟೆಗಳು ಧರಿಸುವುದು, ಒಳ್ಳೆಯ ತಿಂಡಿ ತಿನ್ನುವುದು, ಯಾವುದೋ ಒಬ್ಬ ದೇವರನ್ನು ಆರಾಧಿಸುವುದು, ಮುಗಿಯುವುದು ರೂಢಿಯಾಗಿದೆ. ಕೆಲವರು ಮಾತ್ರ ತಿಂಡಿಗೋಸ್ಕರವೇ ಹಬ್ಬ ಎನ್ನುವಂತೆ ಎಲ್ಲಾ ದಿನಗಳಿಗಿಂತ ಆ ದಿನ ಹೆಚ್ಚಾಗಿ ತಿಂದು ಆಯಾಸಪಡುತ್ತಿರುತ್ತಾರೆ. ಕೆಲವರು ಉಯ್ಯಾಲೆಯಲ್ಲಿ ತೂಗುವುದೋ, ಆಟಗಳು ಆಡುವುದೊ ಮಾಡುತ್ತಾ ಸಂತೋಷಪಡುತ್ತಿದ್ದಾರೆ. ಕೆಲವರು ಕುಡಿದು ಕುಪ್ಪಳಿಸುತ್ತಾರೆ. ಕೆಲವರು ಇಸ್ಪೇಟ್ ಆಟದಲ್ಲಿಯೇ ಅನ್ಯಚಿಂತೆ ಇಲ್ಲದೆ ದಿನವೆಲ್ಲಾ ಕಳೆಯುತ್ತಿದ್ದಾರೆ. ಕೆಲವರೇನೋ ದೇವರನ್ನು ಮುಗಿಯುವುದಕ್ಕೆ ಲೈಸೆನ್ಸ್ ದಿನವೆನ್ನುವಂತೆ ಆ ಒಂದು ದಿನ ಇಷ್ಟವಿದ್ದರೂ ಇಲ್ಲದಿದ್ದರೂ ಮುಗಿದು ಕೈ ಕೊಡವಿಕೊಳ್ಳುತ್ತಿದ್ದಾರೆ. ಕೆಲವರು ಉದ್ಯೋಗಸ್ಥರು ಉದ್ಯೋಗಕ್ಕೆ ರಜಾ ದಿನವಾಗಿರುತ್ತದೆ ಎಂದು ಹಬ್ಬ ಎಂದರೆ ಒಳ್ಳೆಯದೇ ಎಂದು ಸಂತೋಷಿಸುತ್ತಿದ್ದಾರೆ. ಕೆಲವರು ವ್ಯಾಪಾರಸ್ತರು ಕಳೆದ ವರ್ಷ ಎಷ್ಟು ಪಾಪ, ಎಷ್ಟು ಪುಣ್ಯ ಸಂಪಾದಿಸಿದ್ದೇವೆಂದು ಲೆಕ್ಕಿಸದೆ, ಹಣ ಎಷ್ಟು ಸಂಪಾದಿಸಿದ್ದೇವೆಂದು ಲೆಕ್ಕಗಳು ನೋಡಿಕೊಳ್ಳುತ್ತಿದ್ದಾರೆ.

ಪೂರ್ವದಲ್ಲಿ ಹಿರಿಯರು ಇಟ್ಟಿರುವ ಭಾವವೆಲ್ಲವೂ ಮಣ್ಣುಪಾಲಾಗಿ ಹಬ್ಬವೆಂದರೆ ಏನೋ ಅಸಲಾದ ಅರ್ಥವೇ ತಿಳಿಯದೆ ಹೋಗಿದೆ. ಪೂರ್ವದಲ್ಲಿ ವರ್ಷಕ್ಕೊಂದು ಹಬ್ಬ ಇರುತ್ತಿತ್ತು. ಈಗ ವರ್ಷಕ್ಕೆಷ್ಟೋ ಲೆಕ್ಕವಿಲ್ಲದಷ್ಟು ಇವೆ. ಪೂರ್ವದಲ್ಲಿ ಒಬ್ಬನೇ ದೇವರೆಂಬ ಭಾವನೆ ಇರುತ್ತಿತ್ತು. ಈಗ ಅನೇಕ ಮಂದಿ ದೇವರುಗಳಾಗಿದ್ದಾರೆ, ಅನೇಕ ಹಬ್ಬಗಳಾಗಿವೆ. ಮಾನವ ಜೀವನಕ್ಕೆ ಅಳತೆ ಬದ್ಧವಾದ ಹಬ್ಬವೆಂದು ಸ್ವಲ್ಪವೂ ಯೋಚಿಸದ ಸ್ಥಿತಿಯಲ್ಲಿ ಎಷ್ಟೋ ಹಬ್ಬಗಳು ಮಾಡಿದ್ದೇವೆ, ಇನ್ನು ಎಷ್ಟೋ ಹಬ್ಬಗಳು ಬರಲಿವೆ. ಈಗಿನಿಂದ ಯಾವ ವಿಧವಾಗಿ ಮಾಡಬೇಕೆಂದುಕೊಂಡಿದ್ದೀರೋ! ನೀವೆ ಚೆನ್ನಾಗಿ ಯೋಚಿಸಿಕೊಳ್ಳಿ.

# ಕೀರ್ತನೆಯಾ? – ತತ್ತ್ವವಾ?

ಕೀರ್ತಿ ಪ್ರತಿಷ್ಠೆಗಳು ಎನ್ನುವ ಮಾತುಗಳನ್ನು ಕೆಲವು ಕಡೆ ಕೇಳಿರುತ್ತೇವೆ. ಹಾಗೆಯೇ ತತ್ತ್ವಜ್ಞಾನ ಎನ್ನುವಮಾತನ್ನು ಸಹ ಕೇಳಿಯೇ ಇರುತ್ತೇವೆ. ಇದರಿಂದ ಕೀರ್ತಿಬೇರೆ, ತತ್ತ್ವಬೇರೆ ಎಂದು ಸುಲಭವಾಗಿ ತಿಳಿಯುತ್ತಿದೆ. ಕೀರ್ತಿ ಪ್ರಪಂಚ ಸಂಬಂಧವಾದುದು, ತತ್ತ್ವವು ಪರಮಾತ್ಮ ಸಂಬಂಧವಾದುದು. ಏಕೆಂದರೆ! ಕೀರ್ತಿ ಎಷ್ಟು ಸಂಪಾದಿಸಿದರೆ ಅದು ಅಷ್ಟಾಗಿ ಪ್ರಪಂಚದಲ್ಲಿಯೇ ನಿಂತು ಹೋಗುತ್ತದೆ. ತತ್ತ್ವವು ಎಷ್ಟು ತಿಳಿಯಲ್ಪಟ್ಟರೆ ಅಷ್ಟು ದೇವರಿಗೆ ಹತ್ತಿರ ಮಾಡುತ್ತದೆ. ಕೀರ್ತಿ ಪ್ರಪಂಚದಲ್ಲಿ ಪ್ರತಿಷ್ಠಿಸಲ್ಪಡುವುದು, ತತ್ತ್ವವು ಪರಲೋಕದಲ್ಲಿ ವ್ಯಾಪಿಸಲ್ಪಡುವುದು. ಉದಾಹರಣೆಗೆ ಪ್ರಪಂಚಕೀರ್ತಿಯನ್ನು ಸಂಪಾದಿಸಿದ ಮಹಾತ್ಮಾಗಾಂಧಿ ಮರುಜನ್ಮಕ್ಕೆ ಹೋಗಿದ್ದಾನೆ, ಆದರೆ ಮೋಕ್ಷ ಹೊಂದಲಿಲ್ಲ. ತತ್ತ್ವಜ್ಞಾನವನ್ನು ಸಂಪಾದಿಸಿದ ಜನಕಮಹಾರಾಜ ಪರಲೋಕಕ್ಕೆ ಹೋಗಿದ್ದಾನೆ, ಆದರೆ ಜನ್ಮಕ್ಕೆ ಹೋಗಲಿಲ್ಲ. ಬಹಳಜನರಿಗೆ ಇವುಗಳ ವಿವರ ತಿಳಿಯದೆ ಕೀರ್ತಿ, ತತ್ತ್ವಗಳ ವ್ಯತ್ಯಾಸಗಳನ್ನು ಗುರುತಿಸಲಾರದೆ ಹೋಗುತ್ತಿದ್ದಾರೆ. ಹಾಗೆ ಅವುಗಳ ವಿವರವಾಗಲಿ, ಅವುಗಳ ಭೇದವಾಗಲಿ ತಿಳಿಯದೆಹೋಗುವುದರಿಂದ ಅವುಗಳ ಫಲಿತಗಳ ಭೇದವೂ ಸಹ ತಿಳಿಯದಂತೆಹೋಗಿದೆ. ಆದ್ದರಿಂದ ಇವುಗಳ ವಿವರ ತಿಳಿದುಕೊಳ್ಳುವುದು ಎಷ್ಟಾದರು ಒಳ್ಳೆಯದೆ.

ಇತರರ ಪ್ರಪಂಚ ಅವಶ್ಯಕತೆಗಳನ್ನು ಯಾರಾದರೆ ತೀರಿಸುತ್ತಾನೋ, ಅವನನ್ನು ಇತರರು ಹೊಗಳುತ್ತಾರೆ. ಹಾಗೆ ಅವನನ್ನು ಹೊಗಳುವುದನ್ನು ಕೀರ್ತಿಸುವುದು ಎನ್ನುತ್ತೇವೆ. ಒಬ್ಬನು ಇತರರಿಗೆ ಉಪಯೋಗಪಡುವುದರಿಂದ ಅವನು ಕೀರ್ತಿಯನ್ನು ಸಂಪಾದಿಸಿದವನಾಗುತ್ತಾನೆ. ಇತರರ ಹಸಿವಿಗೆ ಅನ್ನ ಇಡುವುದರಿಂದ, ದಾಹಕ್ಕೆ ನೀರು ಕೊಡುವುದರಿಂದ, ಹಾಕಿಕೊಳ್ಳುವುದಕ್ಕೆ ಬಟ್ಟೆಕೊಡುವುದರಿಂದ, ವಾಸಿಸುವುದಕ್ಕೆ ಮನೆ ಕೊಡುವುದರಿಂದ, ಉಳಿದ ಅವಶ್ಯಕತೆಗಳಿಗೆ ಹಣ ಕೊಡುವುದರಿಂದ ಯಾರಾದರಾಗಲಿ ಕೀರ್ತಿಯನ್ನು ಗಳಿಸಿದವನಾಗುತ್ತಾನೆ. ಪ್ರಪಂಚ ಅವಶ್ಯಕತೆಗಳನ್ನು ದೊಡ್ಡದಾಗಿ ತಿಳಿಯುತ್ತಿರುವ ಮನುಷ್ಯನಿಗೆ, ಅಂತಹ ಅವಶ್ಯಕತೆಗಳು ಪೂರೈಸಿದವನು ಉತ್ತಮನಾಗಿಯೇ

ಕಾಣಿಸುತ್ತಾನೆ. ಪ್ರಪಂಚದ ಅವಶ್ಯಕತೆಗಳನ್ನು ದೊಡ್ಡದಾಗಿ ತಿಳಿಯದೆ, ಅವುಗಳಿಗಿಂತ ದೈವಜ್ಞಾನ ದೊಡ್ಡದೆಂದು ತಿಳಿಯುವವನು, ದೈವಜ್ಞಾನವನ್ನು ತಿಳಿಸಿದವನನ್ನು ದೊಡ್ಡದಾಗಿ ತಿಳಿಯುತ್ತಾನೆ. ದೈವಜ್ಞಾನ ಜಿಜ್ಞಾಸಪರನಿಗೆ ಪ್ರಪಂಚಕೀರ್ತಿ ದೊಡ್ಡದಾಗಿ ಕಾಣಿಸುವುದಿಲ್ಲ. ಪ್ರಪಂಚ ಅವಶ್ಯಕತೆಗಳನ್ನು ಪೂರೈಸಿದವನನ್ನು ದೊಡ್ಡದಾಗಿ ತಿಳಿಯುವುದಿಲ್ಲ. ಆತನು ಜ್ಞಾನವನ್ನು ತಿಳಿಸಿದವನನ್ನು ಹೆಚ್ಚಾಗಿ ಜ್ಞಾಪಕ ಮಾಡಿಕೊಳ್ಳುತ್ತಾನೆ. ಇದರಿಂದ ಪ್ರಪಂಚಕೀರ್ತಿ, ಜ್ಞಾನಕೀರ್ತಿ ಎಂದು ಎರಡು ವಿಧಗಳಾಗಿ ಕೀರ್ತಿಯನ್ನು ವಿಭಜಿಸಿಕೊಳ್ಳಬಹುದು. ಉದಾಹರಣೆಗೆ ದೈವಜ್ಞಾನಕೀರ್ತಿಯನ್ನು ಸಂಪಾದಿಸಿಕೊಂಡವರಾಗಿ ಎಷ್ಟೋ ಮಂದಿ ಬೋಧಕರನ್ನು ಹೇಳಿಕೊಳ್ಳಬಹುದು. ದೈವಜ್ಞಾನವೂ ಸಹ ಕೆಲವರಿಗೆ ಅವಶ್ಯಕವೇ ಆದ್ದರಿಂದ ಆ ಅವಶ್ಯಕತೆಯನ್ನು ಪೂರೈಸಿದ ಬೋಧಕರನ್ನು ಯಾರಾದರೂ ಕೀರ್ತಿಸುತ್ತಾರೆ. ಕೀರ್ತಿ ಪ್ರತಿಷ್ಠೆ ಬೇರೆ, ತತ್ತ್ವಜ್ಞಾನ ಬೇರೆಂದು ಮೊದಲೇ ಹೇಳಿಕೊಂಡಿದ್ದೇವೆ. ಇಲ್ಲಿ ಜ್ಞಾನಕೀರ್ತಿಯನ್ನು ಹೊಂದಿದ ಬೋಧ ಕನಿಗೆ ಆತ್ಮಜ್ಞಾನ (ತತ್ವಜ್ಞಾನ) ತಿಳಿಯದೇಹೋದರೆ ಆತನು ಮೋಕ್ಷವನ್ನು ಹೊಂದಲಾರ. ಈ ಸೂತ್ರದ ಪ್ರಕಾರ ದೈವಜ್ಞಾನವನ್ನು ಹೇಳುವುದರಲ್ಲಿ ಎಷ್ಟೋ ಕೀರ್ತಿಯನ್ನು ಸಂಪಾದಿಸಿದ ಶಂಕರಾಚಾರ್ಯ, ರಾಮಾನುಜಾಚಾರ್ಯ ಮೊದಲಾದ ಹಿರಿಯರೂ ಸಹಿತ ಯೋಗಿಗಳು ಆಗಲಾರದೆ, ಮೋಕ್ಷವನ್ನು ಪಡೆಯಲಾರದೆ ಹೋಗಿದ್ದಾರೆ. ಅಷ್ಟುದೊಡ್ಡವರೇ ಮೋಕ್ಷವನ್ನು ಪಡೆಯಲಾರದೆ ಹೋದರೆ ಅವರ ಮಾರ್ಗವನ್ನು ಅನುಸರಿಸುವವರು ಯಾರೂ ಮೋಕ್ಷ ಹೊಂದಲಿಲ್ಲವೆಂದೇ ಹೇಳಬಹುದು. ಪ್ರಪಂಚ ಕೆಲಸಗಳು ಕೀರ್ತಿಯಾಗಲಿ, ಜ್ಞಾನಕೀರ್ತಿಯಾಗಲಿ ತತ್ತ್ವಜ್ಞಾನವಲ್ಲ. ಇಲ್ಲಿ ಕೆಲವರಿಗೊಂದು ಪ್ರಶ್ನೆ ಬರಬಹುದು ದೈವಜ್ಞಾನ ಬೇರೆ, ತತ್ತ್ವ ಜ್ಞಾನ ಬೇರೆಯಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ದೈವಜ್ಞಾನ ತತ್ತ್ವಜ್ಞಾನ ಎರಡು ಒಂದೇ. ಆದರೆ ಇಲ್ಲಿ ಬೋಧಕರಿಂದ ಹೇಳಲಾಗುವುದು ದೈವಜ್ಞಾನವೆಂದು ಹೆಸರು ಇಡಲಾದ ಪ್ರಕೃತಿಜ್ಞಾನ. ಆದ್ದರಿಂದ ಅದು ದೈವಜ್ಞಾನ ಆಗುವುದಿಲ್ಲ.

ಬಾಯಾರಿಕೆ ಆದವನು ಒಳ್ಳೆಯನೀರನ್ನು ಕೋರಿಕೊಳ್ಳುತ್ತಾನೆ. ಯಾರಾದರೂ ನೀರು ಕೊಟ್ಟರೆ ಅವುಗಳನ್ನು ಸ್ವಲ್ಪ ಕುಡಿಯುತ್ತಲೇ ಅವರು ಕೊಟ್ಟಿರುವವು ಒಳ್ಳೆಯನೀರಾ ಅಥವಾ ಉಪ್ಪುನೀರಾ ಎಂದು ತಿಳಿದುಕೊಳ್ಳುತ್ತಾನೆ. ನೀರಿನ ವಿಷಯ ಆತನಿಗೆ ತಿಳಿದಿದೆಯಾದ್ದರಿಂದ ಯಾರಾದರೂ ಇವು ಒಳ್ಳೆಯ ನೀರೆಂದು ಹೇಳಿ ಉಪ್ಪುನೀರು ಕೊಟ್ಟರೆ, ತಕ್ಷಣ ಇವು ಒಳ್ಳೆಯ ನೀರು ಅಲ್ಲ ಉಪ್ಪುನೀರೆಂದು ಹೇಳುತ್ತಾನೆ. ಜ್ಞಾನ ಜಿಜ್ಞಾಸಪರನು ದೈವಜ್ಞಾನವನ್ನೇ ಕೋರಿ ಕೊಳ್ಳುತ್ತಾನೆ. ಯಾರಾದರೂ ಬೋಧಕನು ಜ್ಞಾನವನ್ನು ತಿಳಿಸಿದರೆ ಅದನ್ನು ದೈವಜ್ಞಾನವೇ ಅಂದುಕೊಳ್ಳುತ್ತಾನೆ. ಆದರೆ ಅದು ದೈವಜ್ಞಾನವೊ! ಪ್ರಕೃತಿಜ್ಞಾನವೊ ಎಂದು ಗುರುತಿಸಲಾರನು. ಏಕೆಂದರೆ ಆತನಿಗೆ ನೀರಿನ ವಿವರ ತಿಳಿದಂತೆ ಜ್ಞಾನವೊಂದರ ವಿವರ ತಿಳಿದಿಲ್ಲ. ಆದ್ದರಿಂದ ಪ್ರಕೃತಿ ಜ್ಞಾನವನ್ನು ಪರಮಾತ್ಮ ಜ್ಞಾನವೆಂದು ನಂಬುತ್ತಿದ್ದಾನೆ. **ಎಲ್ಲಾದರೆ ಸ್ತ್ರೀ ಸ್ವರೂಪವನ್ನು ದೇವತೆಯಾಗಿ ಹೇಳುತ್ತಿದ್ದಾರೋ, ಎಲ್ಲಾದರೆ ಮಂತ್ರಗಳ ಬೀಜಾಕ್ಷರಗಳನ್ನು ಹೇಳುತ್ತಿದ್ದಾರೋ, ಎಲ್ಲಾದರೆ ಯಂತ್ರಗಳ ಪ್ರತಿಷ್ಠೆಯನ್ನು ಹೇಳುತ್ತಿದ್ದಾರೋ, ಎಲ್ಲಾದರೆ ಯಜ್ಞಗಳನ್ನು ಕುರಿತು ಹೇಳುತ್ತಿದ್ದಾರೋ, ಎಲ್ಲಾದರೆ ಬಾಹ್ಯ ಆರಾಧನೆಗಳನ್ನು ಕುರಿತು ಬೋಧಿಸುತ್ತಿದ್ದಾರೋ ಅಲ್ಲಿ ಹೇಳುವುದೆಲ್ಲ ಪ್ರಕೃತಿ ಜ್ಞಾನವೆಂದು ಬಹಳಜನ ಜ್ಞಾನಜಿಜ್ಞಾಸರಿಗೆ ತಿಳಿಯದು**. ಎಷ್ಟೋ ಮಂದಿ ಬೋಧಕರು ಗುರುಗಳಂತೆ ಚಲಾವಣೆ ಆಗುತ್ತಾ, ದೈವಜ್ಞಾನವೆಂಬ ಹೆಸರಿನಿಂದ, ಪ್ರಕೃತಿ ಜ್ಞಾನವನ್ನು ಬೋಧಿಸುತ್ತಿದ್ದಾರೆ. ಅಂತಹ ಬೋಧನೆಗಳನ್ನು ಬೋಧಿಸಿ ಕೀರ್ತಿ ಹೊಂದಿದವರು ಕೀರ್ತಿಪರರೇಯಾಗಲಿ ತತ್ತ್ವಜ್ಞಾನಪರರು ಅಲ್ಲ.

ನೀರನ್ನು, ಅನ್ನವನ್ನು, ವಸ್ತ್ರಗಳನ್ನು, ಗೃಹಗಳನ್ನು, ಧನವನ್ನು ಇಲ್ಲದವನಿಗೆ ಕೊಟ್ಟು ಸಹಾಯಮಾಡಿ ಪ್ರಖ್ಯಾತಿಹೊಂದಿದವರು ಭೂಮಿಮೇಲೆ ಎಷ್ಟೋಜನ ಇದ್ದಾರೆ. ದಾನಕೊಡುವವನು ತನ್ನ ಸಂಪತ್ತನ್ನು ಅನ್ಯಾಯವಾಗಿ ಸಂಪಾದಿಸಿ ಆ ಧನವನ್ನು ಇತರರಿಗೆ ಯಾವ ರೂಪದಲ್ಲಿ ಕೊಟ್ಟರು ಅದು ದಾನವೇ ಆಗುತ್ತದೆ. ಯಾವ ರೂಪವಾಗಿ ಸಂಪಾದಿಸಿದರೂ ಇತರರ ಅವಶ್ಯಕತೆಗಳಿಗೆ

ಉಚಿತವಾಗಿ ಕೊಡುವುದು ದಾನವೇ ಆಗುತ್ತದೆ. ಅಂತಹ ದಾನದಿಂದ ಕೀರ್ತಿಬರಬಹುದಾಗಲಿ ಮೋಕ್ಷ ಬರುವುದಿಲ್ಲ. ಆದ್ದರಿಂದ ಭಗವದ್ಗೀತೆಯಲ್ಲಿ ದಾನದಿಂದ ಮೋಕ್ಷ ಬರುವುದಿಲ್ಲವೆಂದು ಭಗವಂತನು ವಿಶ್ವರೂಪ ಸಂದರ್ಶನ ಯೋಗವೆಂಬ ಅಧ್ಯಾಯದಲ್ಲಿ ಹೇಳಿದ್ದಾನೆ. ದುಷ್ಟನು ದಾನ ಕೊಟ್ಟರೂ ಅದು ಅವನಿಗೆ ಕೀರ್ತಿಯನ್ನೇ ತಂದಿಡುತ್ತದೆ. ಒಬ್ಬ ಮಂತ್ರಿ ಒಬ್ಬ ಬಡವನಿಗೆ ಉಚಿತವಾಗಿ ಯಾವುದು ಕೊಟ್ಟರು ಅದು ದಾನವೇ ಆಗುತ್ತದೆ. ಯಾರು ಕೊಟ್ಟಿದ್ದಾರೆ ಯಾರು ತೆಗೆದುಕೊಂಡಿದ್ದಾರೆನ್ನುವುದು ಮುಖ್ಯವಲ್ಲ. ಆದರೆ ದಾನ ಕೊಟ್ಟವನನ್ನು ತೆಗೆದುಕೊಂಡವನು ಹೊಗಳುತ್ತಾನೆ. ಹಾಗೆಯೇ ಜ್ಞಾನಜಿಜ್ಞಾಸ ಪರನು ಒಬ್ಬ ಬೋಧಕನ ಹತ್ತಿರ ಬೋಧನೆಯನ್ನು ಕೇಳಿದಾಗ ಕೇಳಿದವನು ಹೇಳಿದವನನ್ನು ಹೊಗಳುತ್ತಾನೆ. ಆದರೆ ಇಲ್ಲಿ ಕೇಳಿದವನು, ಬೋಧಿಸಿದವನು ಹೇಳಿರುವುದು ಪ್ರಕೃತಿಜ್ಞಾನವಾ! ಪರಮಾತ್ಮ ಜ್ಞಾನವಾ! ಎಂದು ನೋಡುತ್ತಿಲ್ಲ. ಬೋಧಿಸುವವನು ಜ್ಞಾನವೆಂಬ ಹೆಸರಿನಿಂದ ಯಾವುದು ಹೇಳಿದರು ಅದು ಎಲ್ಲವೂ ದೈವಜ್ಞಾನವೇ ಅಂದುಕೊಳ್ಳುವ ಸ್ಥಿತಿಯಲ್ಲಿ ಜಿಜ್ಞಾಸಪರನು ಇದ್ದಾನೆ. ಅಂಥದರಲ್ಲಿ ಪ್ರಕೃತಿ ಜ್ಞಾನ ಬೋಧಿಸಿದವನಿಗೆ ಸಹ ಕೀರ್ತಿಪ್ರತಿಷ್ಠೆಗಳು ಬರುತ್ತಿವೆ. ಇಲ್ಲಿಯವರೆಗೂ ಗತಕಾಲದಲ್ಲಿ ಕೀರ್ತಿಯನ್ನು ಸಂಪಾದಿಸಿಕೊಂಡವರನ್ನು ಕುರಿತು ಹೇಳಿಕೊಂಡಿದ್ದೇವೆ. ಬಲಿಚಕ್ರವರ್ತಿ ದಾನ ಮಾಡುವುದರಲ್ಲಿ ದೊಡ್ಡವನೆಂದು ಆತನನ್ನು ಈ ದಿನ ಸಹ ಹೊಗಳುತ್ತಿದ್ದಾರೆ. ಹಾಗೆಯೇ ಕರ್ಣನನ್ನು ಸಹ ಹೊಗಳುತ್ತಿದ್ದೇವೆ. ಬಲಿಚಕ್ರವರ್ತಿ, ಕರ್ಣನು ಮೊದಲಾದವರು ಪ್ರಪಂಚಸಂಬಂಧ ದಾನ ಮಾಡಿ ಕೀರ್ತಿಯನ್ನು ಸಂಪಾದಿಸಿಕೊಂಡಿದ್ದಾರೆ. ಹಾಗೆಯೇ ಗತಕಾಲದಲ್ಲಿ ಎಷ್ಟೋ ಬೋಧಕರು ಗುರುಗಳಂತೆ ಪ್ರವರ್ತಿಸಿ ಜ್ಞಾನವನ್ನು ಹೇಳಿ ಕೀರ್ತಿ ಹೊಂದಿದ್ದಾರೆ.

ಪ್ರಸ್ತುತ ಕಾಲದಲ್ಲಿ ಧನಿಕನು ವಸ್ತುದಾನ, ಬೋಧಕನು ಜ್ಞಾನದಾನ ಮಾಡುತ್ತಿದ್ದಾರೆ. ಅಷ್ಟೇ ಅಲ್ಲದೇ ಧನಿಕನು ಬೋಧಕರಿಗೆ ಧನಕೊಟ್ಟು ಅವರಿಂದ ಜ್ಞಾನದಾನ ಮಾಡಿಸಿ ತಾನು ಜ್ಞಾನದಾನ ಮಾಡಿದಂತೆ ತೃಪ್ತಿ ಪಡೆಯುತ್ತಿದ್ದಾನೆ.

ಹಾಗೆಯೇ ಜ್ಞಾನ ತಿಳಿದ ಬೋಧಕನು ಸಹಾ ತಾನು ಸಂಪಾದಿಸಿಕೊಂಡ ಧನವನ್ನು ವಸ್ತುರೂಪವಾಗಿ ಪ್ರಜೆಗಳಿಗೆಕೊಟ್ಟು ತಾನು ವಸ್ತು ದಾನ ಮಾಡಿದ ತೃಪ್ತಿಯನ್ನು ಹೊಂದುತ್ತಿದ್ದಾನೆ. ಉದಾಹರಣೆಗೆ ಒಬ್ಬ ಬಾಬಾ ತನ್ನ ಸುತ್ತ ಮುತ್ತಲಿನ ಹಳ್ಳಿಗಳಲ್ಲಿನ ಪ್ರಜೆಗಳಿಗೆ ಒಂದು ಹಬ್ಬದ ಸಂದರ್ಭದಲ್ಲಿ ಹೊಸ ವಸ್ತ್ರಗಳು, ಮಿಠಾಯಿ ಪೊಟ್ಟಣಗಳು, ಲಡ್ಡು ಉಂಡೆಗಳು ಹಂಚಿದ್ದಾನೆಂದು ಕೊಳ್ಳೋಣ. **ಅದು ಒಬ್ಬ ಬೋಧಕನು ಮಾಡಿದ ವಸ್ತುದಾನವಾಗುತ್ತದೆ.** ಹಾಗೆಯೇ ಒಂದು ಊರಿನಲ್ಲಿ ಧನಿಕನು ತನ್ನಸುತ್ತ ಪಕ್ಕದ ಗ್ರಾಮದವರೆಲ್ಲರೂ ಬಂದು ಜ್ಞಾನವನ್ನು ಕೇಳುವಂತೆ ಒಬ್ಬ ಸ್ವಾಮೀಜಿಯನ್ನು ಆಹ್ವಾನಿಸಿ ಆತನಿಂದ ಜ್ಞಾನವನ್ನು ಹೇಳಿಸಿದ್ದಾನೆಂದು ಕೊಳ್ಳೋಣ. **ಅದು ಒಬ್ಬ ಧನಿಕನು ಮಾಡಿದ ಜ್ಞಾನದಾನ ವಾಗುತ್ತದೆ.** ಈ ವಿಧವಾಗಿ ಧನಿಕರು ವಸ್ತುದಾನ, ಜ್ಞಾನದಾನ ಎರಡು ಮಾಡುತ್ತಿರುವಾಗ, ಕೆಲವರು ಬೋಧಕರು ಜ್ಞಾನದಾನ, ವಸ್ತುದಾನ ಮಾಡುತ್ತಿದ್ದಾರೆ. ಇದೆಲ್ಲವೂ ಕೀರ್ತಿಗೆ ಸಂಬಂಧಿಸಿರುವುದೇ ಆಗುತ್ತದಾಗಲಿ ತತ್ತ್ವಜ್ಞಾನ (ಆತ್ಮಜ್ಞಾನ) ಕ್ಕೆ ಸಂಬಂಧಿಸಿರುವುದು ಅಲ್ಲ.

ತತ್ವಜ್ಞಾನ ಎಂದರೆ ಏನು? ಎಂದು ಪ್ರಶ್ನೆಬಂದರೆ **ಆತ್ಮವನ್ನು ಕುರಿತು ತಿಳಿದುಕೊಳ್ಳುವುದೇ ಆತ್ಮಜ್ಞಾನ ಅಥವಾ ತತ್ತ್ವಜ್ಞಾನ ಅನುತ್ತೇವೆ.** ಇಲ್ಲಿಯವರೆಗು ಅದ್ವೈತದಲ್ಲಾಗಲಿ, ವಿಶಿಷ್ಠಾದ್ವೈತದಲ್ಲಾಗಲಿ, ದ್ವೈತದಲ್ಲಾಗಲಿ ಆತ್ಮವನ್ನು ಕುರಿತು ಪ್ರಸ್ತಾವನೆ ಬರಲಿಲ್ಲ. ಆದ್ದರಿಂದ ಆದಿಶಂಕರಾಚಾರ್ಯರಿಗಾಗಲಿ, ರಾಮಾನುಜಾ ಚಾರ್ಯರಿಗೆ ಆಗಲಿ, ಮದ್ವಾಚಾರ್ಯರಿಗೆ ಆಗಲಿ ಆತ್ಮಜ್ಞಾನ ತಿಳಿದಿಲ್ಲ ಅಂದಿದ್ದೇವೆ. ನಮ್ಮ ಮಾತಿನಲ್ಲಿನ ಸತ್ಯವನ್ನು ತಿಳಿಯಲಾರದೆ ನಮ್ಮ ಮಾತನ್ನು ಕೆಲವರು ಅಸತ್ಯವಾಗಿ ಲೆಕ್ಕಿಸಿಕೊಂಡರೂ ನಾವು ಹೇಳುವ ಮಾತು ನಿಜವಾಗಲು ಸತ್ಯ. **ಅಡಗಿಕೊಂಡಿದ್ದು ಈಗೀಗ ಹೊರಗೆ ಬಂದಿರುವ ಒಂದು ತ್ರೈತಸಿದ್ಧಾಂತದಲ್ಲಿ ಹೊರತು ಆತ್ಮಜ್ಞಾನ ಮತ್ತೆಲ್ಲಿಯೂ ಇಲ್ಲ. ತ್ರೈತಸಿದ್ಧಾಂತ ಆದಿಕರ್ತನಾದ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಿಂದ ಹೇಳಲಾದ ತ್ರೈತ ಸಿದ್ಧಾಂತದಲ್ಲಿ ಆತ್ಮ ಎಂದರೆ ಏನೋ ತಿಳಿಯಲ್ಪಟ್ಟಿದೆ.** ಅದ್ವೈತ ಸಿದ್ಧಾಂತಿಯಾದ ಆದಿಶಂಕರಾ

ಚಾರ್ಯನು ಪರಮಾತ್ಮನನ್ನು ಕುರಿತು ಹೇಳಿದ್ದಾನೆ. ವಿಶಿಷ್ಠಾದ್ವೈತ ಸಿದ್ಧಾಂತಿಯಾದ ರಾಮಾನುಜಾಚಾರ್ಯನು ಪ್ರಕೃತಿಗಿಂತ ವಿಶಿಷ್ಠವಾದುದು ಪರಮಾತ್ಮ ಎಂದು ಹೇಳಿದ್ದಾನೆ. ದ್ವೈತಸಿದ್ಧಾಂತಿಯಾದ ಮಧ್ವಾಚಾರ್ಯನು ಜೀವಾತ್ಮನನ್ನು, ಪರಮಾತ್ಮನನ್ನು ಕುರಿತು ಹೇಳಿದ್ದಾನೆ. ಆದರೆ **ಆತ್ಮವನ್ನು ಕುರಿತು ಪ್ರಬೋಧಾ ಚಾರ್ಯನು ಮಾತ್ರ ತನ್ನ ತ್ರೈತಸಿದ್ಧಾಂತದಲ್ಲಿ ತಿಳಿಸಿದ್ದಾನೆ.** ಆದ್ದರಿಂದ ಆತ್ಮಜ್ಞಾನ ಯಾರಿಗೂ ತಿಳಿದಿಲ್ಲವೆಂದಿದ್ದೇವೆ.

ಇಲ್ಲಿಯವರೆಗೂ ಕೀರ್ತಿಯನ್ನು ಕುರಿತು, ತತ್ತ್ವವನ್ನು ಕುರಿತು ತಿಳಿದುಕೊಂಡಿದ್ದೇವೆ. ಧನವಿರುವ ಧನಿಕರು ಕೀರ್ತಿಯನ್ನು ಸಂಪಾದಿಸಿಕೊಂಡರೂ ಪರವಾಗಿಲ್ಲ. ಆದರೆ ಜ್ಞಾನವಿರುವ ಬೋಧಕನು ಪ್ರಪಂಚಕೀರ್ತಿಯನ್ನು ಸಂಪಾದಿಸಿ ಕೊಳ್ಳುವುದು ಒಳ್ಳೆಯದು ಅಲ್ಲ. ಧನಿಕರು ಪ್ರಪಂಚಸೇವೆಯಲ್ಲಿ ಭಾಗವಾದ ದಾನಗಳು ಮಾಡಬಹುದು. ಆದರೆ ಬೋಧಕರು ದೈವಸೇವೆಯಲ್ಲಿ ಭಾಗವಾದ ತತ್ತ್ವಜ್ಞಾನವನ್ನೆ ಬೋಧಿಸಬೇಕು. ಪ್ರಪಂಚದಲ್ಲಿ ಉಪಯೋಗಪಡುವ ಧನ, ವಸ್ತು, ವಸ್ತ್ರ, ವಾಹನ, ಕನಕಗಳನ್ನು ಕೊಟ್ಟರೂ ಅವು ಭೂಮಿಮೇಲೆ ಸ್ವಲ್ಪಕಾಲವೇ ಆ ಜನ್ಮದಲ್ಲಿ ಮಾತ್ರ ಉಪಯೋಗಪಡುತ್ತವೆ. ಒಂದು ಆತ್ಮಜ್ಞಾನಮಾತ್ರ ಮರುಜನ್ಮಕ್ಕೂ ಸಹ ಹಿಂದೆಬರುತ್ತದೆ, ಶಾಶ್ವತವಾಗಿ ಉಪಯೋಗಪಡುತ್ತದೆ. ಆದ್ದರಿಂದಲೇ ಒಬ್ಬ ಸ್ವಾಮೀಜಿ ದೈವಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಅಜ್ಞಾನ ಪ್ರಜೆಗಳಿಗೆ ಹಂಚಿದರೂ ಅದು ಸಮರ್ಥನೀಯವಾದ ಕೆಲಸ ಆಗುತ್ತದೆ. ಹಾಗಲ್ಲದೆ ಧನಿಕನಂತೆ ಅನೇಕ ಗ್ರಾಮಗಳಿಗೆ ನೀರಿನ ಸೌಕರ್ಯ ಕಲ್ಪಿಸಿದರೂ, ಕೆಲವು ಸಾವಿರಾರುಜನರಿಗೆ ನಿತ್ಯಾನ್ನದಾನ ಮಾಡಿಸಿದರೂ, ಹಬ್ಬಗಳ ಸಂದರ್ಭದಲ್ಲಿ ವಸ್ತ್ರದಾನ, ಮಿಠಾಯಿ ದಾನ ಮಾಡಿದರು ಅದು ಅಸಮರ್ಥ ನೀಯವಾದ ಕೆಲಸವೇ ಆಗುತ್ತದೆ. ಇವೆಲ್ಲ ಧನಿಕರಾಗಲಿ, ಪ್ರಭುತ್ವಗಳಾಗಲಿ ಮಾಡಬೇಕಾದ ಕೆಲಸವಾಗಲಿ ಸ್ವಾಮೀಜಿಗಳು ಮಾಡಬೇಕಾದ ಕೆಲಸವಲ್ಲ. ಮಾನವರಲ್ಲಿ ಪಾಪಭೀತಿಯನ್ನು ಕಲ್ಪಿಸಿ, ಪಾಪಗಳನ್ನು ಮಾಡದಂತೆಮಾಡಿ ತತ್ತ್ವಜ್ಞಾನವನ್ನು ತಿಳಿಯುವಂತೆ ಮಾಡುವುದು. ಸ್ವಾಮೀಜಿಗಳು, ಬಾಬಾಗಳು

ಮಾಡಬೇಕಾದ ಕೆಲಸ. ಅಗಸರ ಕೆಲಸ ಅಗಸರು, ಕ್ಷೌರಿಕರ ಕೆಲಸ ಕ್ಷೌರಿಕರು ಮಾಡಿದರೆ ಚೆನ್ನಾಗಿರುತ್ತದೆ. ಹಾಗಲ್ಲದೆ ಅಗಸನ ಕೆಲಸ ಕ್ಷೌರಿಕ, ಕ್ಷೌರಿಕನ ಕೆಲಸ ಅಗಸ ಮಾಡಿದರೆ ಅದು ವೃತ್ತಿ ಅಲ್ಲವೆಂದು ಹೇಗೆ ಅನ್ನುತ್ತೇವೋ, ಹಾಗೆಯೇ ಸ್ವಾಮೀಜಿಗಳು ದಾನಗಳು ಕೊಡುವುದು, ಧನಿಕರು ಜ್ಞಾನ ಬೋಧಿಸುವುದು ದಾರಿ ತಪ್ಪಿದ ಕೆಲಸವಾಗುತ್ತದೆ.

ವಿದ್ಯೆಯಾಗಲಿ, ವೈದ್ಯವಾಗಲಿ, ಕೂಳಾಗಲಿ, ಬಟ್ಟೆಯಾಗಲಿ ಮಾನವನಿಗೆ ಬಾಹ್ಯ ಪ್ರಪಂಚದಲ್ಲಿ ಅಗತ್ಯವಾದವೆಲ್ಲ ಕರ್ಮಾನುಸಾರ ಮೊದಲೆ ನಿರ್ಣ ಯಿಸಲ್ಪಟ್ಟಿರುತ್ತದೆ. ಕೇವಲ ಒಂದು ದೈವಜ್ಞಾನಮಾತ್ರ ಕರ್ಮಕ್ಕೆ ಅತೀತವಾಗಿರುತ್ತದೆ. ಕರ್ಮಕ್ಕೆ ಅತೀತವಾದ ಜ್ಞಾನವನ್ನು ತಿಳಿಸುವುದು ಬೋಧಕರ (ಸ್ವಾಮೀಜಿಗಳ) ಕೆಲಸವಾಗಿರಬೇಕು. ವಿದ್ಯೆ, ವೈದ್ಯ ಊಟ, ಬಟ್ಟೆ ಎಲ್ಲಾ ಕರ್ಮಾಧೀನವಾಗಿ ಯಾರಿಗೆ ಎಷ್ಟು ಲಭಿಸಬೇಕೋ ಅಷ್ಟೇ ಲಭಿಸುವಂತೆ ಮೊದಲೇ ನಿರ್ಣಯ ಇರುತ್ತದೆ. ಯಾವ ಸಮಯಕ್ಕೆ ಯಾವುದು ಲಭಿಸಬೇಕೋ ಅದು ಯಾರ ಮೂಲಕವಾದರು ಲಭಿಸುತ್ತದೆ. ಆದರೆ ಜ್ಞಾನ ಮಾತ್ರ ಜ್ಞಾನಿಗಳಿಂದಲೇ ಲಭಿಸುತ್ತದೆ. ಆದ್ದರಿಂದ ಜ್ಞಾನಿಗಳು ಪ್ರಪಂಚ ಸಹಾಯಗಳನ್ನು ಮಾಡದೆ ಪರಮಾತ್ಮ ಜ್ಞಾನವನ್ನು ತಿಳಿಸಬೇಕಾಗಿದೆ. ಒಂದು ಸಂದರ್ಭದಲ್ಲಿ ಕೆಲವರು ನಮ್ಮನ್ನು ಈ ವಿಷಯವಾಗಿ ಪ್ರಶ್ನಿಸುತ್ತಾ ನೀವು ಸಮಾಜ ಸೇವೆ ಏನು ಮಾಡುತ್ತಿದ್ದೀರೆಂದು ಕೇಳಿದರು. ಆಗ ನಾವು **"ಜ್ಞಾನ ಸೇವೆ ಹೊರತು ಮನುಷ್ಯರ ಸೇವೆ ಏನು ಮಾಡುವುದಿಲ್ಲ."** ಮನುಷ್ಯರಿಗೆ ಸೇವೆ ಮಾಡುವುದಕ್ಕೆ ಪ್ರಭುತ್ವಗಳಿವೆ, ಧನಿಕರಿದ್ದಾರೆ. ಪ್ರಭುತ್ವಗಳು ನಾವಿರುವುದು ನಿಮಗೋಸ್ಕರವೇ ಎನ್ನುತ್ತಿರುವಾಗ, ಎಷ್ಟೋ ರಂಗಗಳು ಏರ್ಪಡಿಸಿ ಅವುಗಳ ಮೂಲಕ ಮನುಷ್ಯರನ್ನು ಪರಿಪಾಲಿ ಸುತ್ತಿರುವಾಗ ಏನಾದರೂ ಕಡಿಮೆಯಾದರೆ ಪ್ರಭುತ್ವಗಳನ್ನು ಕೇಳಬೇಕು. ಹಾಗೆ ನೀವು ಸ್ವಚ್ಛವಾದ ಜ್ಞಾನವನ್ನು ತಿಳಿಸಿರೆಂದು ನಮ್ಮನ್ನು ಕೇಳಬೇಕು ಎಂದು ಹೇಳಿದೆವು. ಈ ದಿನ ಬಹಳಜನ ಸ್ವಾಮೀಜಿಗಳು ಪ್ರಪಂಚಕೀರ್ತಿಯನ್ನು ಸಂಪಾದಿಸಿಕೊಳ್ಳುವುದಕ್ಕೆ, ತಾವು ಸಂಪಾದಿಸಿಕೊಂಡ ಧನವನ್ನು ಇತರರ

ಅವಶ್ಯಕತೆಗಳಿಗೆ ಖರ್ಚು ಮಾಡುತ್ತಾ ಖ್ಯಾತಿಯನ್ನು ಪಡೆಯುತ್ತಿದ್ದಾರೆ. ಮೊದಲು ಯಾವುದೋ ಒಂದು ವಿಧವಾಗಿ ತಮ್ಮ ಹಿರಿಮೆಯಿಂದಲೋ, ಮಹಿ ಮೆಯಿಂದಲೋ ಧನಿಕರ ಹತ್ತಿರದಿಂದ ಧನವನ್ನು ಸಂಪಾದಿಸಿ ಆ ಧನವನ್ನು ಉಪಯೋಗಿಸಿ ವೈದ್ಯಶಾಲೆಗಳು, ವಿದ್ಯಾಲಯಗಳು ನಿತ್ಯಾನ್ನದಾನಗಳು ಮುಂತಾದವು ನೆಲೆಗೊಳಿಸುತ್ತಾ ಉಚಿತ ವಿದ್ಯೆ, ಉಚಿತ ವೈದ್ಯ, ಉಚಿತ ಊಟ ಎಂದು ಪ್ರಚಾರ ಮಾಡಿಕೊಂಡು ಕೀರ್ತಿಯನ್ನು ಗಳಿಸುತ್ತಿದ್ದಾರೆ.

ಈ ವಿಧವಾಗಿ ಬಹಳಜನ ಸ್ವಾಮೀಜಿಗಳು ಪ್ರಪಂಚ ಸಹಾಯಗಳನ್ನು ಎಲ್ಲರಿಗೂ ತಿಳಿಯುವಂತೆ ಮಾಡುವುದಲ್ಲದೆ, ತಾವು ಸ್ವಾಮಿಗಳಾಗಿರುವುದಕ್ಕೆ ನಾವು ಜ್ಞಾನವನ್ನು ಸಹ ತಿಳಿಸುತ್ತಿದ್ದೇವೆಂದು ದೊಡ್ಡ ದೊಡ್ಡ ಸಭೆಗಳನ್ನು ನಿರ್ವಹಿಸಿ ಅಲ್ಲಿ ಜ್ಞಾನಬೋಧನೆ ಎನ್ನುವ ಹೆಸರಿಟ್ಟು ಬೋಧನೆಗಳು ಹೇಳುತ್ತಿರುತ್ತಾರೆ. ಅಲ್ಲಿನ ಪ್ರವಚನಗಳಲ್ಲಿ ಗತದಲ್ಲಿ ಕೀರ್ತಿ ಗಳಿಸಿದವರನ್ನು ಕುರಿತು ಹೇಳಿಕೊಳ್ಳುವುದು ನಡೆಯುತ್ತಿರುತ್ತದೆ. ಗತದಲ್ಲಿನವರ ದೊಡ್ಡತನವನ್ನು ಕುರಿತು ಹೇಳಿಕೊಳ್ಳುವುದಲ್ಲದೆ, ಅವರ ಹೆಸರಿನ ಮೇಲೆ ಹಾಡುಗಳನ್ನು ಸೃಷ್ಟಿಸಿಕೊಂಡು ಆ ಹಾಡುಗಳಲ್ಲಿ ಅವರ ದೊಡ್ಡತನವನ್ನು ಕುರಿತು ಕೀರ್ತಿ ಸುತ್ತಿರುತ್ತಾರೆ. ಹೀಗೆ ಬಹಳಜನ ಸ್ವಾಮಿಗಳು ತಮಗೆ ತಿಳಿದ ತತ್ತ್ವಬೋಧ (ಆತ್ಮಬೋಧ) ಹೇಳದೆ ತಮಗಿಂತ ಮೊದಲೆ ಹುಟ್ಟಿ ಸತ್ತುಹೋದ ಸ್ವಾಮಿಗಳ ಬಗ್ಗೆ, ಅವರ ಮಹಿಮೆಗಳನ್ನು ಕುರಿತು, ಅವರ ಜೀವನ ಚರಿತ್ರೆಗಳನ್ನು ಕುರಿತು, ಅವರು ಹೇಳಿದ ಜ್ಞಾನವನ್ನು ಕುರಿತು ಸ್ವಲ್ಪ ಮಾತುಗಳ ರೂಪದಲ್ಲಿ, ಸ್ವಲ್ಪ ಹಾಡುಗಳರೂಪದಲ್ಲಿ ಹೇಳುತ್ತಿರುತ್ತಾರೆ. ಕೊನೆಯವರೆಗು ಅವರ ಬೋಧನೆಗಳನ್ನು ಕೇಳಿದರೂ ಅದರಲ್ಲಿ ಕೀರ್ತನೆ ಹೊರತು ಆತ್ಮಜ್ಞಾನ ಸ್ವಲ್ಪವೂ ಇರುವುದಿಲ್ಲ. ಮತ್ತೆ ಕೆಲವರು ಸ್ವಾಮಿಗಳಾದರೆ ನೇರವಾಗಿ ಹಾಡಿನಕಛೇರಿಯಂತೆ ಎಲ್ಲಾ ವಾದ್ಯಗಳಿಂದ ಹಾಡುಗಳೇ ಹಾಡುತ್ತಿರುತ್ತಾರೆ. ಕೇಳುವವರು ತಲೆಗಳು ಅಲ್ಲಾಡಿಸುತ್ತಿದ್ದರೆ, ಆನಂದವಾಗಿ ಕೇಳುತ್ತಿದ್ದರೆ, ಹೇಳುವವರು ಅದೇ ಜ್ಞಾನವೆನ್ನುವಂತೆ ಹೇಳುತ್ತಿರುತ್ತಾರೆ. ನಿನ್ನ ನಾಮ ಕೇಳಿದರೆ ಕರ್ಮಗಳು

ಹೋಗುತ್ತವೆ, ನಿನ್ನ ದರ್ಶನ ದೊರೆತರೆ ಜನ್ಮಗಳು ಹೋಗುತ್ತವೆ ಎಂದು ಒಬ್ಬ ಸ್ವಾಮೀಜಿ ಹಾಡಿದರೆ, ಮತ್ತೊಬ್ಬರು ಓ ಗಾಯಿನಾಥಾ ನಿನಗಿಂತ ಮಿಗಿಲಾದ ದೇವರಿಲ್ಲ, ನಿನ್ನ ಸ್ಪರ್ಶದಿಂದ ನಮ್ಮ ರೋಗಗಳು ಹೋಗುತ್ತವೆ, ನಿನ್ನ ದೃಷ್ಟಿಯಿಂದ ನಮಗೆ ಲಾಭಗಳು ಬರುತ್ತವೆ ಎಂದು ಹಾಡುತ್ತಿರುತ್ತಾರೆ. ಒಬ್ಬರು ಪುರಾಣಗಳ ಕಥೆಗಳನ್ನು ಹೇಳಿದರೆ, ಮತ್ತೊಬ್ಬರು ಪುಣ್ಯಕ್ಷೇತ್ರಗಳ ಕಥೆಗಳನ್ನು ಹೇಳುತ್ತಿದ್ದಾರೆ. ಒಬ್ಬರು ಭಾರತ ರಾಮಾಯಣ ಕಥೆಗಳನ್ನು ಮೆಲಕುಹಾಕುತ್ತಾ ಹೇಳುತ್ತಿದ್ದರೆ, ಮತ್ತೊಬ್ಬರು ದೇವತೆಗಳ ಮಹಿಮೆಗಳನ್ನು ಕುರಿತು ಹೇಳುತ್ತಿರುತ್ತಾರೆ. ಇಷ್ಟದೇವತೆಗಳನ್ನು ಕುರಿತು ಕೆಲವರು ಹೇಳಿದರೆ, ಇಷ್ಟಗಳನ್ನು ಪೂರೈಸಿ ಕಷ್ಟಗಳನ್ನು ಇಲ್ಲದಂತೆ ಮಾಡುವ ದೇವತೆಗಳನ್ನು ಕುರಿತು ಕೆಲವರು ಹೇಳುತ್ತಿರುತ್ತಾರೆ. ಈ ವಿಧವಾಗಿ ಅನೇಕ ವಿಧಗಳ ಬೋಧನೆಗಳನ್ನು ಈಗಿನ ಸ್ವಾಮೀಜಿಗಳು ಕೊನೆಸಾಗಿಸುತ್ತಿದ್ದಾರೆ. ಅವುಗಳೆಲ್ಲವನ್ನು ಪರಿಶೀಲಿಸಿದರೆ ಆತ್ಮವನ್ನು ಕುರಿತು ಜ್ಞಾನವಾಗಲಿ, ಜೀವಾತ್ಮವನ್ನು ಕುರಿತು ಜ್ಞಾನವಾಗಲಿ, ಪರಮಾತ್ಮನನ್ನು ಕುರಿತಾದ ಜ್ಞಾನವಾಗಲಿ ಸ್ವಲ್ಪವೂ ಇರುವುದಿಲ್ಲ. ಅಂತಹದರಲ್ಲಿ ಸ್ವಾಮೀಜಿಗಳು ಹೇಳುವ ಜ್ಞಾನ ದೈವಜ್ಞಾನ ಅಲ್ಲ? ಅಂದರೆ ಯಾವ ಕಾರಣಕ್ಕು ಅಲ್ಲವೆಂದೇ ಹೇಳಬೇಕು. ಅವರು ಹೇಳುವುದೆಲ್ಲಾ ಪ್ರಕೃತಿ ಜ್ಞಾನವೆಂದೆ ಹೇಳಬೇಕು. ಇತರರ ಕೀರ್ತಿಯನ್ನು ಕುರಿತು ಹೇಳುವುದಾದ್ದರಿಂದ ಅವರು ಹೇಳುವುದು ಇತರರ ಕೀರ್ತಿ ಎಂದು, ಅವರು ಹಾಡುವ ಹಾಡುಗಳೆಲ್ಲ ಕೀರ್ತನೆಗಳೆಂದು ತಿಳಿಯುತ್ತಿವೆ. ಎಲ್ಲಿಯಾದರು ಆತ್ಮಜ್ಞಾನಕ್ಕೆ ಸಂಬಂಧಿಸಿದ ಭಗವದ್ಗೀತೆ ಯಾವ ಸ್ವಾಮೀಜಿಯಾದರು ಹೇಳುತ್ತಿದ್ದಾನೆಂದರೆ ಆ ಉಪನ್ಯಾಸದಲ್ಲಿ ಕೃಷ್ಣನು ಹೇಳಿದ ಜ್ಞಾನವೇ ಇದ್ದರೂ ಆ ಸ್ವಾಮೀಜಿ ಮಾತುಗಳಲ್ಲಿ ಜೀವಾತ್ಮ ಇರುತ್ತದೆ, ಪರಮಾತ್ಮ ಇರುತ್ತದೆ. ಆದರೆ ಮಧ್ಯದಲ್ಲಿನ ಆತ್ಮಮಾತ್ರ ಇರುವುದಿಲ್ಲ. ಆತ್ಮವೊಂದರ ಪ್ರಸ್ತಾವನೆ ಇಲ್ಲದಿರುವಾಗ ಅಲ್ಲಿ ಹೇಳುವುದು ಪರಮಾತ್ಮ ಜ್ಞಾನವಾಗಬಹುದು, ಜೀವಾತ್ಮ ಜ್ಞಾನವಾಗಬಹುದು ಆದರೆ ಆತ್ಮಜ್ಞಾನ ಮಾತ್ರ ಅಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಈವಿಧವಾಗಿ ಭಗವದ್ಗೀತೋಪನ್ಯಾಸಗಳಲ್ಲಿ ಸಹ ಆತ್ಮವನ್ನು ಇಲ್ಲದಂತೆ ಮಾಡುತ್ತಿದ್ದಾರೆ. ಭವಿಷ್ಯತ್ತಿನಲ್ಲಿ ಆತ್ಮವನ್ನು ಮರೆತುಹೋಗುತ್ತಾರೇನೋ ಎಂದು ಪೂರ್ವದಲ್ಲಿ

ಹಿರಿಯರು ಊಹಿಸಿದವರಾಗಿ ಹಾಗೆ ಮರೆಯದಿರುವುದಕ್ಕೆ ಆತ್ಮಕ್ಕೆ ಸಂಬಂಧಿಸಿದ ಎಷ್ಟೋ ವಾಕ್ಯಗಳನ್ನು ನಮ್ಮ ಮಧ್ಯದಲ್ಲಿ ಇಟ್ಟಿದ್ದಾರೆ. ಹಾಗೆ ಇಟ್ಟಿರುವ ವಾಕ್ಯಗಳು **ಆತ್ಮಹತ್ಯೆ ಎಂದು, ಆತ್ಮಬೋಧ ಎಂದು, ಆತ್ಮಬಲವೆಂದು, ಆತ್ಮಚೈತನ್ಯವೆಂದು, ಆತ್ಮಗಮನವೆಂದು, ಆತ್ಮಸಾಕ್ಷಿ, ಆತ್ಮಬಂಧು, ಆತ್ಮಾಭಿಮಾನ, ಆತ್ಮಶಕ್ತಿ, ಆತ್ಮವಿಶ್ವಾಸ, ಆತ್ಮವಿಮರ್ಶೆ, ಆತ್ಮಜ್ಞಾನವೆಂದು, ಆತ್ಮತೇಜವೆಂದು** ಹೇಳುವುದಲ್ಲದೆ ಭಗವದ್ಗೀತೆ ಯಲ್ಲಿನ ಶ್ಲೋಕಗಳಲ್ಲಿ ಆತ್ಮ ಎನ್ನುವ ಪದವನ್ನೇ ಉಪಯೋಗಿಸಿದ್ದಾರೆ. ಆದರೂ ಇಂದಿನ ಮಾನವನು ಸ್ವಾಮೀಜಿಯಾಗಿ ಬದಲಾದರು ಆತ್ಮವನ್ನು ಕುರಿತು ತಿಳಿದುಕೊಳ್ಳದೆ ಅನ್ಯರನ್ನು ಕೀರ್ತಿಸುವುದು, ಅನ್ಯದೇವತೆಗಳನ್ನು ಆರಾಧಿಸುವುದು ಮಾಡುತ್ತಾ ತಾನು ಸ್ವತಃ ಕೀರ್ತಿಯನ್ನು ಸಂಪಾದಿಸಿಕೊಳ್ಳುವುದಕ್ಕೆ ಪ್ರಪಂಚ ಸಂಬಂಧ ಸಹಾಯಕ ಕಾರ್ಯಗಳು ಮಾಡುತ್ತಿದ್ದಾನೆ. ಆದ್ದರಿಂದಲೇ ಪ್ರತಿಮನುಷ್ಯ ಮಾನ್ಯನಾಗಲಿ ಸಾಮಾನ್ಯನಾಗಲಿ ನಾನು ಇನ್ನೊಬ್ಬರನ್ನು ಕೀರ್ತಿಸುತ್ತಿದ್ದೇನಾ? ನಾನು ಕೀರ್ತಿಯನ್ನು ಸಂಪಾದಿಸಿಕೊಳ್ಳುತ್ತಿದ್ದೇನಾ? ಎಂದು ಪ್ರಶ್ನಿಸಿಕೊಂಡು ಯೋಚಿಸಿ, ಹಾಗೆ ಆಗದೆ ನಾನು ಆತ್ಮಜ್ಞಾನವನ್ನು ತಿಳಿದುಕೊಳ್ಳುತ್ತಿದ್ದೇನಾ? ಇತರರಿಗೆ ಆತ್ಮಜ್ಞಾನವನ್ನು ತಿಳಿಸುತ್ತಿದ್ದೇನಾ? ಎಂದು ನೋಡಿಕೊಳ್ಳಬೇಕಾಗಿದೆ. ಆದರಿಂದ ಮನುಷ್ಯ ತನ್ನ ಜೀವನದಲ್ಲಿ ಪುಣ್ಯವನ್ನು ಸಂಪಾದಿಸುವ ಕೀರ್ತಿಯನ್ನು ಬಿಟ್ಟು ಮೋಕ್ಷವನ್ನು ತಂದಿಡುವ ಆತ್ಮಜ್ಞಾನವನ್ನು (ತತ್ತ್ವಜ್ಞಾನವನ್ನು) ತಿಳಿದುಕೊಳ್ಳುವುದಕ್ಕೆ ಅವಕಾಶ ಏರ್ಪಡುತ್ತದೆ.

# ಶರೀರ ಬಾಡಿಗೆ ಮನೆ

ಒಬ್ಬ ಮನುಷ್ಯನನ್ನು ವಿಭಜಿಸಿ ನೋಡಿದರೆ ಶರೀರ ಮತ್ತು ಜೀವಿಯು ಎಂದು ಹೇಳಬಹುದು. ಜೀವಿಯಿಲ್ಲದ ಶರೀರವನ್ನು "ಶವ" ಎನ್ನುತ್ತಿದ್ದೇವೆ. ಹಾಗೆಯೇ ಶರೀರವಿಲ್ಲದ ಜೀವಿಯನ್ನು "ದೆವ್ವ" ಎನ್ನುತ್ತೇವೆ. ಒಂದು ದೆವ್ವ, ಒಂದು ಶವ ಎರಡು ಬೆರೆತಿರುವಾಗ "ಮನುಷ್ಯ" ಎನ್ನುತ್ತೇವೆ. ವಿವರವಾಗಿ ಹೇಳಿಕೊಂಡರೆ ಒಬ್ಬ ಜೀವಿ ಒಂದು ಶರೀರದಲ್ಲಿ ನಿವಾಸಿಸುತ್ತಾ ಜೀವಿತಕಾಲವನ್ನು

ಕಳೆಯುತ್ತಿದ್ದಾನೆ. ಜೀವಿಗೆ ಶರೀರ ಗೃಹವಿದ್ದಂತೆ, ಶರೀರವೆಂಬ ಗೃಹದಲ್ಲಿ ಜೀವಿಯು ಸ್ವಲ್ಪಕಾಲ ವಾಸಿಸುತ್ತಿದ್ದಾನೆ. ಜೀವಿಯು ಶರೀರದಲ್ಲಿ ವಾಸಿಸಿದ ಒಟ್ಟು ಕಾಲವನ್ನು ಜೀವಿತಕಾಲ ಎನ್ನುತ್ತಿದ್ದೇವೆ. ಜೀವಿತಕಾಲವನ್ನು ಪೂರ್ವದಲ್ಲಿ "ಜೀತಕಾಲ" ಎನ್ನುತ್ತಿದ್ದರು. ಜೀತ ಎನ್ನುವ ಎರಡಕ್ಷರಗಳ ಮಧ್ಯದಲ್ಲಿ "ವಿ" ಎನ್ನುವ ಅಕ್ಷರ ಕಾಲಕ್ರಮದಲ್ಲಿ ಸೇರಿಹೋಗಿದೆ. ಆದ್ದರಿಂದ ಜೀತಕಾಲ ಎನ್ನುವುದು ಜೀವಿತಕಾಲ ಎನ್ನುವ ಪದವಾಗಿ ಬದಲಾಗಿಹೋಗಿದೆ. ಬದಲಾದ ಪದವನ್ನು ಬಿಟ್ಟು ನೋಡಿದರೆ ಶರೀರದಲ್ಲಿ ಜೀವನಿರುವ ಕಾಲವನ್ನು ಜೀತಕಾಲ ಎನ್ನುವುದರಲ್ಲಿ ಸ್ವಲ್ಪ ಅರ್ಥ ಒಳಗೊಂಡಿದೆ. ಒಂದು ಕೆಲಸಕ್ಕೆ ಪ್ರತಿಫಲಿತವಾಗಿ ಕೊಡುವುದನ್ನು ಜೀತ ಎನ್ನುತ್ತೇವೆ ಅಥವಾ ಬಾಡಿಗೆ ಎಂದು ಸಹ ಎನ್ನುತ್ತೇವೆ. ಜೀವಿಯು ತನ್ನ ಸ್ವಂತವಲ್ಲದ ಇತರರ ಮನೆಯಲ್ಲಿ ವಾಸಿಸುತ್ತಿದ್ದಾನೆ. ಆದ್ದರಿಂದ ಆ ಮನೆ ಯಜಮಾನನಿಗೆ ಬಾಡಿಗೆ ಕೊಡಬೇಕಾಗಿ ಬರುತ್ತಿದೆ. ಶರೀರವು ಜೀವಿಗೆ ಸ್ವಂತ ಮನೆಯಲ್ಲ ಎನ್ನುವ ವಿಷಯವನ್ನು ಪ್ರತಿ ಮನುಷ್ಯ ಜ್ಞಾಪಕ ಇಟ್ಟುಕೊಳ್ಳಬೇಕು. ಶರೀರ ಜೀವಾತ್ಮದು ಅಲ್ಲದಿದ್ದರೆ ಮತ್ತೆ ಯಾರದೆಂಬ ಪ್ರಶ್ನೆಸಹ ತಕ್ಷಣ ಬರುತ್ತದೆ. ಅದಕ್ಕೆ ಉತ್ತರ ಏನೆಂದರೆ!.

ಕೆಲವು ನಗರಗಳಲ್ಲಿ ಕೆಲವರು ಯಜಮಾನರು ತಮ್ಮ ಸ್ವಂತ ಮನೆಯನ್ನು ಪೂರ್ತಿ ತಾವೇ ಬಳಸಿಕೊಳ್ಳದೆ, ಮನೆಯಲ್ಲಿ ಸ್ವಲ್ಪಭಾಗವನ್ನೋ ಇಲ್ಲವೆ ಒಂದು ಕೊಠಡಿಯನ್ನು ಇತರರಿಗೆ ಬಾಡಿಗೆಗೆ ಕೊಡುತ್ತಿದ್ದಾರೆ. ಉದಾಹರಣೆಗೆ ಒಂದು ಮನೆ ಯಜಮಾನ ತನ್ನ ಮನೆಯಲ್ಲಿನ ಒಂದು ಕೋಣೆಯನ್ನು ಮತ್ತೊಬ್ಬನಿಗೆ ಕೊಟ್ಟಿದ್ದಾನೆಂದುಕೊಳ್ಳಿ. ಆಗ ಬಾಡಿಗೆಗಿರುವವನಿಗೆ ನೀರಿನೊಂದಿಗೆ ಸಹ ಎಲ್ಲಾ ಸೌಕರ್ಯಗಳು ಕೊಟ್ಟು ಅದಕ್ಕೆ ಪ್ರತಿಫಲವಾಗಿ ಬಾಡಿಗೆ ಅವನಿಂದ ತೆಗೆದುಕೊಳ್ಳುತ್ತಾನೆ, ಇದು ಎಲ್ಲರಿಗೂ ತಿಳಿದ ವಿಷಯವೆ. ಇನ್ನು ತಿಳಿಯದ ಮುಖ್ಯವಾದ ವಿಷಯವೇನೆಂದರೆ! ವಿಶಾಲವಾದ ಮನೆಯಲ್ಲಿ ಆ ಮನೆ ಯಜಮಾನನಿಗೆ ಬಾಡಿಗೆ ಕೊಡುತ್ತಾ, ಒಂದು ಕೋಣೆಯಲ್ಲಿ ಸಂಸಾರವಿರುವ ಬಾಡಿಗೆದಾರನಂತೆ ಜೀವಿಯು ಶರೀರವೆಂಬ ಮನೆಯಲ್ಲಿ ವಾಸಿಸುತ್ತಿದ್ದಾನೆ.

ಶರೀರವೆಂಬ ಮನೆಗೆಲ್ಲಾ ಆತ್ಮ ಅನ್ನುವ ಯಜಮಾನನಾ (ಅಧಿಪತಿಯಾ) ಗಿದ್ದು, ಶರೀರವೆಂಬ ಮನೆಯಲ್ಲಿ ಸ್ವಲ್ಪಭಾಗದಲ್ಲಿ ಜೀವಾತ್ಮ ವಾಸಿಸುತ್ತಿದ್ದಾನೆ. ಜೀವಿಯು ತನ್ನ ಮನೆಯಲ್ಲಿ ವಾಸಿಸುವುದಕ್ಕೆ ಬೇಕಾದ ಸೌಕರ್ಯಗಳನ್ನೆಲ್ಲ ಆತ್ಮ ಎಂಬ ಯಜಮಾನ ಕಲ್ಪಿಸುತ್ತಿದ್ದಾನೆ. ಅದಕ್ಕೆ ಪ್ರತಿಫಲವಾಗಿ ಜೀವಾತ್ಮವೆಂಬ ಬಾಡಿಗೆದಾರನು ಆತ್ಮವೆಂಬ ಶರೀರಗೃಹ ಯಜಮಾನನಿಗೆ ಆಹಾರ ಎಂಬುವ ಬಾಡಿಗೆ ಸಲ್ಲಿಸಬೇಕಾಗಿರುತ್ತದೆ. ಜೀವಿಯು ಸಲ್ಲಿಸಿದ ಆಹಾರವೆಂಬ ಬಾಡಿಗೆಯನ್ನು ಆತ್ಮ ತನ್ನ ಜೀವನಕ್ಕೋಸ್ಕರ ಉಪಯೋಗಿಸಿಕೊಳ್ಳುತ್ತಾನೆ. ಹೊರಗಿನ ಗೃಹ ಯಜಮಾನರು ತಿಂಗಳಿಗೊಂದುಸಲ ಹಣದರೂಪದಲ್ಲಿ ಬಾಡಿಗೆಯನ್ನು ತೆಗೆದುಕೊಳ್ಳುತ್ತಾರೆ. ಒಳಗೆ ಶರೀರಗೃಹ ಯಜಮಾನ ಹೊತ್ತಿಗೊಂದುಸಲ ಆಹಾರರೂಪದಲ್ಲಿ ಬಾಡಿಗೆ ತೆಗೆದುಕೊಳ್ಳುತ್ತಿದ್ದಾನೆ. ಹೊರಗಿನ ಗೃಹ ಯಜಮಾನ ತಿಂಗಳಿಗೊಂದುಸಲ ಕೇಳಿ ತನ್ನ ಬಾಡಿಗೆಯನ್ನು ತೆಗೆದುಕೊಂಡರೆ, ಒಳಗಿನ ಯಜಮಾನ ಹೊತ್ತಿಗೊಂದು ಸಲ ಹಸಿವನ್ನು ಉಂಟುಮಾಡಿ ತನ್ನ ಬಾಡಿಗೆಯನ್ನು ತೆಗೆದುಕೊಳ್ಳುತ್ತಾನೆ. ಆತ್ಮವೆಂಬ ಯಜಮಾನನಿಗೆ ಆಹಾರವೆಂಬ ಬಾಡಿಗೆ ಕಟ್ಟುವುದಕ್ಕೆ ಮನುಷ್ಯ ಎಷ್ಟೋ ಕೆಲಸಗಳು ಮಾಡಬೇಕಾಗಿ ಬರುತ್ತಿದೆ, ಆ ಕೆಲಸಗಳು ಮಾಡುವುದಕ್ಕೆ ಎಷ್ಟೋ ವಿದ್ಯೆಗಳನ್ನು ಕಲಿಯಬೇಕಾಗಿ ಬರುತ್ತದೆ. ಆದ್ದರಿಂದ **ಕೂಳಿಗೋಸ್ಕರ ಕೋಟಿ ವಿದ್ಯೆಗಳೆಂದು** ಹಿರಿಯರು ಹೇಳಿದ್ದಾರೆ. ಕೋಟಿ ವಿದ್ಯೆಗಳು ಅಲ್ಲದಿದ್ದರು ಕೆಲವು ವಿದ್ಯೆಗಳನ್ನಾದರು ಕಲಿಯಬೇಕಾಗಿ ಬರುತ್ತಿದೆ. ಈಗಿನ ಕಾಲದಲ್ಲಿ ಮಾನವನ ಅರ್ಧ ಆಯಸ್ಸು 60 ವರ್ಷಗಳಾದರೆ ಕೂಳಿಗೋಸ್ಕರ ಕಲಿಯಬೇಕಾದ ಓದುಗಳು ಸುಮಾರು 30 ವರ್ಷಗಳು ಹಿಡಿಯುತ್ತಿವೆ.

ಈಗಿನ ಕಾಲದಲ್ಲಿನ ಮನುಷ್ಯ ನಾವು ವಿಜ್ಞಾನಕ್ಕೋಸ್ಕರ ಓದುತ್ತಿದ್ದೇವೆ ಅಂದರೂ, ಕೊನೆಗೆ ಆ ವಿಜ್ಞಾನ ಸಹ ಮನುಷ್ಯ ಬದುಕುವುದಕ್ಕೆ, ಆಹಾರ ಸಮುಪಾರ್ಜನೆಗೇ ಎಂದು ಮರೆಯಬಾರದು. ಎಷ್ಟು ವಿದ್ಯೆಗಳು ಕಲಿತರೂ, ಯಾವ ಡಿಗ್ರಿಗಳು (ಸರ್ಟಿಫಿಕೆಟ್) ಸಾಧಿಸಿದರೂ, ಆ ವಿದ್ಯೆಗಳೆಲ್ಲಾ ಹೊರಗಿನ

ದೃಷ್ಟಿಯನ್ನು ಕಲ್ಪಿಸುವವಾಗಿಯೇ ಇವೆ. ನಾನೊಬ್ಬರ ಆಧೀನದಲ್ಲಿ ಬಾಡಿಗೆಗೆ ಇದ್ದೀನೆಂಬುದಾಗಲಿ, ನನಗೊಬ್ಬ ಯಜಮಾನ ಇದ್ದಾನೆಂಬುದಾಗಲಿ, ಆತನ ಇಷ್ಟಾಯಿಷ್ಟದ ಮೇಲೆಯೇ ನಾನು ಬದುಕುತ್ತಿದ್ದೇನೆಂದಾಗಲಿ, ಬದುಕುವುದು ಎಂದರೆ ಶರೀರದಲ್ಲಿ ವಾಸಿಸುವುದೇ ಎಂದಾಗಲಿ ಯಾವ ವಿಜ್ಞಾನವೂ, ಯಾವ ವಿದ್ಯೆ ಮನುಷ್ಯನಿಗೆ ತಿಳಿಸಲಾರದೆ ಹೋಗಿದೆ. ಶರೀರಯಜಮಾನನಾದ ಆತ್ಮದ ವಿವರವನ್ನು ತಿಳಿಸುವುದೇ ಬ್ರಹ್ಮವಿದ್ಯೆ. ಬ್ರಹ್ಮ ಎಂದರೆ ದೊಡ್ಡವನೆಂದು ಅರ್ಥ. ನಿನಗೆ ಒಬ್ಬ ದೊಡ್ಡವನು ಇದ್ದಾನೆಂದು, ಆ ದೊಡ್ಡವನೆ ನಿನ್ನ ಶರೀರದಲ್ಲಿನ ಆತ್ಮ ಎಂದು ತಿಳಿಸುವ ವಿದ್ಯೆಯೇ ಬ್ರಹ್ಮವಿದ್ಯೆ. ಪ್ರಪಂಚ ಜ್ಞಾನವನ್ನು ತಿಳಿಸುವ ವಿದ್ಯೆಗಳು ಎಷ್ಟೋ ವಿಭಾಗಗಳಾಗಿ ಡಾಕ್ಟರ್‌ಗಳೆಂದು, ಇಂಜನೀಯರ್‌ಗಳೆಂದು, ಲಾಯರ್‌ಗಳೆಂದು ಇನ್ನು ಬೇರೆ ಬೇರೆ ಎಷ್ಟೋ ಇವೆ. ಹೊರಗೆ ಯಾವ ಸೈನ್ಸ್‌ನ್ನು ಓದಿದರು ಅದು ಭೌತಿಕ ಶರೀರಕ್ಕೆ ಉಪಯೋಗಪಡುವುದೇ ಆಗಲಿ, ಭೌತಿಕಶರೀರಕ್ಕೆ ಅಧಿಪತಿಯಾದ ಆತ್ಮವನ್ನು ತಿಳಿಸುವುದು ಅಲ್ಲ.

ಈಗೊಂದು ಕಥೆಯನ್ನು ಹೇಳಿಕೊಳ್ಳೋಣ! ಭೂಪತಿ ಅನ್ನುವ ಹೆಸರಿರುವ ವ್ಯಕ್ತಿ ಒಂದು ದೊಡ್ಡ ಮನೆಯಲ್ಲಿನ, ಒಂದು ಕೋಣೆಯಲ್ಲಿ ಮಾತ್ರ ಬಾಡಿಗೆಗಿದ್ದಾನೆ, ಆ ಮನೆ ಯಜಮಾನನ ಹೆಸರು ಪತಿ. ಪತಿ ಮನೆ ದೊಡ್ಡದಾಗಿರುವುದರಿಂದ ಪತಿ ತನ್ನ ಮನೆಯಲ್ಲಿ ಮುಂದಿನ ಕೋಣೆಯನ್ನು ಭೂಪತಿಗೆ ಬಾಡಿಗೆಗೆ ಕೊಟ್ಟು ತಾನು ಮಾತ್ರ ಹಿಂದಿರುವ ಉಳಿದ ಕೋಣೆಗಳಲ್ಲಿ ಇರುತ್ತಿದ್ದನು. ಪತಿಗೆ ಕೆಲಸಮಾಡುವವರು ಎರಡು ಡಜನ್ ಜನ ಇರುತ್ತಿದ್ದರು. ಪತಿ ಅಷ್ಟು ಜನರಿಂದ ಕೆಲಸ ಮಾಡಿಸಿಕೊಳ್ಳುತ್ತಿದ್ದರೂ, ಅಷ್ಟು ಜನರಿಗೆ ಯಜಮಾನನಾದರೂ, ತಾನು ಸ್ವಲ್ಪವೂ ಗರ್ವಪಡುವವನು ಅಲ್ಲ, ತಾನು ಉತ್ತಮನೆಂದು ಹೇಳಿಕೊಳ್ಳುವವನೂ ಅಲ್ಲ. ತನ್ನ ಮನೆ ಕೆಲಸವನ್ನೆಲ್ಲವೂ ತನ್ನ ಮನುಷ್ಯರಿಗೆ ಒಪ್ಪಿಸಿ ತಾನು ಎಲ್ಲರನ್ನು ಗಮನಿಸುತ್ತಾ ಇರುತ್ತಿದ್ದನು. ಹೊರಗೆ ವ್ಯವಹಾರವೆಲ್ಲವೂ ತನ್ನ ಮನುಷ್ಯರೇ ನೋಡಿಕೊಳ್ಳುತ್ತಿದ್ದರು. ಮನೆಮುಂದಿನ ಭಾಗದಲ್ಲಿಯೇ ಇರುವ ಭೂಪತಿ ಆ ಮನೆಗೆ ಬಂದುಹೋಗುವವರೆಲ್ಲರನ್ನು

ನೋಡುತ್ತಾ ಇದ್ದನು. ತಾನು ಮುಂದಿನಕೋಣೆಯಲ್ಲಿಯೇ ಇದ್ದಾನಾದ್ದರಿಂದ ಹೊರಗಿನಿಂದ ಬರುವ ಎಲ್ಲರನ್ನು ನೋಡುತ್ತಿದ್ದನು, ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದನು. ಪತಿಯ ಕೆಲಸದವರು 24 ಮಂದಿ ಭೂಪತಿಗೆ ಚೆನ್ನಾಗಿ ಪರಿಚಯ ಇರುವುದರಿಂದ ಎಲ್ಲಾ ವಿಷಯಗಳು ಭೂಪತಿಗೆ ಸುಲಭವಾಗಿ ತಿಳಿಯುತ್ತಿದ್ದವು. ಪತಿ ಮನುಷ್ಯರೆಲ್ಲರೂ ಭೂಪತಿಗೆ ಅನುಕೂಲವಾಗಿರುವುದರಿಂದ ಭೂಪತಿ ಅವರೆಲ್ಲರನ್ನು ತನ್ನ ಮನುಷ್ಯರನ್ನಾಗಿ ಲೆಕ್ಕಿಸಿ ತಾನೆ ಅವರಿಗೆ ಯಜಮಾನನೆಂಬ ಭಾವನೆ ಹೊಂದಿದ್ದನು. ವಿವರವಾಗಿ ಹೇಳಿಕೊಂಡರೆ 24 ಮಂದಿಯನ್ನು ಕೆಲಸದಲ್ಲಿ ಇಟ್ಟುಕೊಂಡಿರುವುದು ಪತಿಯೇ ಆದರೂ 24 ಜನರಲ್ಲಿ ಸ್ವಲ್ಪಜನ ಪತಿಗೆ ವಿರುದ್ಧವಾಗಿದ್ದು ಭೂಪತಿಗೆ ಅನುಕೂಲವಾಗಿದ್ದರು. ತುಸ್ಸು ತಸ್ಸು ಎನ್ನುವ ಇಬ್ಬರು ಕೆಲಸದವರು ಪತಿಗೆ ವಿರುದ್ದವಾಗಿ ಕಾಣಿಸುತ್ತಿದ್ದರು. ತುಸ್ಸು ಎನ್ನುವವನು ಪ್ರತಿ ವಿಷಯವನ್ನು ಭೂಪತಿಗೆ ಹೇಳುತ್ತಾ ಭೂಪತಿ ಮನುಷ್ಯನಂತೆ ಪ್ರವರ್ತಿಸುತ್ತಿದ್ದನು. ಇನ್ನು ತಸ್ಸು ಎನ್ನುವವನು ಪತಿಗೆ ಪೂರ್ತಿ ವಿರುದ್ಧವಾಗಿ ತನಗೆ ಯಜಮಾನ ಭೂಪತಿಯೇ ಎಂದು ಭೂಪತಿಯೇ ಇಲ್ಲಿನ ಕೆಲಸಗಳಿಗೆಲ್ಲ ಮತ್ತು ಇಲ್ಲಿನ ಮನೆಗೆಲ್ಲ ದೊಡ್ಡವನೆಂದು ಹೇಳುತ್ತಿದ್ದನು. ತುಸ್ಸು ತಸ್ಸುಗಳಿಂದ ತಾನು ಬೇರೆಯವರ ಮನೆಯಲ್ಲಿ ಇದ್ದೇನೆಂಬ ವಿಚಕ್ಷಣ ಸಹ ಇಲ್ಲದವನಾಗಿ ಭೂಪತಿ ತಸ್ಸು ಮಾತುಗಳಿಂದ ತಾನು ಉಬ್ಬಿಹೋಗುತ್ತಿದ್ದನು. ಮನೆಯಲ್ಲಿನ ಕೆಲಸದವರು ಅನೇಕ ವಿಧಗಳ ಕೆಲಸಗಳು ಮಾಡುತ್ತಿದ್ದರು. ಕೆಲವರು ಚಿಕ್ಕ ಚಿಕ್ಕ ಕೆಲಸಗಳಿಗೆ ಮಾತ್ರವೇ ಪರಿಮಿತವಾದರೆ ಕೆಲವರು ಮುಖ್ಯವಾದ ಕೆಲಸಗಳು ನೋಡಿಕೊಳ್ಳುತ್ತಿದ್ದರು. ಮನೆಯಲ್ಲಿ ಅತಿ ಮುಖ್ಯವಾದ ಕೆಲಸಗಳು ನೋಡಿಕೊಳ್ಳುವವರು ನಾಲ್ವರು ಮಾತ್ರವೇ. ಆ ನಾಲ್ವರಲ್ಲಿ ಇಬ್ಬರು ತುಸ್ಸು, ತಸ್ಸು ಆಗಿದ್ದು ಮತ್ತೆ ಇಬ್ಬರು ಸದ್ಧಿ. ಗಿದ್ಧಿ. ಮುಖ್ಯವಾದ ಆ ನಾಲ್ವರಲ್ಲಿ ತುಸ್ಸು, ತಸ್ಸು ಇಬ್ಬರು ಒಂದು ಗುಂಪಾಗಿ ಸದ್ಧಿ, ಗಿದ್ಧಿ ಇಬ್ಬರು ಒಂದು ಗುಂಪಾಗಿದ್ದಾರೆ. ಮುಖ್ಯವಾದ ಈ ನಾಲ್ವರು ಭೂಪತಿಗೆ ಅನುಕೂಲವಾದವರು, ಪತಿಗೆ ವಿರೋಧಿಗಳೆಂದು ಹೇಳಿದರೂ, ನೂರಕ್ಕೆ ನೂರಷ್ಟು ತುಸ್ಸು ತಸ್ಸು

ಪತಿಗೆ ವಿರೋಧಿಗಳಾಗಿ ಇದ್ದಾರೆ. ಇನ್ನು ಉಳಿದ ಇಬ್ಬರಾದ ಸದ್ಧಿ, ಗಿದ್ಧಿ ಕಾಣಿಸಿ ಕಾಣಿಸದಂತೆ ಇರುತ್ತಾರೆ. ಭೂಪತಿಯೊಂದಿಗೆ ನನ್ನ ಸಲಹೆ ಇಲ್ಲದೆ ಏನು ನಡೆಯುವುದಿಲ್ಲವೆಂದು ಸದ್ಧಿ, ಹೇಳಿದರೂ ನಾನು ಒಪ್ಪಿಕೊಳ್ಳದ್ದು ಏನು ನಡೆಯುವುದಿಲ್ಲವೆಂದು ಗಿದ್ಧಿ ಎನ್ನುತ್ತಾ ತಾವು ಭೂಪತಿಗೋಸ್ಕರ ಮನೆಯಲ್ಲಿ ಕೆಲಸ ಮಾಡುತ್ತಿದ್ದೇವೆ ಆಗಲಿ ಪತಿಗೋಸ್ಕರ ಅಲ್ಲವೆನ್ನುತ್ತಿದ್ದಾರೆ.

ಭೂಪತಿ, ಪತಿಯ ಮನೆಯಲ್ಲಿ ಬಾಡಿಗೆಗಿದ್ದು ತಿಂಗಳು ತಿಂಗಳು ಬಾಡಿಗೆ ಕಟ್ಟುತ್ತಿದ್ದರೂ ನಾನು ಯಾರಿಗೂ ಬಾಡಿಗೆ ಕಟ್ಟಲಿಲ್ಲ. ಈ ಮನೆ ನನ್ನದೆ ಎನ್ನುತ್ತಿದ್ದಾನೆ. ಅಷ್ಟೇ ಅಲ್ಲ ಮನೆಯಲ್ಲಿನ ಕೆಲಸದವರೆಲ್ಲಾ ನನ್ನವರೇ ಎನ್ನುತ್ತಿದ್ದಾನೆ. ಇವನು ನನ್ನ ತುಸ್ಸು, ಇವನು ನನ್ನ ಗಿದ್ಧಿ ಎಂದು ಹೇಳಿ ಕೊಳ್ಳುತ್ತಿದ್ದಾನೆ. ಈ ವಿಷಯವೆಲ್ಲ ಪತಿಗೆ ತಿಳಿದಿದೆ ಆದರೂ ಪತಿ ಭೂಪತಿಯನ್ನು ಏನು ಅನ್ನಲಿಲ್ಲ. ತನ್ನ ಮನೆಯಲ್ಲಿ ಬಾಡಿಗೆಗಿರುವ ಒಬ್ಬ ಬಚ್ಚಾ ತಾನೇ ಯಜಮಾನನೆಂದು ಹೇಳಿಕೊಂಡರು ಪತಿ ಮೌನವಾಗಿ ಇರುವುದಕ್ಕೆ ಕಾರಣ ಸ್ವಲ್ಪ ಇದೆ. ಅದು ಏನೆಂದರೆ! ಮನೆ ತನ್ನದೆ ಆದರೂ ಅದು ಇನ್ನೊಬ್ಬರ ಹತ್ತಿರ ಅಡವಿದೆ. ಮನೆ ತನ್ನ ಹೆಸರಿನ ಮೇಲಿರುವಂತಿರುವ ಪತ್ರಗಳೆಲ್ಲ ಆ ಅಡವು ಇಟ್ಟುಕೊಂಡವನ ಹತ್ತಿರವೇ ಇವೆ. ಭೂಪತಿ ಏನೆಂದರೂ! ಅವನ ಮಾತುಗಳು ನಡೆಯುವುದಿಲ್ಲ. ಬರಹದ ರೂಪದಲ್ಲಿರುವುದು ಪತಿ ಹೆಸರಿನಲ್ಲಿಯೇ. ಪತಿಯದೇ ಮನೆ ಎನ್ನುವುದಕ್ಕೆ ಸಾಕ್ಷ್ಯವಾಗಿ ಪರಪತಿ ಎನ್ನುವ ಮೂರನೆ ವ್ಯಕ್ತಿ ಹತ್ತಿರ ಮನೆ ಅಡವಿದೆ. ಮನೆ ಪತಿಯದೇ ಆದರೂ ಅಡವಿರುವುದರಿಂದ, ಮನೆ ರಿಕಾರ್ಡೆಲ್ಲವೂ ಪರಪತಿ ಹತ್ತಿರ ಇರುವುದರಿಂದ, ಪ್ರಸ್ತುತಕ್ಕೆ ಯಜಮಾನ ಪರಪತಿಯೇ ಎಂದು, ಮನೆಯೆಲ್ಲವೂ ಆತನ ಅಧೀನದಲ್ಲಿನದೇ ಎಂದು ಹೇಳಬಹುದು. ಆದ್ದರಿಂದ ಭೂಪತಿ ಮನೆ ನನ್ನದೇ ಎಂದು ಅಂದುಕೊಂಡರು ಪತಿಗೆ ಏನು ಬಾಧೆಯಿಲ್ಲ. ಪರಪತಿ ಹತ್ತಿರ ಬಾಕೀ ತೀರುವವರೆಗು, ಅಡವಿರುವುದು ರದ್ದಾಗುವವರೆಗೂ, ಪತಿಗೆ ಭೂಪತಿಗೆ ಇಬ್ಬರಿಗೂ ಯಜಮಾನ ಪರಪತಿಯೇ ಎಂದು ಹೇಳಬಹುದು. ಪತಿ ಬಾಕಿ ಪರಪತಿಹತ್ತಿರ ತೀರಬೇಕೆಂದರೆ ಭೂಪತಿ

ತಾನುಕಟ್ಟುವ ಬಾಡಿಗೆಯನ್ನು ನೇರವಾಗಿ ಪರಪತಿಗೇ ಕಟ್ಟಬೇಕಾಗಿರುತ್ತದೆ. ಪರಪತಿಯ ಹೆಸರಿನ ಮೇಲೆ ಕಟ್ಟಿದರೆ ಅದನ್ನು ತನ್ನ ಬಾಕಿಯೊಳಗೆ ಜಮಹಾಕಿಕೊಳ್ಳುತ್ತಾ ಹೋಗಿ ಕೊನೆಗೆ ತೀರಿಹೋದ ದಿನ ತನ್ನ ಬಾಕಿಯನ್ನು ರದ್ದುಮಾಡಿಕೊಂಡು ಬಾಕಿಯಿಂದ ಪತಿಯನ್ನು ಬಿಡುಗಡೆಯಾಗುವಂತೆ ಮಾಡುತ್ತದೆ. ಭೂಪತಿ ಬಾಕಿ ಕಟ್ಟುವುದೇನು? ಪತಿ ಬಾಕಿಯಿಂದ ಬಿಡುಗಡೆ ಪಡೆಯುವುದೇನು? ಎಂದು ಪ್ರಶ್ನಿಸಿಕೊಂಡರೆ ಅದಕ್ಕೆ ಸಮಾಧಾನ ಈ ವಿಧವಾಗಿದೆ. **ವಾಸ್ತವವಾಗಿ ಭೂಪತಿಯೇ ಪರಪತಿಗೆ ಬಾಕೀದಾರನು**. ಆದರೆ ಭೂಪತಿಯಿಂದ ನಾನು ನಿನ್ನ ಬಾಕಿ ಕಟ್ಟಿಸುತ್ತೇನೆಂದು ಮಧ್ಯದಲ್ಲಿ ಪತಿ ಎನ್ನುವವನು ಸಾಕ್ಷಿಯಾಗಿದ್ದಾನೆ. ಆದ್ದರಿಂದ ಭೂಪತಿ ಎನ್ನುವವನು ಎಷ್ಟು ಕೆಲಸಕ್ಕೆ ಬಾರದವನಾದರು ಸಹಿಸಿಕೊಂಡು ತನ್ನ ಮನೆಯಲ್ಲಿ ಮುಂದಿನಕೋಣೆ ಯಲ್ಲಿಯೇ ಇಟ್ಟುಕೊಂಡಿದ್ದಾನೆ.

ಭೂಪತಿ ಎನ್ನುವವನು ಪರಪತಿ ಹತ್ತಿರ ಸಾಲಮಾಡಿ, ಪತಿಯನ್ನು ಸಾಕ್ಷಿಗಿಟ್ಟು ಮನೆ ಅಡಕ್ಕೆ ಇರಿಸಿ, ತಾನು ಎಲ್ಲಾ ಮರೆತುಹೋಗಿ, ನಾನು ಯಾರಿಗೂ ಬಾಕಿ ಇಲ್ಲವೆಂಬ ಭಾವದಿಂದ ಇರುವುದಲ್ಲದೆ, ತಾನಿರುವ ಮನೆಯೇ ನನ್ನದೆನ್ನುತ್ತಿದ್ದಾನೆ. ಭೂಪತಿ ಏನಂದುಕೊಂಡರು ಪತಿ, ಭೂಪತಿ ಇಬ್ಬರು ನನ್ನ ಹತ್ತಿರ ಸಿಲುಕಿಕೊಂಡಿದ್ದಾರೇಳು ಎಂದು ಪರಪತಿ ಅಂದುಕೊಳ್ಳುತ್ತಿದ್ದಾನೆ. ಭೂಪತಿಯನ್ನು ಬಾಕಿ ತೀರಿಸುವವರೆಗೂ ಬಿಡುವುದಿಲ್ಲವೆಂದು ಪತಿ ಅಂದುಕೊಳ್ಳುತ್ತಿದ್ದಾನೆ. ಭೂಪತಿ ತಾನು ಕಟ್ಟುವುದು ಪರಪತಿಗೆ ಅಂದುಕೊಂಡರೆ ಅದು ಪರಪತಿ ಬಾಕಿಯೊಳಗೆ ಜಮ ಆಗುತ್ತದೆ. ಹಾಗಲ್ಲದಂತೆ ತಾನು ಕಟ್ಟುವುದು ಪತಿಗೆ ಅಂದುಕೊಂಡರೆ ಪತಿ ಬಾಕಿಯೊಳಗೆ ಜಮ ಆಗುತ್ತದೆ. ಪತಿಗೆ ಕಟ್ಟಿದರೂ ಕೊನೆಗೆ ಅದನ್ನು ಪರಪತಿಗೇ ಸೇರುವಂತೆ ಪತಿ ಮಾಡುತ್ತಾನೆ. ಯಾವುದೋ ಒಂದು ವಿಧವಾಗಿ ಮನೆಗೆ ಬಾಡಿಗೆ ರೂಪದಲ್ಲಿಯಾದರೂ ಕಟ್ಟಿರುವುದನ್ನು ಬಾಕಿಕೆಳಗೆ ಜಮಹಾಕಿಕೊಂಡಂತೆ ಏರ್ಪಾಟು ಇದ್ದರೂ ಭೂಪತಿ ತಾನು ಯಾರಿಗೂ ಬಾಡಿಗೆ ಕಟ್ಟುವುದಿಲ್ಲವೆಂದು, ಮನೆ ತನ್ನದೇ ಎಂದು, ಆಹಾರ

ರೂಪದಲ್ಲಿ ಕಟ್ಟುವುದು ತನ್ನ ಪೋಷಣೆ ನಿಮಿತ್ತವೇ ಎಂದು, ಮತ್ತೆ ಯಾರಿಗೋಸ್ಕರ ಅಲ್ಲವೆಂದು, ಪತಿ, ಪರಪತಿ ಅನ್ನುವವರು ಯಾರೋ ನನಗೆ ತಿಳಿದಿಲ್ಲವೆಂದು ಅಂದುಕೊಳ್ಳುವುದರಿಂದ ಭೂಪತಿ ಬಾಕಿ ಸ್ವಲ್ಪವೂ ತೀರದಂತೆ ಹೋಗಿದೆ.

ಭೂಪತಿ ಪರಮ ಮೂರ್ಖನೆಂದು ಗ್ರಹಿಸಿದ ಪರಪತಿ ಬಾಕೀ ವಿಷಯದಲ್ಲಿ ಸ್ವಲ್ಪ ರಿಯಾಯಿತಿ ಸಹ ಪ್ರಕಟಿಸಿದ್ದಾನೆ. ಆ ರಿಯಾಯಿತಿ ಏನೆಂದರೆ! ಭೂಪತಿ ಕಟ್ಟುವುದು ಏನಾದರು ಪತಿ ಹೆಸರಿನ ಮೇಲೆ ಕಟ್ಟಿದರೆ ಎಷ್ಟು ಕಟ್ಟಿದ್ದರೆ ಅಷ್ಟು ಬಾಕಿ ತೀರುತ್ತದೆ. ಹಾಗಲ್ಲದೆ ನೇರವಾಗಿ ಪರಪತಿಯ ಹೆಸರಿನ ಮೇಲೆ ಕಟ್ಟಿದರೆ ಎಷ್ಟು ಕಟ್ಟಿದ್ದರೆ ಅಷ್ಟಕ್ಕೆ ಸಾವಿರಷ್ಟು ಹೆಚ್ಚಾಗಿ ಕಟ್ಟಿದಂತೆ ಲೆಕ್ಕಿಸಲ್ಪಡುತ್ತದೆ. ಹಾಗೆ ಏಕೆಂದರೆ! ಪರಪತಿ ತನ್ನ ಹೆಂಡತಿ ಮುಖಾಂತರ ಭೂಪತಿಗೆ ಬಾಕಿ ಕೊಟ್ಟಿದ್ದಾನೆ. ಪತಿ ಸಹ ಭೂಪತಿಯ ಬಾಕಿ ವಿಷಯದಲ್ಲಿ ಪರಪತಿ ಹೆಂಡತಿ ಹತ್ತಿರವೇ ಜಾಮೀನಾಗಿದ್ದಾನೆ. ಆದ್ದರಿಂದ ಹೆಂಡತಿಯಾದ ಸಕೃತಿದೇವಿ ಎಷ್ಟು ಜಮ ಕೊಟ್ಟರೆ ಅಷ್ಟೇ ಜಮ ಹಾಕಿಕೊಳ್ಳುತ್ತಿದ್ದಾಳೆ. ತನ್ನ ಪತ್ನಿ ಸಕೃತಿದೇವಿ ಖಚಿತವಾದ ಲೆಕ್ಕಚಾರದವಳು ಆದ್ದರಿಂದ ಈ ಬಾಕಿ ಅಷ್ಟು ಸುಲಭವಾಗಿ ತೀರುವುದು ಅಲ್ಲವೆಂದು ಪರಪತಿಯೇ ಭೂಪತಿಯ ಬಗ್ಗೆ ಒಳ್ಳೆಯದು ಮಾಡಬೇಕೆಂದು ಸಕೃತಿದೇವಿಗು ಸಹ ಅಧಿಪತಿಯಾದ ಪರಪತಿ ತನ್ನ ಇಷ್ಟಬಂದಂತೆ ರಿಯಾಯಿತಿ ಪ್ರಕಟಿಸಿದ್ದಾನೆ. ನೇರವಾಗಿ ತನಗೆ ಕಟ್ಟುವ ಬಾಕಿ ವಿಷಯದಲ್ಲಿ ಎಷ್ಟು ಕೊಟ್ಟರೆ ಅಷ್ಟು ಜಮ ಅನ್ನುವ ನಿಯಮಗಳು ಇರುವುದಿಲ್ಲ ಅಂದಿದ್ದಾನೆ. ನನಗೆ ಇಷ್ಟವಾದರೆ ನಿನ್ನ ಬಾಕಿ ಎಲ್ಲವನ್ನು ಒಂದೇದಿನ ಜಮ ಹಾಕಿಕೊಳ್ಳುತ್ತೇನೆಂದಿದ್ದಾನೆ. ಈ ಪದ್ಧತಿ ಪ್ರಕಾರವಾದರೆ ಭೂಪತಿ ಬಾಕಿ ಬೇಗನೆ ತೀರಿಹೋಗುತ್ತದೆ ಬಾಕೀಯಿಂದ ಹೊರಬೀಳುತ್ತಾನೆ. ಆದರೂ ಇಷ್ಟು ರಿಯಾಯಿತಿಯನ್ನು ಪರಪತಿ ಪ್ರಕಟಿಸಿದರೂ ಪತಿ ಯಾರು? ಪರಪತಿ ಯಾರು? ನಾನು ಭೂಪತಿ ಎಂದು, ನಾನು ಯಾರ ಅಧೀನದಲ್ಲಿಲ್ಲ, ನಾನು ಸ್ವತಂತ್ರನು, ನನ್ನ ಇಷ್ಟಬಂದಂತೆ ಮಾಡಿಕೊಳ್ಳುತ್ತೇನೆ ಎಂದು ಅಂದುಕೊಳ್ಳುತ್ತಿದ್ದಾನೆ. ಆದ್ದರಿಂದ

ಭೂಪತಿಯ ಬಾಕಿಯಲ್ಲಿ ಸಾಧಾರಣ ಜಮವಾಗಲಿ, ರಿಯಾಯಿತಿ ಜಮವಾಗಲಿ ಬೀಳುತ್ತಿಲ್ಲ. ಸ್ವಲ್ಪವೂ ಲೆಕ್ಕಾ ಜಮವಿಲ್ಲದ ಭೂಪತಿ ಸ್ಥಿರಸ್ಥಾಯಿಯಾಗಿ ಭೂಮಿಮೇಲೆ ಬಾಡಿಗೆ ಮನೆಯಲ್ಲಿಯೇ ವಾಸಿಸುತ್ತಲೇ ಇದ್ದಾನೆ. ಬಾಕಿ ಇದ್ದು ಬಾಕಿ ಮರೆತುಹೋಗುವುದು ಅನ್ಯಾಯ ತಾನೆ? ತನಗೋಸ್ಕರ ಜಾಮೀನಿರುವನನ್ನು ಯಾವ ಕಾರಣಕ್ಕೂ ಲೆಕ್ಕಮಾಡದಂತೆ ಯಾರೋ ಅವನೆಂಬುವುದು ಮತ್ತಷ್ಟು ಅನ್ಯಾಯವಲ್ಲವೆ? ಸಾಧಾರಣವಾಗಿ ಆದರೆ ಬಾಕಿ ಬೇಗನೆ ತೀರುವುದಿಲ್ಲವೆಂದು ರೂಪಾಯಿಗೆ ಸಾವಿರರೂಪಾಯಿಗಳ ಜಮ ಎಂದು ಪ್ರಕಟಿಸಿದವನನ್ನು ಮರೆತು ಪ್ರವರ್ತಿಸುವುದು ಮತ್ತಷ್ಟು ದೊಡ್ಡ ಅನ್ಯಾಯವಲ್ಲವೆ! ಬಡ್ಡಿ ಇಲ್ಲದಂತೆ ಜಮ ಹಾಕಿಕೊಳ್ಳುತ್ತೇನೆಂದು ಹೇಳಿದ ಪತಿ ಬಳಿಯಾಗಲಿ, ಸಾವಿರಪಟ್ಟು ಜಮ ಹಾಕಿಕೊಳ್ಳುತ್ತೇನೆಂದು ಹೇಳಿದ ಪರಪತಿ ಬಳಿಯಾಗಲಿ, ಸ್ವಲ್ಪವೂ ವಿನಯ ವಿಧೇಯತೆಯನ್ನು ತೋರಿಸದಿರುವ ಭೂಪತಿಯನ್ನು ಏನನ್ನಬೇಕೋ ನೀವೆ ಹೇಳಿರಿ. ನೀಚನು, ನಿಕೃಷ್ಟನು, ದುಷ್ಟನು, ದುರ್ಮಾರ್ಗನು ಎಂದು ಏನೆಂದರೂ ಕಡಿಮೆಯೇ ಎಂದು ಅನಿಸುತ್ತದಲ್ಲವೆ!

ಈ ಕಥೆಯಲ್ಲಿನ ಭೂಪತಿಯನ್ನು ಯಾರೂ ಒಪ್ಪಿಕೊಳ್ಳುವುದಿಲ್ಲ ಅಂದುಕೊಳ್ಳುತ್ತೇನೆ. ಎಷ್ಟೋ ಸಹನೆಯಿಂದಿರುವ ಪತಿಯನ್ನಾಗಲಿ ಬಾಕಿ ತೀರಿಸುವುದಕ್ಕೆ ರಿಯಾಯಿತಿ ಹೆಸರಿನಿಂದ ಎಷ್ಟೋ ಅವಕಾಶ ಕಲ್ಪಿಸಿದ ಪರಪತಿಯನ್ನಾಗಲಿ ಪ್ರಶಂಸಿಸದೆ ತಪ್ಪುವುದಿಲ್ಲ. ಈಗ ಇಷ್ಟು ಕಥೆ ನಾವು ಹೇಳಿಕೊಳ್ಳಬೇಕಾದ ಅವಶ್ಯ ಏನು ಬಂದಿದೆಯೆಂದು ಕೆಲವರು ಅಂದು ಕೊಳ್ಳಬಹುದು. ಅದಕ್ಕೆ ಉತ್ತರ ಏನೆಂದರೆ! ಈ ಕಥೆಯನ್ನು ತಪ್ಪದೆ ಎಲ್ಲರೂ ತಿಳಿದುಕೊಳ್ಳಬೇಕಾದ ಅಗತ್ಯವಿದೆ. ಏಕೆಂದರೆ! ಇದು ಕಲ್ಪಿತಕಥೆ ಅಲ್ಲ ನೈಜಕಥೆ. ಇದರಲ್ಲಿನ ಭೂಪತಿ ಪಾತ್ರಧಾರನು ಯಾರೋ ಅಲ್ಲ. ಪ್ರತ್ಯಕ್ಷವಾಗಿ ನೀನೆ. ಬಾಡಿಗೆ ಮನೆ ನೀನಿರುವ ಶರೀರವೇ. ಪತಿ ನಿನ್ನ ಶರೀರಕ್ಕೆ ಅಧಿಪತಿಯಾದ ಆತ್ಮನೆ. ಪರಪತಿ ಯಾರೂ ಅಲ್ಲ ಆತ್ಮಗಿಂತ ಪರವಾಗಿರುವ ಪರಮಾತ್ಮನೇ. ಪತಿಗೆ ಕೆಲಸದವರಾಗಿರುವ 24 ಜನ 24 ಶರೀರಭಾಗಗಳೇ ಎಂದು ಜ್ಞಾಪಕ

ಮಾಡಿಕೊಳ್ಳಬೇಕು. ಪತಿಗೆ ವಿರುದ್ಧವಾಗಿ ಭೂಪತಿಗೆ ಅನುಕೂಲವಾಗಿರುವ ಮುಖ್ಯವಾದ ನಾಲ್ವರಲ್ಲಿ ತುಸ್ಸು ಮನಸ್ಸೆಂದು, ತಸ್ಸು ಅಹಮ್ ಎಂದು ತಿಳಿಯಬೇಕು. ಅಷ್ಟೇ ಅಲ್ಲದೆ ಸದ್ಧಿ ಅಂದರೆ ನಮಗಿರುವ ಬುದ್ಧಿಯೇ ಎಂದು, ಗಿದ್ಧಿ ಅಂದರೆ ನಮ್ಮಲ್ಲಿನ ಚಿತ್ತವೆಂದು ಅರ್ಥ ಮಾಡಿಕೊಳ್ಳಬೇಕು. ಭೂಪತಿ ಕಟ್ಟುವ ಬಾಡಿಗೆ ನಾವು ಒಳಗೆ ಸೇರಿಸುವ ಆಹಾರವೆಂದು ತಿಳಿಯಬೇಕು. ಭೂಪತಿಯ ಬಾಕಿ ಅನ್ನುವುದು ಜೀವಾತ್ಮದ ಕರ್ಮವೆಂದು, ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದೆ ಪರಮಾತ್ಮ ಬಾಕಿ ತೀರಿಸಿದಂತೆ ಎಂದು ಅರ್ಥ ಮಾಡಿಕೊಳ್ಳಬೇಕು. ಪತಿ, ಪರಪತಿಯೊಂದರ ವಿಷಯವನ್ನು ಭೂಪತಿ ಅನ್ನುವವನು ತಿಳಿಯದಂತೆ ಹೋಗುವುದು ಆತ್ಮ, ಪರಮಾತ್ಮಗಳೊಂದರ ಜ್ಞಾನವನ್ನು ಜೀವಾತ್ಮ ಗ್ರಹಿಸದಂತೆ ಹೋದಂತೆಂದು ತಿಳಿಯಬೇಕು. ಪತಿ ಭೂಪತಿಗೆ ಜಾಮೀನಾಗಿರುವುದು ಎಂದರೆ ಆತ್ಮ ಜೀವಾತ್ಮ ಬಳಿ ಜೊತೆಯಾಗಿ ಇದೆಯೆಂದು, ಜೀವಿಯ ಕೆಲಸಗಳನ್ನು ಸ್ವತಃವಾಗಿ ತಾನೆ ಮಾಡುತ್ತಿದೆ ಎಂದು ಅರ್ಥ ಮಾಡಿಕೊಳ್ಳಬೇಕು. ಪತಿಗೆ ಜಮಕಟ್ಟುವುದೆಂದರೆ ಆತ್ಮವನ್ನು ಬ್ರಹ್ಮ, ಕರ್ಮಯೋಗಗಳ ಮೂಲಕ ಆರಾಧಿಸುವುದೆಂದು ಪರಪತಿಗೆ ಜಮಕಟ್ಟುವು ದೆಂದರೆ ಪರಮಾತ್ಮನನ್ನು ಭಕ್ತಿಯೋಗದ ಮುಖಾಂತರ ಆರಾಧಿಸುವುದೆಂದು ತಿಳಿಯಬೇಕು. ಭಕ್ತಿಯೋಗದ ಮೂಲಕ ಕರ್ಮ ಬೇಗನೆ ಇಲ್ಲದಂತೆಹೋಗಿ ಕರ್ಮದಿಂದ ವಿಮುಕ್ತಿ ಪಡೆಯಬಹುದು. ಆದ್ದರಿಂದ ಪರಪತಿಗೆ ಜಮಮಾಡಿದರೆ ಸಾವಿರದಷ್ಟು ರಿಯಾಯಿತಿ ಇದೆಯೆಂದು ಹೇಳಿದ್ದೇವೆ. ಸಕೃತಿದೇವಿ ಅಂದರೆ ಪ್ರಕೃತಿಶಕ್ತಿ ಎಂದು ತಿಳಿಯಬೇಕು. ನಿಯಮಗಳು ಅಂದರೆ ಧರ್ಮಗಳೆಂದು, ಧರ್ಮಗಳನ್ನು ಅತಿಕ್ರಮಿಸಿ ಮೋಕ್ಷಕೊಡುವ ಸಾಮರ್ಥ್ಯ ಒಬ್ಬ ಪರಮಾತ್ಮನಿಗೆ ಇದೆಯೆಂದು, ಆದ್ದರಿಂದ ಪರಪತಿ ತನ್ನ ಇಷ್ಟಬಂದ ರಿಯಾಯಿತಿ ಪ್ರಕಟಿ ಸಿದ್ದಾನೆಂದು ಹೇಳಿದ್ದೇವೆ. ಪರಮಾತ್ಮ ಪ್ರಕೃತಿ ಮೂಲಕವೇ ಜಗತ್ತನ್ನು ನಡೆಸುತ್ತಿದ್ದಾನೆ ಆದ್ದರಿಂದ ಪರಪತಿ ತನ್ನ ಪತ್ನಿಯ ಮುಖಾಂತರ ಬಾಕಿ ಕೊಡಿಸಿದ್ದಾನೆಂದು ಹೇಳಿದ್ದೇವೆ. ಇಷ್ಟು ದೊಡ್ಡ ಕಥೆ ನಮ್ಮ ಶರೀರದಲ್ಲಿಯೇ ನಡೆಯುತ್ತಿದೆ ಎಂದು, ಈ ಕಥೆಯಲ್ಲಿನ ಯಥಾರ್ಥವನ್ನು ತಿಳಿದವನು ತನ್ನ

ಕರ್ಮ ಬಾಕಿಯನ್ನು ಬೇಗನೆ ತೀರಿಸಿಕೊಂಡು ಮೋಕ್ಷ ಪಡೆಯುತ್ತಾನೆಂದು ತಿಳಿಸುತ್ತಿದ್ದೇವೆ.

| | ಕಲ್ಪಿತ | ನೈಜ |
|---|---|---|
| 1. | ಭೂಪತಿ | ಜೀವಾತ್ಮ |
| 2. | ಪತಿ | ಆತ್ಮ |
| 3. | ಪರಪತಿ | ಪರಮಾತ್ಮ |
| 4. | ಮನೆ | ಶರೀರ |
| 5. | ಬಾಡಿಗೆ | ಆಹಾರ |
| 6. | ಕೆಲಸದವರು | ಶರೀರ ಭಾಗಗಳು |
| 7. | ತುಸ್ಸು | ಮನಸ್ಸು |
| 8. | ತಸ್ಸು | ಅಹಮ್ |
| 9. | ಸದ್ಧಿ | ಬುದ್ಧಿ |
| 10. | ಗಿದ್ಧಿ | ಚಿತ್ತ |
| 11. | ಬಾಕಿ | ಕರ್ಮ |
| 12. | ಪೂಚಿಯಾಗಿರುವುದು | ಜೊತೆಯಾಗಿರುವುದು |
| 13. | ಪತಿಯನ್ನು ಮರೆಯುವುದು | ಆತ್ಮಜ್ಞಾನ ತಿಳಿಯದಂತಿರುವುದು |
| 14. | ಪತಿಗೆ ಜಮಕಟ್ಟುವುದು | ಬ್ರಹ್ಮ, ಕರ್ಮಯೋಗಗಳಾಚರಿಸುವುದು |
| 15. | ಬಾಕಿ ಪೂರ್ತಿ ರದ್ದಾಗುವುದು | ಮೋಕ್ಷ ಹೊಂದುವುದು |
| 16. | ಸಕೃತೀದೇವಿ | ಪ್ರಕೃತಿಶಕ್ತಿ |
| 17. | ನಿಯಮಗಳು | ಧರ್ಮಗಳು |
| 18. | ಬಾಕಿರಿಯಾಯಿತಿ | ಕರ್ಮವನ್ನು ರದ್ದುಮಾಡುವುದು |

# ಕೊನೆಯ ಮರಣ

ಒಬ್ಬ ಮನುಷ್ಯ ಬದುಕುತ್ತಿದ್ದಾನೆಂದರೆ ಆ ಮನುಷ್ಯನ ಶರೀರವು ದೊಡ್ಡ ಯಂತ್ರಾಂಗದಂತೆ ಕೆಲಸಮಾಡುತ್ತಿದೆ ಎಂದು ಅರ್ಥ. ಶರೀರವೆಂಬ ಯಂತ್ರದಲ್ಲಿ ಕಾಣಿಸುವವು ಕೆಲವು, ಕಾಣದಿರುವವು ಕೆಲವು ಯಂತ್ರ ಭಾಗಗಳು ಇವೆ. ಕಾಣಿಸುವವು ಹತ್ತು (10) ಭಾಗಗಳಾದರೆ, ಕಾಣಿಸದಂತೆ ಇರುವವು ಹದಿನಾಲ್ಕು (14) ಭಾಗಗಳು ಇವೆ. ಶರೀರಯಂತ್ರವು ಹೊರಗಿನ ಕಬ್ಬಿಣ ತುಂಡುಗಳ ಯಂತ್ರದಂತಹದಲ್ಲ. ಕಬ್ಬಿಣ ತುಂಡುಗಳ ಯಂತ್ರದಲ್ಲಿ ಎಲ್ಲಾ ಭಾಗಗಳಿದ್ದರೂ. ಅದರಲ್ಲಿ ಇಂಧನವಾದ ಎಣ್ಣೆ ಇದ್ದರು ಅದನ್ನು ಆಡಿಸುವುದಕ್ಕೆ ಒಬ್ಬ ಮನುಷ್ಯ ಬೇಕು. ಅವನನ್ನೇ ಚಾಲಕನೆಂದು ಕನ್ನಡದಲ್ಲಿ, ಡ್ರೈವರ್ ಎಂದು ಇಂಗ್ಲೀಷ್‌ನಲ್ಲಿ ಅನ್ನುತ್ತೇವೆ. ಕಾಣಿಸುವ ಕೆಲವು ಭಾಗಗಳಿಂದ ಕೂಡಿಕೊಂಡ ಮಾಂಸ ಖಂಡಗಳ ಶರೀರಯಂತ್ರದಲ್ಲಿ ಇಂಧನವಾಗಿ ರಕ್ತವಿದ್ದರೂ ಶರೀರಯಂತ್ರವನ್ನು ಆಡಿಸುವುದಕ್ಕೆ ಒಬ್ಬನು ಬೇಕು. ಹೊರಗಿನ ಯಂತ್ರವನ್ನು ಆಡಿಸುವವನು ಮನುಷ್ಯನಾದರೆ ಮನುಷ್ಯನ ಶರೀರ ಯಂತ್ರವನ್ನು ಆಡಿಸುವವನು ಮಿಸ್ಟರ್ X (ಯಕ್ಸ್) ಅಂದುಕೊಳ್ಳೋಣ. **ಹೊರಗಿನ ಯಂತ್ರವನ್ನು ಆಡಿಸುವ ಮನುಷ್ಯನನ್ನು ಯಾಂತ್ರಿಕನು ಅನ್ನುತ್ತೇವೆ. ಇಲ್ಲಿ ಶರೀರಯಂತ್ರವನ್ನು ಆಡಿಸುವವನನ್ನು ಮಾಂತ್ರಿಕನು ಅನ್ನುತ್ತೇವೆ.** ಕಬ್ಬಿಣ ವಸ್ತುಗಳಿಂದ ನಿರ್ಮಿತವಾದ ಯಂತ್ರದ ಡ್ರೈವರನ್ನು ಯಾಂತ್ರಿಕಾ ಎಂದು ಕರೆದರೆ, ಮಾಂಸದ ಅವಯವಗಳಿಂದ ನಿರ್ಮಿತವಾದ ಶರೀರ ಯಂತ್ರವೊಂದರ ಡ್ರೈವರನ್ನು ಮಾಂತ್ರಿಕನು ಅನ್ನಬೇಕು. ಪೂರ್ವದಲ್ಲಿ ಈ ವಿಧವಾಗಿ ಯಾಂತ್ರಿಕನು, ಮಾಂತ್ರಿಕನು ಅನ್ನುವ ಹೆಸರುಗಳು ಹುಟ್ಟಿವೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಹೊರಗೆ ಕಾಣಿಸುವ ಯಂತ್ರ ಭಾಗಗಳನ್ನು ನಡೆಸುವ, ಕಾಣಿಸುವವನನ್ನು ಯಾಂತ್ರಿಕನೆಂದು, ಒಳಗೆ ಕಾಣಿಸದ ಶರೀರ ಯಂತ್ರಭಾಗಗಳನ್ನು ನಡೆಸುವ ಕಾಣಿಸದವನನ್ನು ಮಾಂತ್ರಿಕನು ಎಂದು ಅನ್ನುತ್ತಿದ್ದೇವೆ.

ಕಾಣಿಸದಂತೆ ಕೆಲಸಮಾಡುವುದನ್ನು ಮಂತ್ರ ಅನ್ನುತ್ತೇವೆ. ಅದನ್ನು ಕೆಲಸ ಮಾಡಿಸುವವನನ್ನು ಮಾಂತ್ರಿಕನು ಅನ್ನುತ್ತೇವೆ. ಶರೀರ ಯಂತ್ರದಲ್ಲಿ ಕಾಣಿಸದ ಭಾಗಗಳು ಹದಿನಾಲ್ಕು ಇವೆ ಅಂದಿದ್ದೇವೆ. ಅದರಲ್ಲಿ ಒಂದೊಂದು ಒಂದೊಂದು ಕೆಲಸವನ್ನು ಹೊಂದಿವೆ. ಅವುಗಳಲ್ಲಿ ಈಗ ನಾವು ಹೇಳಿಕೊಳ್ಳುವುದಕ್ಕೆ ಸಂದರ್ಭಾನುಸಾರ ಅವಶ್ಯಕತೆ ಬಂದಿದೆ, **ಮನಸ್ಸು ಅನ್ನುವ ಭಾಗ. ಮನನ ಮಾಡುವುದು, ಇಲ್ಲವೆ ಮನನ ಹೊಂದಿರುವುದಾದ್ದರಿಂದ ಅದನ್ನು ಮನಸ್ಸು ಅನ್ನುತ್ತಿದ್ದೇವೆ,** ಶರೀರದಲ್ಲಿ ಎಲ್ಲಾ ಜ್ಞಾಪಕಗಳಿಗೆ ಮುಖ್ಯಕಾರಣವಾಗಿರುವುದು ಮನಸ್ಸು. ಮನುಷ್ಯನ ಜೀವನದಲ್ಲಿ ಕಟ್ಟಕಡೆಯದಾಗಿ ನಶಿಸಿ ಹೋಗುವುದು ಸಹ ಮನಸ್ಸು ಎಂದು ಹೇಳಬಹುದು. ಶರೀರದೊಳಗೆ ಕಾಣಿಸದ ಭಾಗಗಳು ಎಲ್ಲಾ ಕೆಲಸ ಮಾಡಲಾರದ ಸ್ಥಿತಿಗೆ ಬಂದು, ನಶಿಸಿ ಹೋದ ನಂತರ ಎಲ್ಲದಕ್ಕಿಂತ ಕೊನೆಯಲ್ಲಿ ನಾಶವಾಗುವುದು ಮನಸ್ಸು. ಮನಸ್ಸು ನಾಶವಾದ ನಂತರ ಜೀವಿಯು ಸಹ ಶರೀರವನ್ನು ಬಿಟ್ಟು ಹೋಗುತ್ತಾನೆ. ಅದನ್ನೇ ಮರಣ ಎನ್ನುತ್ತೇವೆ. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ ಮರಣದಲ್ಲಿ ನಾಶ ಹೊಂದುವವು ಒಳಗೆ ಕಾಣಿಸದ ಯಂತ್ರಭಾಗಗಳಾದ ಹದಿನಾಲ್ಕು (14) ಭಾಗಗಳೆಂದು ತಿಳಿಯಬೇಕು. ಜೀವಿಯು ಮಾತ್ರ ನಾಶ ಹೊಂದಲಿಲ್ಲವೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಮರಣದಲ್ಲಿ ಹೊರಗಿನ ಹತ್ತು (10) ಭಾಗಗಳಿಂದ, ಒಳಗಿನ ಹದಿನಾಲ್ಕು (14) ಭಾಗಗಳಿಂದ ಜೀವಿಗೆ ಸಂಬಂಧ ಇಲ್ಲದಂತಾಗುತ್ತಿದೆ. ಮನುಷ್ಯ ಬದುಕಿರುವಾಗ, ಶರೀರದಲ್ಲಿ ಎಲ್ಲಾ ಭಾಗಗಳು ಕೆಲಸ ಮಾಡುತ್ತಿರುವಾಗ, ಶರೀರವನ್ನು ನಡೆಸುವ ಡ್ರೈವರ್ (ಮಾಂತ್ರಿಕನು) ಒಬ್ಬನು ಇದ್ದಾನೆ ಅಂದಿದ್ದೇವಲ್ಲ! **ಆ ಡ್ರೈವರ್ ಜೀವಿಯು ಅಲ್ಲವೆಂದು ಚೆನ್ನಾಗಿ ಜ್ಞಾಪಕ ಇಟ್ಟುಕೊಳ್ಳಬೇಕು. ಶರೀರವೆಂಬ ವಾಹನದಲ್ಲಿ ಜೀವಿಯು ಪ್ರಯಾಣಿಕನು ಮಾತ್ರವೇ ಡ್ರೈವರ್ ಮಾತ್ರ ಅಲ್ಲ.**

ಜೀವಿಯು (ಜೀವಾತ್ಮ) ಎನ್ನುವ ಪ್ರಯಾಣಿಕನು ಪ್ರಯಾಣ ಮಾಡುವು ದಕ್ಕೋಸ್ಕರ ಶರೀರವೆಂಬ ವಾಹನ ನಿರ್ಮಾಣ ಮಾಡಲಾಗಿದೆ. ವಾಹನ

ನಡೆಯುವವರೆಗು ಜೀವಿಯು ಅದರಲ್ಲಿ ಪ್ರಯಾಣಿಸುತ್ತಿರುತ್ತಾನೆ. ವಾಹನ ನಡೆಯಲಾರದ ಸ್ಥಿತಿಗೆ ಬಂದಾಗ ಅದನ್ನು ನಡೆಸುವ ಡ್ರೈವರ್ ಈ ಗಾಡಿ ಕೆಲಸಕ್ಕೆ ಬರುವುದಿಲ್ಲ, ಬೇರೆ ಹೊಸವಾಹನ ಹತ್ತೋಣವೆಂದು, ಜೀವಿಯನ್ನು ಕರೆದುಕೊಂಡು ಹೋಗಿ ಬೇರೆ ಹೊಸ ಗಾಡಿ ಹತ್ತುತ್ತಾನೆ. ಗಾಡಿ ಕೆಲಸಕ್ಕೆ ಬಾರದಿದ್ದಾಗ ಪ್ರಯಾಣಿಕನೊಬ್ಬನೆ ಇಳಿಯದೆ ಆ ಗಾಡಿಯನ್ನು ನಡೆಸುವ ಡ್ರೈವರ್ ಸಹ ಇಳಿಯುತ್ತಾನೆ. ಹಾಗೆ ಪ್ರಯಾಣಿಕನು, ಡ್ರೈವರ್ ಇಬ್ಬರು ಕೆಲಸಕ್ಕೆ ಬಾರದ ಗಾಡಿಯನ್ನು ಇಳಿದು ಮತ್ತೊಂದು ಹೊಸ ಗಾಡಿಯನ್ನು ಹತ್ತಿ ಪ್ರಯಾಣ ಸಾಗಿಸುತ್ತಿರುತ್ತಾರೆ. ಗಾಡಿ ಯಾವುದಾದರೂ ಪ್ರಯಾಣಿಕನು ಒಬ್ಬನೆ, ಡ್ರೈವರ್ ಒಬ್ಬನೆ ಇರುತ್ತಾನೆ. ಒಬ್ಬ ಪ್ರಯಾಣಿಕನು ಪ್ರಯಾಣಿಸುವುದಕ್ಕೆ ಒಂದು ಸೀಟು ಮಾತ್ರವಿರುವ ಗಾಡಿಯನ್ನು ನಡೆಸುವುದಕ್ಕೆ, ಪ್ರಯಾಣಿಕನ ಹಿಂದೆ ಶಾಶ್ವತವಾಗಿ ಒಬ್ಬನೇ ಡ್ರೈವರ್ ಇರುತ್ತಾನೆ. ಎಷ್ಟು ವಾಹನಗಳು ಕೆಟ್ಟುಹೋದರೂ, ಎಷ್ಟು ವಾಹನಗಳು ಬದಲಾಯಿಸಿದರು ಪ್ರಯಾಣಿಕನು ಒಬ್ಬನೇ, ಡ್ರೈವರ್ ಒಬ್ಬನೇ, ದಾರಿ ಒಂದೇ ಎಂದು ಮರೆಯಬಾರದು. **ಒಂದು ವಾಹನ ಕೆಟ್ಟುಹೋಗಿ ನಡೆಯಲಾರದ ಸ್ಥಿತಿಗೆ ಬಂದಾಗ, ಮತ್ತೊಂದು ಹೊಸ ವಾಹನವನ್ನು ಕೊಡುವ ವಾಹನ ತಯಾರು ಮಾಡುವವನು ಮತ್ತೊಬ್ಬನು ಇದ್ದಾನೆ. ಅವನೇ ವಾಹನಗಳ ಅಧಿಪತಿ**. ಎಷ್ಟುಜನ ಪ್ರಯಾಣಿಕರಿಗಾದರು ಹೊಸ ವಾಹನಗಳನ್ನು ಕೊಡುವ ಸಾಮರ್ಥ್ಯ ವಾಹನಗಳನ್ನು ತಯಾರು ಮಾಡುವ ವನಿಗಿರುತ್ತದೆ. ವಾಹನಗಳನ್ನು ತಯಾರು ಮಾಡುವವನು ಒಬ್ಬ ಪ್ರಯಾಣಿಕನು ಕುಳಿತುಕೊಳ್ಳುವಂತೆ ಒಂದು ಸೀಟನ್ನು, ಒಬ್ಬ ಡ್ರೈವರ್ ನಡೆಸುವಂತೆ ಒಂದು ಡ್ರೈವರ್ ಸೀಟನ್ನು, ವಾಹನಗಳಲ್ಲಿ ಇಡುವುದೇ ಅಲ್ಲದೆ, ಮೊದಲ ವಾಹನದಲ್ಲಿ ಎಷ್ಟು ಭಾಗಗಳಿವೆಯೋ, ಎಲ್ಲಾ ಭಾಗಗಳ ನಮೂನೆಯಂತೆ ಗಾಡಿಯನ್ನು ತಯಾರು ಮಾಡಿರುತ್ತಾನೆ.

ಒಂದು ಗಾಡಿಯಲ್ಲಿ ಪ್ರಯಾಣ ನಿಂತುಹೋದರೆ ಅದರಲ್ಲಿ ಡ್ರೈವರ್, ಪ್ರಯಾಣಿಕನು ಇಬ್ಬರು ಇಳಿದು ತಕ್ಷಣ ಹೊಸಗಾಡಿಯನ್ನು ಹತ್ತಿಹೋಗಬಲ್ಲರು. ಶರೀರವೆಂಬ ಗಾಡಿಯಲ್ಲಿ ಜೀವಿಯು ತನ್ನ ಲಗೇಜಿನಿಂದ ಪ್ರಯಾಣ ಮಾಡುತ್ತಿರುತ್ತಾನೆ. ಗಾಡಿಯನ್ನು ನಡೆಸುವ ಮಾಂತ್ರಿಕನು (ಡ್ರೈವರ್) ಮಿಸ್ಟರ್ X ಅಂದುಕೊಂಡಿದ್ದೇವೆ. ಡ್ರೈವರ್ ಯಾರಾಗಿರುವುದು ಕೊನೆಯಲ್ಲಿ ಹೇಳಿ ಕೊಳ್ಳೋಣ. ಆದರೆ ಎಷ್ಟು ಹೊಸ ವಾಹನಗಳನ್ನಾದರು ಎಷ್ಟುಜನರಿಗಾದರೂ ಕೊಡುವವನು ಒಬ್ಬನಿದ್ದಾನೆ. **ಆ ವಾಹನಗಳ ಯಜಮಾನನನ್ನು ಪರಮಾತ್ಮ ಅಥವಾ ದೇವರು ಅನ್ನುತ್ತೇವೆ. ಈಗ ನಿನ್ನ ಶರೀರ ಒಂದು ವಾಹನವಾಗಿದ್ದು, ಅದನ್ನು ಕೊಟ್ಟವನು ದೇವರು. ನಿನ್ನ ಶರೀರ ವಾಹನದಲ್ಲಿ ಜೀವನ ಪ್ರಯಾಣವನ್ನು ಸಾಗಿಸುವವನು ನೀನೇ ಎಂದು ತಿಳಿದುಕೋ.** ಆದರೆ ಎಷ್ಟೋ ಕೋಟಿ ವರ್ಷ ಗಳಿಂದ ನಿನಗೆ ಪರ್ಮನೆಂಟ್ ಡ್ರೈವರ್ ಆಗಿದ್ದು, ನಿನ್ನ ಶರೀರ ವಾಹನದಲ್ಲಿ ನಿನ್ನ ಜೊತೆ ನಿನ್ನ ಮುಂದೆಯೇ ಕುಳಿತುಕೊಂಡು, ಅದನ್ನು ನಡೆಸುತ್ತಿರುವವನನ್ನು ನೀನು ಯಾವಾಗಲೂ ನೋಡಲಿಲ್ಲ. ಅವನು ಯಾರೋ ಸಹ ಬಹಳ ಜನರಿಗೆ ತಿಳಿದಿಲ್ಲ. ಅವನನ್ನು ಈಗಲೂ ಸಹ ಮಿಸ್ಟರ್ X ಆಗಿಯೇ ಹೇಳಿಕೊಳ್ಳೋಣ. ಜೀವಿಯು ಪ್ರಯಾಣಿಸುವ ಶರೀರವೆಂಬ ಗಾಡಿಯಲ್ಲಿ ಜೀವಿಯ ಹಿಂದೆ ಒಂದು ಮೂಟೆ ಇರುತ್ತದೆಂದು ಸಹ ಹೇಳಿಕೊಂಡಿದ್ದೇವಲ್ಲವೆ! ಪ್ರಯಾಣಿಕನಾದ ಜೀವಿಯು ಯಾವಾಗ ಹಳೆ ಗಾಡಿಯನ್ನು ಇಳಿದು ಹೊಸಗಾಡಿಯನ್ನು ಹತ್ತಿದರೂ, ಆಗ ತನ್ನ ಮೂಟೆಯನ್ನು ಜಾಗ್ರತೆಯಾಗಿ ತೆಗೆದುಕೊಂಡು ಹೋಗುತ್ತಿರುತ್ತಾನೆ. ಯಾವ ಗಾಡಿ ಹತ್ತಿದರೂ ತನ್ನ ಪಕ್ಕದಲ್ಲಿಯೇ ಆ ಮೂಟೆಯನ್ನು ಪ್ರಯಾಣಿಸುವ ಜೀವಿಯು ಇಟ್ಟುಕೊಳ್ಳುವುದು ನಡೆಯುತ್ತಿರುತ್ತದೆ. ಆ ಮೂಟೆಯಲ್ಲಿ ಏನು ಸಾಮಗ್ರಿ ಇದೆಯೆಂದು ಗಮನಿಸಿದರೆ ಅದರಲ್ಲಿ ಅನೇಕ ವಿಧಗಳಾದ ಹಸಿಕಾಯಿ ಗಳು, ಪಕ್ವಕ್ಕೆ ಬಂದು ಹಣ್ಣಾದ ಹಣ್ಣುಗಳು ಇವೆಯೆಂದು ತಿಳಿಯುತ್ತಿದೆ. ಬಿಡುವಿಲ್ಲದ ಪ್ರಯಾಣದಲ್ಲಿ ಜೀವಿಯು ಆ ಫಲಗಳನ್ನು ಆಹಾರವಾಗಿ ತೆಗೆದು

ಕೊಳ್ಳುತ್ತಿರುತ್ತಾನೆ. ಆ ವಿಧವಾಗಿ ಚೀಲದಲ್ಲಿನ ಫಲಗಳನ್ನು ತಿನ್ನುತ್ತಾ ಇದ್ದರೆ ಅವು ಮುಗಿದುಹೋಗಿ ಚೀಲ ಖಾಲಿಯಾಗುತ್ತದೆ ತಾನೆ! ಆದರೆ ಜೀವಿಯು ಆ ಫಲವನ್ನು ತಿನ್ನುತ್ತಾ ಅವು ಮುಗಿದುಹೋಗದಂತೆ ದಾರಿಯಲ್ಲಿ ಪಕ್ಕದಲ್ಲೆ ಇರುವ ಗಿಡಗಳಿಗೆ ಕಾದು ನೇತಾಡುತ್ತಿರುವ ಫಲಗಳನ್ನು ಹೋಗುತ್ತಾ ಹೋಗುತ್ತಲೇ ಕೊಯ್ದುಕೊಂಡು ತನ್ನ ಚೀಲದಲ್ಲಿ ಹಾಕಿಕೊಳ್ಳುತ್ತಿರುತ್ತಾನೆ. ಈ ವಿಧವಾಗಿ ದಾರಿ ಪಕ್ಕದಲ್ಲಿ ಅನೇಕ ಗಿಡಗಳಿಗೆ ಕಾದ ಅನೇಕ ಜಾತಿ ಫಲಗಳನ್ನು ಕೀಳುತ್ತಾ, ತನ್ನ ಚೀಲ ಖಾಲಿಯಾಗದಂತೆ, ತಾನು ಎಷ್ಟು ದೂರ ಪ್ರಯಾಣ ಮಾಡಿದರು ಫಲಗಳು ಮುಗಿದುಹೋಗದಂತೆ ಮಾಡಿಕೊಳ್ಳುತ್ತಿರುತ್ತಾನೆ. ಈ ವಿಧವಾಗಿ ದಾರಿಯಲ್ಲಿ ಜೀವಿಯು ಪ್ರಯಾಣಿಸುತ್ತಾ, ಕೆಲವು ಪಕ್ವಕ್ಕೆ ಬಂದಿರುವ ಫಲಗಳನ್ನು ತಿನ್ನುತ್ತಾ ಖರ್ಚು ಮಾಡುತ್ತಾ, ಕೆಲವು ಕಾಯಿಗಳನ್ನು ಸಿಕ್ಕಿದ ಗಿಡಗಳಿಂದ ಕಿತ್ತು ಜಮ ಮಾಡಿಕೊಳ್ಳುತ್ತಿರುತ್ತಾನೆ. ಒಂದು ದಿನ ತನ್ನ ಪ್ರಯಾಣದಲ್ಲಿ ನಾಲ್ಕು ಹಣ್ಣುಗಳನ್ನು ತಿಂದರೆ, ಆ ದಿನ ಒಂಭತ್ತು ಅಥವಾ ಹತ್ತು ಕಾಯಿಗಳನ್ನು ಜಮ ಮಾಡಿಕೊಳ್ಳುತ್ತಿರುತ್ತಾನೆ. ಒಂದೊಂದು ದಿನ ಹತ್ತು ಹಣ್ಣುಗಳನ್ನು ತಿಂದು ಖರ್ಚು ಮಾಡಿದರೆ, ಆ ದಿನ ಮೂರು ಇಲ್ಲವೆ ನಾಲ್ಕು ಹಣ್ಣುಗಳನ್ನು ಜಮ ಮಾಡಿಕೊಳ್ಳುತ್ತಿರುತ್ತಾನೆ. ಈ ವಿಧವಾಗಿ ಹೆಚ್ಚುಕಡಿಮೆಯಾಗಿ ಖರ್ಚು, ಹೆಚ್ಚು ಕಡಿಮೆಯಾಗಿ ಜಮ ಇರುತ್ತದೆ. ಹಾಗೆ ಶೇಕರಿಸಿದ ಹಣ್ಣುಗಳು ಜಮವೇ ಹೆಚ್ಚಾಗಿ ಕೆಲವು ಚೀಲಗಳು ಉಳಿದಿರುವವು ಬಹಳಜನರಿಗೆ ಇವೆ. ಇದೆಲ್ಲವೂ ಜೀವಿಯ ಪ್ರಯಾಣವೇ ಎಂದು ಮೊದಲೆ ಹೇಳಿಕೊಂಡಿದ್ದೇವಲ್ಲ! ಈ ಮೂಟೆಗಳ ಸಂಗತಿ ಏನೆಂದು ಕೆಲವರು ಕೇಳಬಹುದು. ಈ ಮೂಟೆಗಳು ನಮಗೆಲ್ಲರಿಗೂ ಇರುವ ಮೂಟೆಗಳೆ. ಅವುಗಳೇ ಕರ್ಮ ಮೂಟೆಗಳು. ಅವುಗಳಲ್ಲಿ ಅನೇಕ ವಿಧವಾದ ಹಣ್ಣುಗಳೆಂಬ ಪಾಪಪುಣ್ಯಗಳು ಇವೆ. ನಾವು ನಿತ್ಯ ಪಾಪಪುಣ್ಯಗಳೆಂಬ ಕರ್ಮ ನೆಲೆಯಿಂದ ಅನುಭವಿಸುತ್ತಾ ಮುಗಿಸುತ್ತಾ, ಮತ್ತೆ ಹೊಸ ಪಾಪಪುಣ್ಯಗಳನ್ನು ಕರ್ಮಚೀಲದೊಳಗೆ ಜಮ ಮಾಡುತ್ತಿದ್ದೇವೆ.

ಒಂದು ಪ್ರಯಾಣ ಅಂದ ನಂತರ ಗುರಿ ಎಂಬುದು ಇರಬೇಕಲ್ಲವೆ! ಹಾಗೆ ಗಮ್ಯವಿಲ್ಲದಂತೆ ವಿರಾಮವಿಲ್ಲದ ಪ್ರಯಾಣ ಶರೀರ ವಾಹನಗಳು ಬದಲಾಯಿಸುತ್ತಾ ನಾವು ಮಾಡುತ್ತಿರುವ ಮಾತು ನಿಜ. ಇಲ್ಲಿ ವಿರಾಮವಿಲ್ಲದ ಪ್ರಯಾಣ ಏನು? ಗಮ್ಯವಿರಬೇಕಲ್ಲ! ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಗುರಿ ಎಂಬುದು ಇದೆ. ಆ **ಗುರಿಯ ಹೆಸರು ಮೋಕ್ಷ.** ಆದರೆ ಗುರಿಯನ್ನು ಸೇರಬೇಕೆಂದರೆ ಒಂದು ನಿಯಮ ಇದೆ. ಆ ನಿಯಮ ಏನೆಂದರೆ ಪ್ರಯಾಣಿಕನ ಹತ್ತಿರವಿರುವ ಚೀಲ ಯಾವಾಗ ಖಾಲಿ ಆದರೆ ಆಗ ಅವನು ಎಲ್ಲಿ ಇದ್ದಾನೋ ಅದೇ ಅವನ ಗಮ್ಯವಾಗುತ್ತದೆ. ಈ ನಿಯಮದ ಪ್ರಕಾರ ಪ್ರಯಾಣವನ್ನು ಆರಂಭ ಮಾಡಿದ ಜೀವಿಯು, ತನ್ನ ನಿಯಮವನ್ನು ತಾನೇ ಮರೆತುಹೋಗಿ ಪ್ರಯಾಣಿಸುತ್ತಾ, ತನ್ನ ಚೀಲವನ್ನು ಖಾಲಿ ಮಾಡಿಕೊಳ್ಳದಂತೆ, ಕರ್ಮ ಫಲಗಳನ್ನು ತುಂಬಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಲೇ ಇದ್ದಾನೆ. ಹಾಗೆ ಖರ್ಚಾಗುವ ಫಲಗಳಿಗಿಂತ ಜಮ ಆಗುವ ಫಲಗಳೇ ಹೆಚ್ಚಾಗಿ ಇರುವುದರಿಂದ ಕೆಲವು ಚೀಲಗಳು ಉಳಿದಿರುವವರು ಸಹ ಬಹಳಜನ ಇದ್ದಾರೆ. ಈ ವಿಷಯವೆಲ್ಲವನ್ನು ಯಾವುದೋ ಒಂದು ಕಥೆಯಂತೆ ನೋಡದೆ **ಪ್ರಯಾಣಿಕನು ನೀನೇ ಎಂದು ತಿಳಿದುಕೊ, ವಾಹನ ನಿನ್ನ ಶರೀರವೇ ಅಂದುಕೊ, ಮಾತುಗಳು ನಿನ್ನ ಕರ್ಮಮೂಟೆಗಳೆ ಅಂದುಕೊ, ಆ ಮೂಟೆಯಲ್ಲಿನವು ನೀನು ಸಂಪಾದಿಸಿಕೊಂಡ ಪಾಪಪುಣ್ಯಗಳೆಂದು ತಿಳಿದುಕೊ.** ನೀನು ಎಷ್ಟು ಅನುಭವಿಸಿದರೂ ಅನುಭವಿಸಬೇಕಾದ ಎಷ್ಟೋ ಕರ್ಮಫಲಗಳು ಇನ್ನು ನಿನ್ನ ಹತ್ತಿರ ಉಳಿದಿವೆ ಅಂದುಕೊ. ಈಗ ನೀನು ಮೋಕ್ಷದ ಗುರಿಯನ್ನು ಏಕೆ ಸೇರಲಾರದೆ ಹೋಗುತ್ತಿದ್ದೀಯೋ ಅರ್ಥವಾಗಿರುತ್ತದೆ ಅಂದುಕೊಳ್ಳುತ್ತೇನೆ.

ಪ್ರಯಾಣವೆಲ್ಲವನ್ನು ಮನುಷ್ಯನಿಗೆ ಅನ್ವಯಿಸಿಕೊಂಡು ನೋಡಿದರೆ ಜೀವಿಯು ಕೆಲವು ಕೋಟಿಗಳ ವರ್ಷಗಳಿಂದ ಜೀವನವೆಂಬ ಶರೀರದಿಂದ ಕೊನೆಸಾಗಿಸುತ್ತಲೇ ಬರುತ್ತಿದ್ದಾನೆ. ಮರಣದಲ್ಲಿ ಯಾರು ಇಲ್ಲದಂತೆ ಹೋಗುತ್ತಿಲ್ಲ.

ಮರಣ ಎಂಬುವುದು ಜೀವಿಯ ನಾಶವಲ್ಲ. ಮರಣದಲ್ಲಿ ಶರೀರ ಮಾತ್ರ ನಶಿಸುತ್ತಿದೆ. ಮರಣದಿಂದ ಜೀವಿಗೆ ಹಳೆ ಶರೀರ ಹೋಗಿ ಹೊಸ ಶರೀರ ಬರುತ್ತಿದೆ. ಆದ್ದರಿಂದ ಜೀವಿಯು ಸಾಯುತ್ತಿಲ್ಲ ಹುಟ್ಟುತ್ತಿಲ್ಲ. ಮರಣವನ್ನು ಹೊಂದುತ್ತಿರುವುದು ಶರೀರ ಮಾತ್ರವೇ. ಹಾಗೆಯೇ ಹುಟ್ಟುತ್ತಿರುವುದು ಸಹ ಶರೀರವೇ. ಜೀವಿಯು ಹಳೇ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದಂತೆ, ಹಳೇ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುತ್ತಿದ್ದಾನೆ. ಶರೀರವಾಹನ ಹಳೇದು ನಿಂತುಹೋದರೆ ಸಾಯುವುದೆಂದು, ಹೊಸ ಶರೀರವಾಹನ ಬಂದರೆ ಹುಟ್ಟುವುದೆಂದು ಹೆಸರು ಇದೆ. ಸತ್ತಾಗಾಗಲಿ ಹುಟ್ಟಿದಾಗಾಗಲಿ, ಶರೀರದಲ್ಲಿ ಪ್ರಯಾಣಿಸುವ ಜೀವಿಯಲ್ಲಾಗಲಿ ಅದನ್ನು ನಡೆಸುವ ಡ್ರೈವರ್‌ನಲ್ಲಾಗಲಿ ಎಂತಹ ಬದಲಾವಣೆ ಇರುವುದಿಲ್ಲ. ಮರಣದಲ್ಲಿ ಜ್ಞಾಪಕಗಳ ಹುತ್ತವಾದ ಮನಸ್ಸು ನಶಿಸಿಹೋಗುವುದರಿಂದ ಹೋದ ಶರೀರದಲ್ಲಿರುವ ಜ್ಞಾಪಕಗಳೆಲ್ಲ ಆ ಶರೀರದಿಂದಲೇ ಹೋಗುತ್ತಿವೆ. ಆದ್ದರಿಂದ ಹಳೆ ಶರೀರದಲ್ಲಿನ ಸಮಾಚಾರವನ್ನು ತಿಳಿಸುವುದು ಯಾವುದು ಇಲ್ಲದಿರುವುದರಿಂದ ಹಿಂದಿನ ಜನ್ಮ ವಿಷಯ ಜೀವಿಗೆ ಸ್ವಲ್ಪವೂ ತಿಳಿಯದಂತೆ ಹೋಗುತ್ತಿದೆ. ಹೊಸ ಶರೀರದಲ್ಲಿನ ಹೊಸ ಮನಸ್ಸು ತಿಳಿಸುವ ವಿಷಯಗಳು ಮಾತ್ರವೇ ತಿಳಿಯುತ್ತಿರುತ್ತದೆ. ಹೋದ ಹಳೇ ಶರೀರದಲ್ಲಿ ತಾನು ಏನು ಮಾಡಿರುವುದು ಜೀವಿಗೆ ತಿಳಿದಿಲ್ಲ. ಶರೀರ ಗಾಡಿಯನ್ನು ನಡೆಸುವ ಡ್ರೈವರ್‌ಗೆ ನಮಗಿರುವಂತೆ ಭಾಗಗಳಿರುವುದಿಲ್ಲ. ಅವನು ಭಾಗಗಳು ಇಲ್ಲದ ಏಕಸ್ವರೂಪನಾದ್ದರಿಂದ ಅವನಿಗೆ ಎಲ್ಲಾ ಜ್ಞಾಪಕ ಇರುತ್ತವೆ, ಎಲ್ಲಾ ತಿಳಿದಿವೆ. ಆದರೆ ಅವನು ಜೀವಿಗೆ ಒಂದೂ ಸಹ ಹೇಳುವುದಿಲ್ಲ. ಅವನ ಕೆಲಸ ಗಾಡಿಯನ್ನು ನಡೆಸುವ ಕೆಲಸ ಮಾತ್ರವೇ. ಅವನು ಮಿಸ್ಟರ್ X ಆಗಿಯೇ ಜೀವಿಗೆ ತಿಳಿಯದಂತೆ ಗಾಡಿಯನ್ನು ಮಾತ್ರ ನಡೆಸುತ್ತಿರುತ್ತಾನೆ. (**ಗಮನಿಕೆ :–** ಹಿಂದಿನ ಜನ್ಮಗಳ ವಿವರ ತಿಳಿಯದೆ ಹೋಗುವುದರಿಂದ, ಅವುಗಳನ್ನು ಪ್ರತ್ಯಕ್ಷಪ್ರಮಾಣವಾಗಿ, ಶಾಸ್ತ್ರಬದ್ಧವಾಗಿ ಯಾರು ಹೇಳದೆಹೋಗುವುದರಿಂದ, ಭೂಮಿಮೇಲೆ ಮಾನವನು ಪೂರ್ತಿ ಅಜ್ಞಾನದಲ್ಲಿ ಮುಳುಗಿಹೋಗಿ ಜೀವಿಗೆ ಜನ್ಮಗಳೇ ಇಲ್ಲವೆಂದು

ಹೇಳಿಕೊಳ್ಳುವ ಪ್ರಮಾದವಿದೆ. ಇಲ್ಲಿಗೆ ಹೊಸದಾಗಿ ಹುಟ್ಟಿದ ಮತಗಳೆಲ್ಲ ಜನ್ಮಗಳು ಇಲ್ಲವೆಂದೇ ಹೇಳುತ್ತಿವೆ. ಮತ್ತು ಹಿಂದೂಮತದಲ್ಲಿನ ಹೇತುವಾದಿಗಳು, ನಾಸ್ತಿಕವಾದಿಗಳು ಸಹ ಪುನರ್ಜನ್ಮ ಎಂಬುವುದು ಅವಾಸ್ತವವೆಂದು ಅನ್ನುತ್ತಿದ್ದಾರೆ. ಆದ್ದರಿಂದ ಪೂರ್ತಿಯಾಗಿ ಜನ್ಮಗಳು ಇಲ್ಲವೆಂಬ ಪರಿಸ್ಥಿತಿ ಭೂಮಿ ಮೇಲೆ ಏರ್ಪ ಡದಿರುವುದಕ್ಕೆ, ನಮ್ಮ ಶರೀರದಲ್ಲಿ ಡ್ರೈವರ್ ಆಗಿರುವವನೇ ಕೆಲವು ನೂರಾರು ವರ್ಷಗಳಿಗೆ ಒಂದುಸಲ ಬಹು ಅಪರೂಪವಾಗಿ ಯಾರಿಗೋ ಒಬ್ಬರಿಗೆ ಹಿಂದಿನ ಜನ್ಮದ ಜ್ಞಾಪಕವನ್ನು ಉಂಟುಮಾಡುತ್ತಾನೆ. ಮನುಷ್ಯ ಹುಟ್ಟಿದ ನಂತರ ಚಿಕ್ಕ ವಯಸ್ಸಿನಲ್ಲಿ ಮೂರರಿಂದ ಐದು ವರ್ಷಗಳೊಳಗೆ ಹಿಂದಿನ ಕೆಲವು ವಿಷಯಗಳನ್ನು ಜೀವಿಗೆ ಹೇಳುತ್ತದೆ. ಆಗ ಆ ಹುಡುಗನಾಗಲಿ, ಹುಡುಗಿಯಾಗಲಿ ತನಗೆ ಒಳಗೆ ತಿಳಿದ ವಿಷಯಗಳನ್ನು ಹೊರಗೆ ಹೇಳುತ್ತಿರುತ್ತಾರೆ. ಹಾಗೆ ಹೇಳಿದ ಸಂಘಟನೆಗಳು ಎಷ್ಟೋ ನಡೆದಿವೆ. ಆ ಹಿಂದಿನ ಜ್ಞಾಪಕ ಸುಮಾರು ಒಂದು ವರ್ಷ ಅದಕ್ಕಿಂತ ಕಡಿಮೆ ಕಾಲವಿದ್ದು ನಂತರ ಇಲ್ಲದಂತೆ ಹೋಗುತ್ತದೆ. ಅದು ವಾಸ್ತವವಾಗಿ ಜ್ಞಾಪಕವಲ್ಲ. ಶರೀರಗಳನ್ನು ನಡೆಸುತ್ತಿರುವ ಮಿಸ್ಟರ್ ಯಕ್ಸ್ ಅನ್ನುವವನು ಹೇಳುವವರೆಗು ಹೇಳುತ್ತಿರುತ್ತಾರೆ. ಆತನು ಯಾವಾಗ ಹೇಳದಂತೆ ಹೋದರೆ ಆಗ ಹುಡುಗನು ಏನು ಹೇಳಲಾರನು. ಈ ತತಂಗ ತಿಳಿಯದ ಹೇತುವಾದಿಗಳು ಹಾಗೆ ಹೇಳುವ ಹುಡುಗರಿಗೆ ಏನೋ ರೋಗವಿದೆ ಎಂದು, ಅದರಿಂದ ಹಾಗೆ ಹೇಳುತ್ತಿರುತ್ತಾರೆಂದು ಅದೆಲ್ಲವೂ ವಾಸ್ತವವು ಅಲ್ಲವೆಂದು ಅನ್ನುತ್ತಿರುತ್ತಾರೆ. ಇದನ್ನು ಕುರಿತು ನಾವು ಬರೆಯುವ **"ಪುನರ್ಜನ್ಮ ಜ್ಞಾಪಕ"** ಅನ್ನುವ ಪುಸ್ತಕದಲ್ಲಿ ವಿವರಿಸುತ್ತೇವೆ.)

ಜೀವಿಯು ಎಷ್ಟು ಶರೀರಗಳನ್ನು ಬದಲಾಯಿಸಿದರೂ ಹಿಂದಿನ ಯಾವೊಂದು ಶರೀರದಲ್ಲಿನ ಜ್ಞಾಪಕವೂ ಸಹ ಜೀವಿಗಿರುವುದಿಲ್ಲ. ಆದ್ದರಿಂದ ಈಗಿರುವ ಜನ್ಮದಲ್ಲಿ ಮಾತ್ರವೇ ನಾನು ಹುಟ್ಟಿದ್ದೇನೆಂದುಕೊಳ್ಳುತ್ತಿದ್ದಾನೆ. ಹಿಂದಿನ ಸಮಾಚಾರ ಏನು ತಿಳಿಯುವುದಿಲ್ಲ ಆದ್ದರಿಂದ ಇದಕ್ಕು ಮೊದಲು ತಾನು

ಯಾವಾಗಲೂ ಭೂಮಿಮೇಲೆ ಹುಟ್ಟಲಿಲ್ಲವೆಂಬ ಭಾವನೆಯಿಂದ ಇರುತ್ತಾನೆ. **ವಾಸ್ತವಕ್ಕೆ ತಾನು ಇದಕ್ಕು ಮೊದಲು ಎಷ್ಟೋ ಶರೀರಗಳನ್ನು ಧರಿಸಿದ್ದೇನೆಂದು ತಿಳಿಯದ ಮನುಷ್ಯ, ಇನ್ನು ನಂತರ ಸಹ ಎಷ್ಟೋ ಶರೀರಗಳನ್ನು ಧರಿಸಬೇಕೆಂದು ತಿಳಿಯದ ಮನುಷ್ಯ, ಪ್ರಸ್ತುತ ಇರುವ ಜನ್ಮವನ್ನು ಮಾತ್ರವೇ ತಿಳಿದ ಮನುಷ್ಯ, ಈಗ ಹುಟ್ಟಿರುವುದು ಹೊರತು ಮುಂದೆ ಹಿಂದಿರುವ ಜನ್ಮಗಳ ವಿವರ ತಿಳಿಯದೆ, ಈಗ ಮಾತ್ರವೇ ತನ್ನನ್ನು ದೇವರು ಹುಟ್ಟಿಸಿದ್ದಾನೆಂದು ಅಂದುಕೊಳ್ಳುತ್ತಿರುತ್ತಾನೆ. ಇಲ್ಲವೆ ತಾನೆ ಈಗ ಹುಟ್ಟಿದ್ದೇನೆಂದು ತನ್ನನ್ನು ಯಾವ ದೇವರು ಹುಟ್ಟಿಸಲಿಲ್ಲವೆಂದು ಅಂದುಕೊಳ್ಳುತ್ತಿರುತ್ತಾನೆ.** ಈ ಭಾವ ಹಿಂದೂಮತದಲ್ಲಿ ಅಲ್ಲದೆ ಇತರ ಮತಗಳಲ್ಲಿಯೂ ಇದೆ ಎಂದುಕೊಳ್ಳುತ್ತೇವೆ. ಹಿಂದೂಮತದಲ್ಲಿ ಭಗವದ್ಗೀತೆ ಬೋಧನೆಯಿಂದ ಮನುಷ್ಯನಿಗೆ ಎಷ್ಟೋ ಜನ್ಮಗಳು ಕಳೆದಿವೆ ಎಂದು, ನಂತರ ಮೋಕ್ಷ ಪಡೆಯುವವರೆಗು ಎಷ್ಟೋ ಜನ್ಮಗಳು ಉಂಟಾಗುತ್ತವೆಂದು ತಿಳಿಯುತ್ತಿದೆ. ಇತರ ಮತಗಳಲ್ಲಿ ಮನುಷ್ಯ ಮರಣಿಸಿದ ನಂತರ ದೇವರು ಮತ್ತೆ ಅದೇ ಶರೀರದಿಂದಲೇ ಎಬ್ಬಿಸಿ ಮನುಷ್ಯ ಮಾಡಿಕೊಂಡ ಪಾಪಪುಣ್ಯಗಳಿಗೆ ತೀರ್ಪು ಕೊಟ್ಟು ಶಿಕ್ಷೆಹಾಕುತ್ತಾನೆಂದು ಹೇಳಿದೆ ಎಂದು ಹೇಳಿಕೊಳ್ಳುವುದು ಕೇಳಿದ್ದೇವೆ. ಆ ಮಾತು ನಿಜವೇ ಹಾಗೆ ಒಂದೇಸಲ ದೇವರು ಮಾಡುತ್ತಿದ್ದಾನಾ? ಎಂದು ಯೋಚಿಸಿದರೆ ಒಂದೇ ಸಲವೆಂದು ಸೂಚನೆಗಳೇನು ಇಲ್ಲದಂತೆ ತಿಳಿಯುತ್ತಿದೆ. ಇದೆ ವಿಷಯವನ್ನು ಹಿಂದೂಮತ ಪುರಾಣಗಳಲ್ಲಿ ಸಹ ಹೇಳಿಕೊಂಡಿದ್ದಾರೆ. ಆದರೆ ಅದು ಶಾಸ್ತ್ರಬದ್ಧತೆ ಅಲ್ಲವೆಂದು ಗೀತೆಯಲ್ಲಿ ಹೇಳಿರುವುದು ಮಾತ್ರವೇ ಶಾಸ್ತ್ರಬದ್ಧತೆ ಎಂದು ನಾವು ಹೇಳುತ್ತಿದ್ದೇವೆ.

ಭಗವದ್ಗೀತೆ ಜ್ಞಾನ ತಿಳಿದವರು ಕೆಲವರು ತಮಗೆ ಎಷ್ಟೋ ಜನ್ಮಗಳು ಕಳೆದುಹೋಗಿವೆ ಎಂದು ವಿಶ್ವಸಿಸಿದವರಾಗಿ, ನಂತರ ಬರುವ ಜನ್ಮಗಳಿಂದ ಹೊರಬೀಳಬೇಕೆಂದು ತಿಳಿದವರಾಗಿ, ಈಗಿನಿಂದ ಮೋಕ್ಷಕ್ಕೋಸ್ಕರ ಪ್ರಯತ್ನ ಮಾಡುವವರು ಇದ್ದಾರೆ. ಅಂತಹ ಉದ್ದೇಶ ಹೊಂದಿದವರಿಗೆ ಸರಿಯಾದ

ಜ್ಞಾನಮಾರ್ಗ ಸಿಗದೆ, ಅವರಿಗೆ ತಮ್ಮ ಹತ್ತಿರವಿರುವ ಕರ್ಮಚೀಲದ ವಿಷಯ ತಿಳಿಯದೆ, ಅವರ ಪ್ರಯತ್ನ ಅವರು ಮಾಡುತ್ತಲೇ ಇದ್ದಾರೆ. ನಮ್ಮ ಹತ್ತಿರ ಚೀಲ ಇರುವವರೆಗು, ಅದು ಖಾಲಿ ಆಗದವರೆಗೂ, ಶರೀರವಾಹನ ಮಂತ್ರಗಾರ (ಡ್ರೈವರ್) ನಮ್ಮನ್ನು ಒಂದು ಗಾಡಿ ಇಳಿಯುತ್ತಲೇ ಮತ್ತೊಂದು ಗಾಡಿಯನ್ನು ಬಲವಂತವಾಗಿ ಹತ್ತಿಸುತ್ತಿರುತ್ತಾನೆ. ಕರ್ಮ ಯಾವಾಗ ಇಲ್ಲದಂತೆ ಹೋಗುತ್ತದೋ ಆಗ ಮೋಕ್ಷ ಲಭಿಸುತ್ತದೆ. ಏಕೆಂದರೆ! ಕರ್ಮ ಲಗೇಜ್ ನಮ್ಮ ಹತ್ತಿರ ಇರುವವರೆಗು ನಮ್ಮ ಡ್ರೈವರ್ ನಮ್ಮನ್ನು ಬಿಟ್ಟುಹೋಗುವುದಿಲ್ಲ. ಡ್ರೈವರ್ ಹೋದಾಗ ವಾಹನವನ್ನು ನೀನು ಹತ್ತಬೇಕಾದ ಕೆಲಸವಿಲ್ಲ. ಡ್ರೈವರ್ (ಮಾಂತ್ರಿಕನು) ಇರುವವರೆಗೂ ಆತನು ನಿನ್ನನ್ನು ಗಾಡಿಯಲ್ಲಿಯೇ ಕೂರಿಸುತ್ತಾನೆ. ಜೀವಿಯ ಹತ್ತಿರ ಕರ್ಮಚೀಲ ಖಾಲಿ ಆದರೆ, ನೀನು ಜೀವಿಯನ್ನು ಬಿಡಬೇಕೆಂದು ಜೀವಿಯನ್ನು ವಾಹನವನ್ನು ಹತ್ತಿಸಬೇಡವೆಂದು ಡ್ರೈವರ್‌ಗೆ ದೇವರ ಹತ್ತಿರದಿಂದ ಶಾಸನ ಮಾಡಲಾಗಿದೆ. ಆದ್ದರಿಂದ ಎಲ್ಲಿ ಕರ್ಮಹೊಂದಿರುವ ಜೀವಿ ಇರುತ್ತಾನೊ, ಅಲ್ಲಿ ಜೀವಿಗೆ ವಾಹನವಿರುತ್ತದೆ ಮತ್ತು ಅದನ್ನು ನಡೆಸುವ ಮಾಂತ್ರಿಕನಿರುತ್ತಾನೆ ಪ್ರತಿ ಜೀವಿಗೆ ಒಂದು ಶರೀರ, ಒಬ್ಬ ಡ್ರೈವರ್ ಇರುವುದು ಸರ್ವಸಾಧಾರಣ.

ಭೂಮಿ ಮೇಲೆ ಕೆಲವರು ಮೋಕ್ಷಕ್ಕೋಸ್ಕರ ಪ್ರಯತ್ನ ಮಾಡುತ್ತಿದ್ದಾರೆ. ಅದಕ್ಕೋಸ್ಕರ ಅವರು ಅನೇಕ ಮಾರ್ಗಗಳನ್ನು ಅವಲಂಭಿಸುತ್ತಿದ್ದಾರೆ. ಯಾರು ಎಷ್ಟು ಮಾರ್ಗಗಳನ್ನು ಅವಲಂಭಿಸಿದರು ಕರ್ಮ ವಿಷಯ ತಿಳಿಯದೆ, ಶರೀರವನ್ನು ನಡೆಸುವವನ ವಿಷಯ ತಿಳಿಯದೆ ಮೋಕ್ಷ ಸಿಗುವುದಿಲ್ಲ. ಕರ್ಮ ಚೀಲ ಇರುವವರೆಗು ಡ್ರೈವರ್ ಬಿಡುವುದಿಲ್ಲವೆಂದು ತಿಳಿಯದವರು, ಶರೀರದಲ್ಲಿನ ಧ್ಯಾಸವನ್ನು ಬಿಟ್ಟು, ಹೊರಗಿನ ಭಕ್ತಿಯಲ್ಲಿ ಬಿದ್ದುಹೋಗಿ, ಅನೇಕ ಭಕ್ತಿ ಮಾರ್ಗ ಗಳನ್ನು ಆಚರಿಸುತ್ತಿದ್ದಾರೆ. ಮೋಕ್ಷಕ್ಕೋಸ್ಕರ ಯಜ್ಞಗಳು ಮಾಡುವವರು, ದಾನಗಳು ಮಾಡುವವರು, ವೇದಪಠನಗಳು ಮಾಡುವವರು, ತಪಸ್ಸುಗಳು ಮಾಡುವವರು

ಇದ್ದಾರೆ. ಕೆಲವರು ಮಾಡಿಸುವವರು ಇದ್ದಾರೆ. ಈ ನಾಲ್ಕು ವಿಧಗಳ ಭಕ್ತಿ ಮಾರ್ಗಗಳನ್ನು ಆಚರಿಸುವ ಯಾರಿಗಾದರೂ ಮೋಕ್ಷ ಎಂದಿಗೂ ಲಭಿಸುವುದಿಲ್ಲವೆಂದು ಭಗವದ್ಗೀತೆಯಲ್ಲಿ ವಿಶ್ವರೂಪಸಂದರ್ಶನ ಯೋಗದಲ್ಲಿ 48, 53 ಶ್ಲೋಕಗಳಲ್ಲಿ ವಿವರವಾಗಿ ಇದೆ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ವಿವರ ತಿಳಿಯದೆ ಬಹಳಜನ ಮೋಸಹೋಗಿ, ನಿಜವಾದ ದೈವಮಾರ್ಗದಲ್ಲಿ ಪ್ರಯಾಣಿಸಲಾರದೆ ಹೋಗುತ್ತಿದ್ದಾರೆ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದಂತೆ ಶರೀರಾಂತರ್ಗತದಲ್ಲಿ ನೋಡಿಕೊಳ್ಳದೆ, ಶರೀರವನ್ನು ನಡೆಸುತ್ತಾ ನಿನ್ನ ಪಕ್ಕದಲ್ಲಿರುವ ಶರೀರವಾಹಕ ಮಾಂತ್ರಿಕನನ್ನು ತಿಳಿಯದಂತಿರುವವರೆಗು ಯಾರಿಗೂ ಮೋಕ್ಷ ಲಭಿಸುವುದಿಲ್ಲ. ಕರ್ಮ ಸಿದ್ಧಾಂತವನ್ನು ತಿಳಿಯದವರು, ಶರೀರದಲ್ಲಿದ್ದು ಕರ್ಮ ಪ್ರಕಾರ ಶರೀರವನ್ನು ನಡೆಸುವವನನ್ನು ತಿಳಿಯದವರು, ಭೂಮಿಮೇಲೆ ಎಷ್ಟೋ ದೊಡ್ಡ ಸ್ವಾಮೀಜಿಗಳಾದರೂ, ಎಷ್ಟು ದೊಡ್ಡ ಪೀಠಾಧಿಪತಿಗಳಾದರು ಗಾಡಿ ಹತ್ತಬೇಕಾಗಿದ್ದೇ ಪ್ರಯಾಣ ಮಾಡಬೇಕಾಗಿದ್ದೇ. ದೇವರ ಲೆಕ್ಕದಲ್ಲಿ ಸಾಮಾನ್ಯನಾದರು ಸ್ವಾಮೀಜಿಗಳಾದರು ಎಲ್ಲರೂ ಸಮಾನವೇ. **ಜ್ಞಾನಪಥದ ಪ್ರಕಾರ ನಡೆಯುವ ಸಾಮಾನ್ಯನಾದರು ಮೋಕ್ಷ ಪಡೆಯಬಲ್ಲನು. ಜ್ಞಾನಪಥದ ಪ್ರಕಾರ ನಡೆಯದ ಸ್ವಾಮೀಜಿಯಾದರು ಮೋಕ್ಷ ಪಡೆಯಲಾರನು.** ಯಂತ್ರವನ್ನು ನಡೆಸುವ ಯಾಂತ್ರಿಕನಿರುವಂತೆ, ಶರೀರ ಯಂತ್ರವನ್ನು ನಡೆಸುವ ಮಾಂತ್ರಿಕನು ಇದ್ದಾನೆಂದು ಗ್ರಹಿಸಿ, ಕರ್ಮ ಇರುವವರೆಗು ಮಾಂತ್ರಿಕನು ನಮ್ಮನ್ನು ಬಿಡುವುದಿಲ್ಲವೆಂದು ತಿಳಿದು, ಶರೀರದಲ್ಲಿಯೇ ಇರುವ ಕರ್ಮವನ್ನು, ಶರೀರದಲ್ಲಿಯೇ ಇರುವ ಮಾಂತ್ರಿಕನಾದ ಮಿಸ್ಟರ್ X ನನ್ನು ತಿಳಿದು, ಖಾಲಿಯಾದ ಕರ್ಮಚೀಲವನ್ನು ಮಿಸ್ಟರ್ X ಗೆ ಕೊಟ್ಟ ದಿನ ನಿನಗೆ ಮೋಕ್ಷ ಲಭಿಸುತ್ತದೆ. ಆಗ ಮರಣಿಸಿದವನಿಗೆ ಆ ಮರಣ ಅಂತಿಮ ಮರಣ ಆಗುತ್ತದೆ. ಅಲ್ಲಿಯವರೆಗು ಒಳಗಿನ ವಿವರವೂ ವಿಷಯವು ತಿಳಿಯದೆ, ಕರ್ಮಚೀಲವನ್ನು ಮಾಂತ್ರಿಕನಿಗೆ ಕೊಡದೆ ನಿನಗೆ ಎಷ್ಟು ಸಲ ಮರಣ ಬಂದರು ಅದು ಅಂತಿಮ ಮರಣ ಅಲ್ಲ.

ಕೊನೆಯ ಮರಣ ಎಂದರೆ ಏನೋ ಈಗ ತಿಳಿದಿದೆ. ಸ್ವಲ್ಪ ಮಂದಿ ಸ್ವಾಮೀಜಿಗಳು ಮರಣಿಸಿದಾಗ ನಮ್ಮ ಗುರುಗಳು ಮೋಕ್ಷ ಹೊಂದಿದ್ದಾನೆಂದು ಆ ಸ್ವಾಮೀಜಿಯ ಶಿಷ್ಯರು ಅಂದುಕೊಳ್ಳುವುದು ನಡೆಯುತ್ತಿದೆ. ಆಗ ಮರಣಿಸಿದ ಆ ಸ್ವಾಮೀಜಿ ಕೊನೆಯ ಮರಣಹೊಂದಿದ್ದಾನೆಂದು ನಾವು ಅಂದುಕೊಳ್ಳಬಹುದು. ಹಾಗೆ ಅಂದುಕೊಳ್ಳುವುದರಲ್ಲಿ ನಿಜ ಇರಬಹುದು ಅಥವಾ ಅಸತ್ಯವು ಇರಬಹುದು. ಕೊನೆಯ ಮರಣ ಹೊಂದದವನನ್ನು ಸಹ ಆತನು ಮೋಕ್ಷ ಹೊಂದಿದ್ದಾನೆಂದು ತಪ್ಪಾಗಿ ನಾವು ಅಂದುಕೊಳ್ಳಬಹುದು. ನಿಜವಾಗಲು ಕೊನೆಯಮರಣ ಹೊಂದಿ ಮೋಕ್ಷ ಹೋದವನನ್ನು ತಪ್ಪಾಗಿ ತಿಳಿದು ಆತನು ಮೋಕ್ಷವನ್ನು ಹೊಂದಲಿಲ್ಲವೆಂದು ಸಹ ಅಂದುಕೊಳ್ಳಬಹುದು. ಇಂತಹ ಗೊಂದಲ ನಡೆದು, ಮರಣಿಸಿದವರಲ್ಲಿ ಯಾರು ಮೋಕ್ಷ ಹೊಂದಿದ್ದಾರೋ, ಯಾರು ಹೊಂದಲಿಲ್ಲವೋ ಸಹ ಮನುಷ್ಯರಿಗೆ ತಿಳಿಯದಂತೆ ಹೋಗುತ್ತದೆಂದು ಊಹಿಸಿದ ಭಗವಂತನು, ತನ್ನ ಭಗವದ್ಗೀತೆಯಲ್ಲಿ ಕೊನೆಯ ಮರಣವನ್ನು ಕುರಿತು ಅಕ್ಷರ ಪರಬ್ರಹ್ಮಯೋಗದಲ್ಲಿ ಕೊನೆಯಲ್ಲಿ 23ನೇ ಶ್ಲೋಕದಿಂದ 28ನೇ ಶ್ಲೋಕದವರೆಗೂ ಹೇಳಿದ್ದಾನೆ.

ಮೊದಲು 23 ಶ್ಲೋಕದಲ್ಲಿ ಏನು ಹೇಳಿದ್ದಾನೆಂದು ನೋಡಿದಾಗ ಹೀಗೆ ಇದೆ.

**ಅಧ್ಯಾಯ 8, ಶ್ಲೋಕ : 23**

**ಶ್ಲೋ॥** ***ಯತ್ರಕಾಲೇ ತ್ವನಾವೃತ್ತಿ ಮಾವೃತ್ತಿಂ ಚೈವ ಯೋಗಿನಃ ।***
***ಪ್ರಯಾತಾ ಯಾಂತಿ ತಂ ಕಾಲಮ್ ವಕ್ಷ್ಯಾಮಿ ಭರತರ್ಷಭ॥***

ಯೋಗಿಗಳಾದವರು ಯಾವಾಗ ಮರಣಿಸಿದರೆ ಮತ್ತೆ ಹುಟ್ಟುತ್ತಾರೋ, ಯಾವಾಗ ಮರಣಿಸಿದರೆ ಮತ್ತೆ ಹುಟ್ಟುವುದಿಲ್ಲವೋ ಆ ಕಾಲವನ್ನು ಕುರಿತು ಹೇಳುತ್ತೇನೆ ಕೇಳು.

ಈಗ ಇದು ಶಾಸ್ತ್ರಬದ್ಧವಾದ ವಿಷಯವಾಗಿ ಎಲ್ಲರೂ ಗ್ರಹಿಸಬೇಕು. ಭಗವಂತನು ಹೇಳುವ ಕಾಲವನ್ನು ತಿಳಿದುಕೊಂಡ ನಂತರ ಊಹಾಪೋಹಗಳಿಗೆ ಯಾವ ದಾರಿ ಇರುವುದಿಲ್ಲ. ಎಂತಹವರ ಮರಣವಾದರು ಭಗವಂತನು ಹೇಳಿದ ಸಮಯದೊಂದಿಗೆ ಹೋಲಿಸಿ ನೋಡಿ ಅದು ಕೊನೆಯ ಮರಣವೊ ಅಲ್ಲವೊ, ಎಂದು ತೀರ್ಮಾನಿಸಿ ಹೇಳಿಕೊಳ್ಳಬಹುದು. ಮೇಲಿನ ಶ್ಲೋಕದಲ್ಲಿ **"ಯೋಗಿನಃ"** ಎಂದು ಈ ಕಾಲ ಯೋಗಿಗಳಿಗೆ ಮಾತ್ರವೇ ಅನ್ವಯಿಸುತ್ತದೆ ಎಂದು ಹೇಳಿದ್ದಾನೆ. ಆದ್ದರಿಂದ ಯೋಗಿಗಳಾದವರಲ್ಲಿ ಪೂರ್ತಿ ಕರ್ಮ ಮುಗಿದುಹೋದವರು ಯಾರು? ಕರ್ಮ ಮುಗಿಯದೆ ಇನ್ನು ಉಳಿದವರು ಯಾರೆಂದು ಸಹ ಗ್ರಹಿಸಬಹುದು. ಯಜ್ಞಯಾಗಾದಿಗಳು ಮಾಡುವವರು, ವೇದಪಠನೆ ಮಾಡುವವರು, ದಾನಗಳು ಮಾಡುವವರು, ತಪಸ್ಸುಗಳು ಮಾಡುವವರು ಯೋಗಿಗಳು ಅಲ್ಲವೆಂದು, ಅವರು ಜನ್ಮಕ್ಕೆ ಹೊರತು ಮೋಕ್ಷಕ್ಕೆ ಹೋಗುವುದಿಲ್ಲವೆಂದು, ಅಂಥವರನ್ನು ನೋಡಬೇಕಾದ ಕೆಲಸವೇ ಇಲ್ಲವೆಂದು, ಗೀತೆಯಲ್ಲಿ ವಿಶ್ವರೂಪಸಂದರ್ಶನ ಯೋಗದಲ್ಲಿರುವ 48,53 ಶ್ಲೋಕಗಳ ಪ್ರಕಾರ ಹೇಳಬಹುದು. ಯಜ್ಞ, ವೇದ, ದಾನ, ತಪಗಳು ಮಾಡುವ ನಾಲ್ಕು ವಿಧದವರನ್ನು ಬಿಟ್ಟು ಯೋಗಿಗಳಾದವರಲ್ಲಿ ಸಹ ಕರ್ಮ ಮುಗಿದುಹೋಗದೆ, ಡ್ರೈವರ್‌ನಿಂದ ಬಿಡುಗಡೆಯಾಗದೆ ಯಾರು ಮತ್ತೆ ಹುಟ್ಟುತ್ತಾನೊ, ಅವನದು ಕೊನೆಯ ಮರಣ ಅಲ್ಲವೆಂದು, ಯಾರ ಶರೀರವನ್ನು ನಡೆಸುವ ಡ್ರೈವರ್ ಅವನನ್ನು ಬಿಟ್ಟು ಹೋಗುತ್ತಾನೊ, ಯಾರ ಕರ್ಮ ಪೂರ್ತಿ ಮುಗಿದುಹೋಗುತ್ತದೋ ಅಂತಹ ಯೋಗಿ ಹೊಂದಿದ ಮರಣ ಕೊನೆಯ ಮರಣವಾಗುತ್ತದೆಂದು ತಿಳಿಯಬೇಕು. ಕೊನೆಯ ಮರಣವನ್ನು ಯೋಗಿಗಳಾದವರು ಸಹ ಯಾವ ಸಮಯದಲ್ಲಿ ಹೊಂದುತ್ತಾರೋ ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ 24ನೇ ಶ್ಲೋಕದಿಂದ ಭಗವಂತನೇ ಹೇಳಿದ್ದಾನೆ. ಆದ್ದರಿಂದ ನಾನು ಆ ಸಮಯವನ್ನು ಕುರಿತು

ಹೇಳಬೇಕಾದ ಅವಶ್ಯಕತೆ ಇಲ್ಲ. ಭಗವದ್ಗೀತೆ ಓದಿದರೆ ನಮ್ಮ ಡ್ರೈವರ್ ಆದ ಮಿಸ್ಟರ್ X ಸಹ ತಿಳಿಯುತ್ತಾನೆಂದು ತಿಳಿಸುತ್ತಿದ್ದೇವೆ. ನಾವು ಭಗವದ್ಗೀತೆಯನ್ನು ಬಹಳಸಲ ಓದಿದ್ದೇವೆ, ನೀವು ಹೇಳಿದಂತೆ ಕೊನೆಯ ಮರಣವನ್ನು ಕುರಿತು, ಶರೀರವನ್ನು ನಡೆಸುವವನನ್ನು ಕುರಿತು ಏನೂ ಇಲ್ಲವೆ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! **ಆಧ್ಯಾತ್ಮಿಕ ರಂಗದಲ್ಲಿ ವಿಪ್ಲವಾತ್ಮಕ ರಚನೆಯಿಂದ ಕೂಡಿಕೊಂಡ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿರಿ. ಎಲ್ಲಾ ಅರ್ಥವಾಗುತ್ತದೆ.**

**ಸಮಾಪ್ತ**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**

**ಸತ್ಯವನ್ನು ಸಾವಿರಜನ ಅಲ್ಲ ಎಂದರೂ ಅದು ಅಸತ್ಯವಲ್ಲ.**

**ನಿಜವಾದ ರಚನಕಾರರು ಯಾರೋ ಗೊತ್ತಾ?**

**ಸಂಚಲನಾತ್ಮಕ ರಚನಕಾರ**

| | | |
|---|---|---|
| ಸಂ | = | ಒಳ್ಳೆ |
| ಚಲನೆ | = | ಚೈತನ್ಯ ಹೊಂದಿದ |
| ಆತ್ಮಕ | = | ಎರಡನೆ ಆತ್ಮ |
| ರಚನಕಾರ | = | ಬರೆಸಿದವನು |

